ಪ್ರಥಮ ಮುದ್ರಣ



ಪ್ರಕಾಶಕರು:
ಪುಸ್ತಕ ಮಂದಿರ
ಬಸವನ ಗುಡಿ--ಬೆಂಗಳೂರು ೪.



ಬೆಲೆ : ಒಂದೂವರೆ ರೂಪಾಯಿ.

ಮುದ್ರಕರು
ಎಂ. ಲಕ್ಷ್ಮೀನಾರಾಯಣ್
ಶ್ರೀನಿವಾಸ ಮುದ್ರಣಾಲಯ— ಶಂಕರಪುರ, ಬೆಂಗಳೂರು-೪.

# ಮುನ್ನುಡಿ

ಮಾನವ ಜೀವನದ ಔನ್ನತ್ಯ, ಸಾರ್ಥಕತೆಗಳನ್ನು ಕುರಿತು ಸಾವಿರಾರು ವರ್ಷಗಳಿಂದ ಕೋಟ್ಯಾಂತರ ಪುಟಗಳಿಗಿಂತ ಹೆಚ್ಚಾಗುವಷ್ಟು ಸಾಹಿತ್ಯವು ಬೆಳೆದಿದೆ. ಆದರೆ ನಿಷ್ಪಕ್ಷಪಾತವಾಗಿ ನೋಡುವ ತಾರ್ಕಿಕನ ತೀಕ್ಷ್ಣವಾದ ಪರಿಶೀಲನೆಯ ಮುಂದೆ ಅವು ಗಳಿಗೆಯೂ ನಿಲ್ಲುವುದಿಲ್ಲ!

ಜೀವನವು ಸನ್ನಿವೇಶಗಳಿಂದ ರೂಪಗೊಳ್ಳುತ್ತದೆ. ನಿಮಗದು ಸಮಾಧಾನವಾಗದಿದ್ದರೆ ಯಾರೂ ಕಾಣದ ಅದೃಷ್ಟದ ಸುಳಿಗಳಿಗೆ ಸಿಕ್ಕಿ[illegible]ತ್ತವೆ ಎಂದುಕೊಳ್ಳಿರಿ. ಜೀವನ ರಂಗದಲ್ಲಿ ಮಾನವ ವ್ಯಕ್ತಿಯು [illegible]ಲಿಯಂತೆ ಆಡ್ತಾಡುತ್ತದೆ.

ಅರಗಳಿಗೆ ಗಮನಿಸಿ ನೋಡಿ. ವಿಶ್ವದಾದಿಯಿಂದ ಆಗಿ ಹೋಗಿರುವ ಮಾನವರೆಷ್ಟು? ಅವರಲ್ಲಿ [illegible]ದಿ ಅಮರರಾಗಿ ನಮ್ಮ ಕಣ್ಣುಮುಂದೆ [illegible]ಲ್ಲುತ್ತಾರೆ? ಅಸಂಖ್ಯಾತ [illegible] ಮಣ್ಣಿನಲ್ಲಿಯೇ ಹುಟ್ಟಿ, ಮಣ್ಣಿನಲ್ಲಿಯೇ ಬೆರೆತು ಹೋಗುತ್ತಾರೆ.

ಇದೇ ವಾಸ್ತವ ಜೀವನ.

ಮನುಷ್ಯ ಬದುಕಿರುವವರೆವಿಗೆ ಏನೋ ಸಾಧಿಸುತ್ತೇನೆಂದು ಕೊಳ್ಳುತ್ತಾನೆ. ಆದರೇನು ಸಾಧಿಸುತ್ತಾನೆ? ನಾವೇನು ಸಾಧಿಸುತ್ತೇವೆ? ಏನು ಸಾಧಿಸಬಲ್ಲೆವು?

ಕಾದಂಬರಿಗಳಲ್ಲಿ ಬರುವ ವ್ಯಕ್ತಿ ಜೀವನಗಳೂ ಅಷ್ಟೆ!

ಆದರೆ ಬರಹಗಾರರು ತಮ್ಮ ಕಾದಂಬರಿಗಳಲ್ಲಿ ಬರುವ ವ್ಯಕ್ತಿಗಳು ಅಮಾನುಷರಾಗಿರಬೇಕೆಂದೂ, ಆದರ್ಶ ಪುರುಷರಾಗಿರಬೇಕೆಂದೂ, ನಾಯಕ ನಾಯಕಿಯರು ವಾಚಕರ ಮನಃಪಟಲದಿಂದ ಅಳಿಸಿ ಹೋಗದಿರಬೇಕೆಂದೂ ಆಶೆಯಿಟ್ಟುಕೊಳ್ಳುತ್ತಾರೆ.

ಆ ಆಶೆಯು ಮರಿಮರೀಚಿಕೆ!

ನಿಮ್ಮ ಕೈಯಲ್ಲಿರುವ ಈ ಕಾದಂಬರಿಯಲ್ಲಿ ಬರುವ ವ್ಯಕ್ತಿಗಳು ಅಮಾನುಷರಲ್ಲ. ಆದರ್ಶ ಈ ವ್ಯಕ್ತಿಗಳಲ್ಲ. ಈ ಕಥಾರಂಗದಲ್ಲಿ ಬಂದು ಹೋಗುವವರು ಮುಂದೆಂದೂ ನಿಮ್ಮ ನೆನಪಿನಲ್ಲಿರುವುದಿಲ್ಲ.

ಬಂಧು ಮಿತ್ರರುಗಳೇ ನಿಮ್ಮ ಜ್ಞಾಪಕದಿಂದ ಅಳಿಸಿ ಹೋಗುವಾಗ ಈ ಅನಿಲ, ಅರಸುರತ್ನೆ, ಮಂಜುಳಾ, ಕನಕಂ ನಿಮ್ಮ ಚಿತ್ತಭಿತ್ತಿಯಲ್ಲಿ ನಿಲ್ಲು ವರೆಂದು ನಾನು ಹೇಗೆ ತಾನೇ ನಿಮಗೆ ಭರವಸೆಯನ್ನು ಕೊಡಲಿ ? ಇವರು ಮಾಡುವ ಕೆಲಸಗಳು ಆದರ್ಶವಾದವುಗಳೆಂದೂ, ಮಹಾ ಸಾಧನೆಗಳೆಂದೂ ಯಾವ ಬಾಯಿಂದ ಹೇಳಲಿ?

ಹಾಗೆಯೇ ನಾನೇನು ಸಿದ್ಧಲೇಖಕನಲ್ಲ. ಇದು ಮಹತ್ ಕಾದಂಬ ರಿಯೂ ಅಲ್ಲ. ರೈಲ್ವೆ ಪ್ರಯಾಣದಲ್ಲಿ, ಬಸ್‌ಗಾಗಿ ಕ್ಯೂ ನಿಂತಿರುವಾಗ, ಏನೋ ಬೇಸರವಾದಾಗ ಓದಲು ಹಿತವಾಗಿದ್ದರೆ ಅದೇ ದೊಡ್ಡದು.

ಸಾಹಿತ್ಯದಲ್ಲಿ ಈ ಕಾದಂಬರಿ ಅಮರ ಕೃತಿಯಾಗಿ ನಿಲ್ಲುವುದೂ ಇಲ್ಲ. ಆ ಬಯಕೆಯೂ ನನಗಿಲ್ಲ. ಓದಿದ ಕೂಡಲೇ ನಿಮಗಿದು ಮರೆತುಹೋಗಿ ಪುನಃ ಇನ್ನೊಮ್ಮೆ ಓದಲು ಪ್ರಯೋಜನವಾದರೆ ಇದು ಸಾರ್ಥಕವಾದಂತೆ.

ಈ ಪುಸ್ತಕದ ಹಾಳೆ ಹಾಳೆಗಳನ್ನೂ, ಘಟ್ಟ ಘಟ್ಟಗಳನ್ನೂ ಓದಿ ಕೊಂಡು, ಓದಿಸಿ ಕೇಳಿ, ಸೂಕ್ತ ಸಲಹೆಗಳಿತ್ತ ಗೆಳೆಯ ಡಿ. ಕಾಮೇಶ್ ರವರಿಗೆ ನಾನು ಚಿರಋಣಿ.

ಶಂಕರಪುರ ಬೆಂಗಳೂರು-೪ ಎಂ. ರಾಮಮೂರ್ತಿ

# ಅರ್ಪಣೆ

ತಾವು ಗೀಚಿದುದೆಲ್ಲವೂ
ಸಾಹಿತ್ಯವೆಂಬ ಭ್ರಾಂತಿಯಿಂದ
ಆತ್ಮವಂಚನೆ ಮಾಡಿಕೊಂಡಿರುವ
ಕನ್ನಡದ ನಿರ್ಭಾಗ್ಯ ಬರಹಗಾರರಿಗೆ-

# ೧

ಶ್ಯಾಮಲಮ್ಮ ಮಂಚದ ಮೇಲೆ ತನ್ನ ಪಕ್ಕದಲ್ಲಿ ಕೂರಿಸಿಕೊಂಡು ಅವನ ಗುಂಗುರು ಕೂದಲುಗಳ ನಡುವೆ ಕೈ ಬೆರಳುಗಳನ್ನಾಡಿಸುತ್ತಾ " ಮಗೂ. ನಿನ್ನ ಹೆಸರೇನು?" ಎಂದು ಕೇಳಿದಳು.

" ಹನುಮಂತು "

ಆಕೆ ಹನುಮಂತನನ್ನು ಮೊಟ್ಟ ಮೊದಲು ನೋಡಿದುದು ದೇವದಾಸೀ ನಾಟಕದಲ್ಲಿ ಅವನು ಶಿರೋಮಣಿ ಪಾತ್ರವನ್ನು ವಹಿಸಿದ್ದಾಗ. ನೋಡಿದೊಡನೆಯೇ ಅವಳ ಮನಸ್ಸು ಚಾಂಚಲ್ಯ ಹೊಂದಿತು. ಪ್ರೌಢೆಯಾದ ಅವಳು ಹರೆಯದಲ್ಲಿ ಕಾಲಿಡುತ್ತಿದ್ದವನನ್ನು ಕರೆದು ಮಾತನಾಡಿಸುವುದು ಕಷ್ಟವಾಗಿರಲಿಲ್ಲ. ಆ ದಿನ ಬೀದಿಯಲ್ಲಿ ಹೋಗುತ್ತಿದ್ದ ಹನುಮಂತುವನ್ನು ಕರೆದು ಮಾತನಾಡಿಸುತ್ತಾ ಕುಳಿತುಕೊಂಡಳು.

" ನಿನ್ನ ಮೇಲೆ ನನಗೆ ಯಾಕಿಷ್ಟು ವಿಶ್ವಾಸ ಗೊತ್ತೇ ?" ಎಂದು ಅವನ ಹಾರುವ ಗುಂಗುರು ಕೂದಲು, ಪ್ರಕಾಶ ಮಾನವಾದ ಚಂಚಲ ನೇತ್ರಗಳು, ಗಳಿಗೆಗೊಮ್ಮೆ ಹಾರುವ ಹುಬ್ಬುಗಳನ್ನು ಮನದಣಿಯ ನೋಡುತ್ತಾ ಕೇಳಿದಳು.

" ನೀವು ನನ್ನ ಪಾರ್ಟು ನೋಡಿ ಮೆಚ್ಚಿಕೊಂಡಿರಬಹುದು "

ಅದೂ ನಿಜ! ದೇವದಾಸಿಯಲ್ಲಿ ಅವನು ವಹಿಸುತ್ತಿದ್ದ ಶಿರೋಮಣಿಯ

ಪಾತ್ರವನ್ನು ಶ್ಯಾಮಲಮ್ಮ ಮೆಚ್ಚಿಕೊಂಡಿದ್ದಳು. ಅವರೂ ಅದನ್ನು ಬೇರೆಯ ವಿಧವಾಗಿ ಹೇಳಿದಳು.

" ನನ್ನ ತಮ್ಮನೊಬ್ಬನಿದ್ದ. ಅವನು ತೇಟ್ ನಿನ್ನ ಹಾಗೆಯೇ ಇದ್ದ"

ಹನುಮಂತು ಮಾತನಾಡಲಿಲ್ಲ. ಅವನ ಮುಖದಲ್ಲಿ ಏನೋ ಯೋಚನೆಯು ಕಂಡ ಹಾಗಾಯಿತು.

" ಏನು ಯೋಚಿಸುತ್ತಿದ್ದೀ, ಹನುಮಂತು "

" ಒಬ್ಬರ ಹಾಗೆ ಒಬ್ಬರು ಇರುತ್ತಾರೆಯೇ?" ಎಂದು ಸಂದೇಹಿಸುತ್ತಾ ಹೇಳಿದ.

" ಇರದೇ ಏನು ? ನಿನ್ನ ಈ ತುಟಿಗಳಂತೂ ಅವನಂತೆಯೇ ಇವೆ " ಎಂದು, ಸದಾ ತುಂಟ ನಗುವಿನಿಂದ ಕೂಡಿರುತ್ತಿದ್ದ ಮೃದವಾದ ತುಟಿಗಳನ್ನು ತನ್ನ ಬೆರಳಿನಿಂದ ಸವರುತ್ತಾ ಹೇಳಿದಳು.

ಹನುಮಂತುವು ಮನಸ್ಸಿನಲ್ಲಿಯೇ " ಇರಬೇಕು. ಇಲ್ಲದಿದ್ದರೆ ಈಕೆ ಕರೆದು ಕಾಫೀ ತಿಂಡಿಗಳನ್ನೇಕೆ ಕೊಡುತ್ತಿದ್ದಳು, ಇಷ್ಟು ವಿಶ್ವಾಸವಾಗಿ ಕೂರಿಸಿಕೊಂಡು ಯಾಕೆ ಮಾತನಾಡಿಸುತ್ತಿದ್ದಳು ?" ಎಂದುಕೊಂಡನು.

"ನೀನು ಯಾವ ಕ್ಲಾಸಿನಲ್ಲಿ ಓದುತ್ತೀಯೆ?"

"ಇಲ್ಲ. ಸ್ಕೂಲಿಗೆ ಹೋಗುವುದಿಲ್ಲ."

"ಯಾಕೆ? ನೀನಿನ್ನೂ ಸಣ್ಣವನು. ಆಗಲೇ ಸ್ಕೂಲು ಬಿಟ್ಟು ಬಿಟ್ಟೆಯಾ?"

"ಫೇಲಾಯಿತು. "ನೀನು ಪಾರ್ಟಿ ಮಾಡಿಕೊಂಡಿರುವುದಕ್ಕೆ ಸರಿ. ನಿನಗೆ ಓದು ಒರುವುದಿಲ್ಲ" ಎಂದು ನಮ್ಮ ತಂದೆ ಬಿಡಿಸಿಬಿಟ್ಟರು.'

"ನಿಮ್ಮ ತಂದೆ ಯಾರು?"

"ಶ್ಯಾನುಭೋಗ ರಾಘವೇಂದ್ರರಾಯರು."

ಆತ ಯಾರೋ ಶ್ಯಾಮಲಮ್ಮನಿಗೆ ಗೊತ್ತಾಗಲಿಲ್ಲ. ಅವನ ಪೂರ್ವೋತ್ತರಗಳನ್ನು ತಿಳಿದುಕೊಳ್ಳುವ ಆಸಕ್ತಿಯಿಂದ "ನಿಮ್ಮ ಮನೆ ಎಲ್ಲಿ?" ಎಂದು ಕೇಳಿದಳು.

"ಕಚೇರಿಯ ಇತ್ತ ಕಡೆ."

"ನಿಮ್ಮ ತಾಯಿಯ ಹೆಸರೇನು, ಮಗೂ?"

"ನನಗೆ ತಾಯಿಯಿಲ್ಲ. ನಾನು ಹುಟ್ಟಿದಾಗಲೇ ಸತ್ತುಹೋದರಂತೆ."

"ಅಯ್ಯೋ, ಪಾಪ. ಮನೆಯಲ್ಲಿ ಯಾರು ಯಾರಿದ್ದೀರಿ?"

"ನಾನು. ನಮ್ಮಕ್ಕ, ಅಪ್ಪ."

"ನಿಮ್ಮಕ್ಕ?"

"ಅವರ ಗಂಡ ಸತ್ತುಹೋದ ನಂತರ ನಮ್ಮ ಮನೆಯಲ್ಲಿಯೇ ಇದ್ದಾರೆ."

"ನಿಮ್ಮಕ್ಕ ನಿನ್ನನ್ನು ಓದಿಸಬೇಕೆಂದು ನಿಮ್ಮಪ್ಪನಿಗೆ ಹೇಳಲಿಲ್ಲವೇ?"

"ನಮ್ಮಪ್ಪನಿಗೆ ಹೇಳುವುದೇನು ಬಂದಿತು? ಬೇಕಾಗಿದ್ದರೆ ಅವಳೇ ಓದಿಸಬಹುದಾಗಿದ್ದಿತು."

ಶ್ಯಾಮಲಮ್ಮನಿಗೆ ಅವನು ಹೇಳಿದುದು ಪೂರಾ ಅರ್ಥವಾಗಲಿಲ್ಲ. ಅವಳು "ಹಾಗೆಂದರೇನು?" ಎಂದು ಕೇಳಿದಳು.

ಹನುಮಂತುವು ತನ್ನ ತಂದೆಗೆ ಬರುವ ಪ್ರೋಟಿನಿಂದ ಜೀವನವು ಸಾಗುವುದಿಲ್ಲವೆಂದೂ, ಅಕ್ಕ ತವರುಮನೆಗೆ ವಾಪ್ಸು ಬರುತ್ತಾ ತಂದ ಹಣದಲ್ಲಿಯೇ ಜೀವನವು ನಡೆಯುತ್ತಿವೆ ಎಂದೂ ಮನೆಗೆಲ್ಲಾ ಅವಳೇ ಯಜಮಾನಿ ಎಂದೂ ಹೇಳಿ, "ಮೊದಲು ನಮ್ಮಕ್ಕನಿಗೆ ನಾನೆಂದರೆ ಬಹಳ ಪ್ರೀತಿಯಿತ್ತು. ಈಗ ಅವಳಿಗೆ ನನ್ನನ್ನು ಕಂಡರಾಗುವುದಿಲ್ಲ" ಎಂದು ಹೇಳಿದನು.

ಶ್ಯಾಮಲಮ್ಮ ಹನುಮಂತುವಿನ ಸ್ಥಿತಿಗೆ ಪಶ್ಚಾತ್ತಾಪವನ್ನು ಸೂಚಿಸುತ್ತಾ "ನನಗೆ ನಿನ್ನಂತಹ ತಮ್ಮನಿದ್ದಿದ್ದರೆ ಮಡಿಲಿನಲ್ಲಿ ಇಟ್ಟುಕೊಂಡು ಸಾಕುತ್ತಿದ್ದೆ" ಎಂದು ಹೇಳಿದಳು.

ಇದುವರೆವಿಗೆ ಶ್ಯಾಮಲಮ್ಮ ಪ್ರಶ್ನೆಗಳನ್ನು ಕೇಳುತ್ತಿದ್ದಳು. ಹನುಮಂತವು ಜವಾಬು ಕೊಡುತ್ತಿದ್ದನು. "ನಿನ್ನಂತಹ ತಮ್ಮನಿದ್ದಿದ್ದರೆ——" ಎಂದು ಹೇಳಿದ ನಂತರ ಅವಳು ಏನೂ ಕೇಳಲಿಲ್ಲ.

ಮೌನವಾಗಿದ್ದ ಆ ಗಳಿಗೆಯಲ್ಲಿ ಹನುಮಂತು ಶ್ಯಾಮಲಮ್ಮನ ಕಡೆಗೆ ನೋಡಿದನು. ಬಂದು ಬಹು ಹೊತ್ತಾಗಿದ್ದರೂ ಅವನು ಅವಳನ್ನು ಆ ದೃಷ್ಟಿಯಿಂದ ನೋಡಿರಲಿಲ್ಲ. ಈಗ ಶ್ಯಾಮಲಮ್ಮ ಅವನ ಕಣ್ಣಿಗೆಷ್ಟೋ ಚೆನ್ನಾಗಿ ಕಂಡು ಬಂದಳು. ತಾನು ನೋಡಿದ ಎಲ್ಲ ಹೆಂಗಸರಿಗಿಂತಲೂ ಅವಳು ಚೆನ್ನಾಗಿ ಕಂಡು ಬಂದಳು.

ಹನುಮಂತು ಶ್ಯಾಮುಲಮ್ಮನ ಮನೆಗೆ ಬಂದುದು ಅದೇ ಮೊದಲ ನೆಯ ಬಾರಿಯಾದರೂ ಆ ಬೀದಿಯಲ್ಲಿ ಹಲವಾರು ಬಾರಿ ಓಡಿಯಾಡಿದ್ದನು. ಅದೇ ಬೀದಿಯಲ್ಲಿ ವಾಸಮಾಡುತ್ತಿದ್ದ ಮಂಜುಳಾ ಅವನ ಮನಸ್ಸನ್ನು ಆಕರ್ಷಿಸಿದ್ದಳು. ಅವಳೆಲ್ಲಿಯಾದರೂ ಕಣ್ಣಿಗೆ ಬೀಳುತ್ತಾಳೆ ಏನೋ ಎಂಬ ಆಶೆಯಿಂದ ಅತ್ತ ಕಡೆ ಸುಳಿದಾಡುತ್ತಿದ್ದನು. ಹಾಗೆ ಸುಳಿದಾಡುತ್ತಿದ್ದಾಗಲೇ ಶ್ಯಾಮುಲಮ್ಮ ಹನುಮಂತುವನ್ನು ಕರೆದಿದ್ದು.

ಶ್ಯಾಮುಲಮ್ಮ ಅತ್ಯಂತ ರೂಪವತಿ ಎಂಬುದು ತೋರಿದ ಕೂಡಲೇ ಇವಳು ಹೆಚ್ಚು ರೂಪವತಿಯೋ ಮಂಜುಳೆಯು ಹೆಚ್ಚು ರೂಪವತಿಯೋ ಎಂದು ಮನಸ್ಸು ತೂಕ ಮಾಡಲಾರಂಭಿಸಿತು. ಆದರೆ ಬಹುಹೊತ್ತು ಹಾಗಿರಲಾಗಲಿಲ್ಲ.

ಅವನು ಶ್ಯಾಮುಲಮ್ಮನ ಕಡೆಗೆ ನೋಡಿದನು. ಅವಳ ಮುಖದಲ್ಲಿ ಏನೋ ಆತುರವು ಕಂಡು ಬರುತ್ತಿತ್ತು. ಅವಳ ಕಣ್ಣುಗಳು ತೇಲುತ್ತಿದ್ದವು. ತುಟಿಗಳು ಅದುರುತ್ತಿದ್ದವು. ತಾನು ತನ್ನ ಜನ್ಮದಲ್ಲಿಯೇ ನೋಡದಂತಹ ಏನನ್ನೋ ನೋಡುತ್ತಿರುವಂತೆ ಅವನಿಗೆ ಭಾಸವಾಯಿತು.

ತಿಂದುಬಿಡುವಂತೆ ಅವಳು ಒಂದು ಗಳಿಗೆ ನೋಡಿದಳು. ಮರುಕ್ಷಣದಲ್ಲಿಯೇ ಅವನನ್ನು ಎಳೆದುಕೊಂಡು ಆಲಂಗಿಸಿ ಮೇಲಿಂದ ಮೇಲೆ ಅವನ ಮುಖವನ್ನು ಚುಂಬಿಸಿದಳು. ಮೊದಲು ಆ ಚುಂಬನವು ಬೇಜಾರಾದಂತಾದರೂ ಕೂಡಲೇ ಅವನಿಗೆ ಅದರಿಂದ ಸುಖವಾಗುತ್ತಿರುವಂತೆ ಇದ್ದಿತು.

ಅಸಂಖ್ಯಾತವಾದ ಚುಂಬನಗಳ ನಡುವೆ ಶ್ಯಾಮುಲಮ್ಮನು " ಹನುಮಂತು, ನನಗೊಂದು ಮುತ್ತು ಕೊಡು " ಎಂದು ಕೇಳಿದಳು.

ಹನುಮಂತುವೂ ಅವಳನ್ನು ಚುಂಬಿಸಿದನು.

ಹಿಂದೆ ಹುಡುಗನಾಗಿದ್ದಾಗ ಅವನಕ್ಕ ಕೂಡಾ ಅವನನ್ನು ಮುತ್ತು ಕೊಡೆಂದು ಕೇಳುತ್ತಿದ್ದಳು. ಅವನು ಒಂದಾದ ನಂತರ ಒಂದರಂತೆ ಎರಡು ಕೆನ್ನೆಗಳನ್ನೂ ನಿಧಾನವಾಗಿ ಚುಂಬಿಸುತ್ತಿದ್ದನು.

ಆದರೆ ಅಂದಿನ ಆ ಚುಂಬನವು ಬೇರೆ. ಇಂದಿನ ಈ ಚುಂಬನವು ಬೇರೇ !

ಎರಡು ಗಳಿಗೆಗಳೊಳಗಾಗಿ ಅವರು ಅನುಭವಸ್ಥರಂತೆ ಪರಸ್ಪರ ಚುಂಬಿಸ ತೊಡಗಿದರು.

ಶ್ಯಾಮಲಮ್ಮನು ದೀರ್ಘಾಲಿಂಗನದಲ್ಲಿ ಹನುಮಂತುವಿನ ಎಳೆ ತುಟಿಗಳನ್ನು ಮೃದುವಾಗಿ ಕಚ್ಚಿ " ಹನುಮಂತು, ನಿನ್ನ ಮೇಲೆ ನನಗೆ ಯಾಕಿಷ್ಟು ವಿಶ್ವಾಸ ಗೊತ್ತೇ ?" ಎಂದು ಕೇಳಿದಳು.

# ೨

ಹನುಮಂತುವನ್ನು ಶ್ಯಾಮಲಮ್ಮ ಕರೆದು ಮಾತನಾಡಿಸಿದ ದಿನದಿಂದ ಅವನ ಜೀವನದಲ್ಲಿ ಹೊಸ ಪರಿವರ್ತನೆಯಾಯಿತು.

ಅವನ ತಂದೆ ರಾಘವೇಂದ್ರ ರಾಯರು ಬಡ ಸಂಸಾರಿಗಳು. ಹತ್ತಿರದ ಕೆಂಚೇನ ಹಳ್ಳಿಯ ಶ್ಯಾನುಭೋಗಿಕೆಯಿಂದ ಬರುತ್ತಿದ್ದ ಅಲ್ಪ ಸ್ವಲ್ಪ ಪೋಟಿಗೆಯನ್ನು ತಂದು ಮಂಡ್ಯದಲ್ಲಿ ಜೀವನ ಮಾಡುತ್ತಿದ್ದರು. ಗಂಡನನ್ನು ಕಳೆದುಕೊಂಡು ಮನೆ ಸೇರಿದ ಹೆಣ್ಣು ಮಗಳು ಗೋದಾವರಿಯು ಸಂಸಾರಕ್ಕೆ ದೊಡ್ಡ ಆಸರೆಯಾಗಿದ್ದಳು.

ಮಗ ಹುಟ್ಟಿದಾಗ ತಂದೆಗೆ ಐವತ್ತು ವರ್ಷಗಳ ಹತ್ತಿರ ಹತ್ತಿರವಾಗಿತ್ತು. ಇಪ್ಪತ್ತೈದು ವರ್ಷಗಳ ಕಾಲ ಮಕ್ಕಳಿಲ್ಲದೇ ಅಪರೂಪವಾಗಿ ಮಗನು ಹುಟ್ಟಿದರೆ ಎಂತಹವರಾದರೂ ಸಂತೋಷಿಸಬೇಕಾದ್ದೇ. ಆದರೆ ಸಂಸಾರದ ಕಷ್ಟಗಳಿಂದ ಜರ್ಜರಿತವಾದ ಅವರ ಮನಸ್ಸಿಗೆ ಪುತ್ರೋದಯದಿಂದ ಆನಂದವೇನೂ ಆಗದೇ, ಕಿತ್ತು ತಿನ್ನಲು ಇನ್ನೊಂದು ಜೀವ ಬಂದು ಸೇರಿತಲ್ಲಾ ಎಂಬುವಂತೆ ಆಯಿತು. ಇದರ ಮೇಲೆ ಹುಟ್ಟಿದ ತಿಂಗಳು ದಿನಗಳಲ್ಲಿಯೇ ತಾಯಿಯನ್ನು ಕಳೆದುಕೊಂಡು ಹನುಮಂತು ಮನೆಯಲ್ಲಿ ಎಲ್ಲರ ಮನಸ್ಸಿಗೂ ನೋವನ್ನು ಉಂಟುಮಾಡಿದ್ದನು.

ತಬ್ಬಲಿಯಾದ ಮಗು ಗತ್ಯಂತರವಿಲ್ಲದೇ ಅಕ್ಕನ ಮಡಿಲಿನಲ್ಲಿ ಬಂದು

ಬಿದ್ದಿದ್ದನು. ಬಾಲ್ಯದಲ್ಲಿಯೇ ಗಂಡನನ್ನು ಕಳೆದುಕೊಂಡು ಅವಳ ಜೀವನವೇ ಅಂಧಕಾರಮಯವಾಗಿತ್ತು. ಜೀವವಿರುವಷ್ಟು ದಿನ ಅರಹೊಟ್ಟೆ ತಿಂದುಕೊಂಡಿದ್ದು, ಒಂದು ದಿನ ಸತ್ತುಹೋಗುವುದಿಷ್ಟೇ ತನ್ನ ಕೆಲಸವೆಂದುಕೊಂಡಿದ್ದಳು. ಅಂತಹವಳಿಗೆ ಈ ಮಗುವು ಬಂದು ಮಡಲಿನಲ್ಲಿ ಬಿದ್ದಿದು ಹೊಸ ಕೆಲಸ ಕಂಡಂತೆ ಆಯಿತು. ಆ ಕೆಲಸದಲ್ಲಿ ಅವಳ ಮನಸ್ಸಿನ ದುಃಖವು ಸ್ವಲ್ಪಮಟ್ಟಿಗೆ ಮರೆಯಾಗುತ್ತಿದ್ದಿತೋ, ಏನೋ?

ಗೋದಾವರಿಗೆ ಹುಡುಗಿಯಾಗಿದ್ದಾಗಿನಿಂದಲೂ ಮಕ್ಕಳೆಂದರೆ ಎಷ್ಟೋ ಆಸೆ. ಮನೆಯಲ್ಲಿ ಅವಳನಂತರ ಮತ್ತಾರೂ ಹುಟ್ಟಲಿಲ್ಲ. ಮದುವೆಯು ಹೊಸದರಲ್ಲಿ ತನಗೇ ಮಕ್ಕಳಾಗುತ್ತವೆ– ಎಂಬ ಆಶಾಭಾವವು ಮನಸ್ಸಿನಲ್ಲಿ ಮೂಡಿದ್ದಿತು. ಗಂಡನು ಸತ್ತನಂತರ ಅದೂ ಅಳಿಸಿಹೋಯಿತು.

ಹನುಮಂತುವನ್ನು ಸಾಕಲು ತೊಡಗಿದಾಗ ಗುಪ್ತವಾಗಿದ್ದ ಆಸೆಯು ಮರುಕಳಿಸಿತು. ಪಾಪಭೀರುವಾದ ಅವಳು ತನ್ನದೇ ಮಗು ಎಂಬುವನ್ನು ಕನಸು ಮನಸಿನಲ್ಲಿಯೂ ಯೋಚಿಸಲು ಸಿದ್ಧವಾಗಿರಲಿಲ್ಲ. ಕೈಗೆ ಸಿಕ್ಕಿದ್ದನ್ನೇ ತನ್ನ ಮಗುವೆಂದುಕೊಂಡು ಅದರಿಂದಲೇ ತನ್ನ ಆಸೆಗಳನ್ನು ತೀರಿಸಿಕೊಳ್ಳಲು ಮೊದಲು ಮಾಡಿದಳು.

ಮಗುವಿನ ಆಟಪಾಟಗಳನ್ನು ನೋಡಿ ನಲಿಯುವಳು. ಅವರ ನಗುವನ್ನು ನೋಡಿ ಹರ್ಷಗೊಳ್ಳುವಳು. ಎರಡು ಹೊತ್ತೂ ಜೋಗುಳ ಹಾಡಿ ಮಲಗಿಸುವಳು. ಹೀಗವಳು ತನ್ನ ಜೀವನವನ್ನೇ ಮಗುವಿನ ಜೀವನದಲ್ಲಿ ಲೀನಗೊಳಿಸಿದ್ದಳು.

ಮಗುವು ಸ್ವಲ್ಪ ದೊಡ್ಡದಾಗಿ ತಪ್ಪು ಹೆಜ್ಜೆಗಳನ್ನಿಡುತ್ತಿದ್ದನು. ಒಂದು ದಿನ ಗೋದಾವರಿಯು ಅವನಿಗೆ ಸ್ನಾನ ಮಾಡಿಸುತ್ತಿದ್ದಳು. ಮೈತಲೆಗಳಿಗೆ ಚೆನ್ನಾಗಿ ಸೋಪು ಹಾಕಿ ತೊಳೆದಳು. ಜೌಷದಿಂದ ಒರೆಸುತ್ತಿದ್ದಾಗ ಹಠಾತ್ತನೆ ಅವಳ ಕೈಗಳು ಕೆಲಸಮಾಡಲಾರದೇ ಹೋದವು. ಅವಳು ನೆಟ್ಟಗಂಗಳಿಂದ ಮಗುವನ್ನು ನೋಡಲಾರಂಭಿಸಿದಳು. ಅವಳೆಂದೂ ಗಂಡುಸನ್ನು ಹಾಗೆ ನೋಡಿರಲಿಲ್ಲ. ಮಗು ಮನೆಯಲ್ಲಿ ಓಡಿಯಾಡುತ್ತಿದ್ದಾಗಲೂ ಅವಳಿಗೆ ಹಾಗೆ ನೋಡಬೇಕೆನ್ನಿಸಿರಲಿಲ್ಲ. ಬಹುಹೊತ್ತು ಎವೆಯಿಕ್ಕದೇ

ನೋಡುತ್ತಿದ್ದಳು. ಅನಂತರ ತನ್ನ ವಿಚಿತ್ರವಾದ ಆಸಕ್ತಿಯನ್ನು ನೋಡಿ ಅವಳಿಗೆ ಅವಮಾನವಾದಂತಾಯಿತು. ದೃಷ್ಟಿಯನ್ನು ಬೇರೆಯ ಕಡೆಗೆ ತಿರುಗಿಸಿ ಮಗುವಿನ ಮೇಲೆ ಚೌಕವನ್ನು ಹಾಕಿ ಮುಚ್ಚಿದಳು.

ಅಂದಿನಿಂದ ಗೋದಾವರಿ ಹನುಮಂತುವಿನಿಂದ ದೂರ ದೂರವಾಗಿಯೇ ಇರುತ್ತಿದ್ದಳು. ಹೀಗೆ ಹನುಮಂತು ಇದ್ದ ಅಕ್ಕನ ಪ್ರೀತಿಯನ್ನೂ ಕಳೆದುಕೊಂಡನು.

ತಂದೆಯಂತೂ ಅವನ ವಿಷಯದಲ್ಲಿ ಮೊದಲಿನಿಂದಲೂ ತಾತ್ಸಾರದಿಂದಲೇ ಇದ್ದರು. ಅಕ್ಕನು ದೂರ ದೂರವಾಗಿಯೇ ಇರುತ್ತಿದ್ದಳು. ಹನುಮಂತು ಬೆಳೆದು ಹುಡುಗನಾಗಿ ಹೊರಗೆ ಓಡಿಯಾಡಲಾರಂಭಿಸಿದ ಮೇಲಂತೂ ಪ್ರೀತಿ ಎಂಬುದನ್ನೇ ಅವನು ಅರಿಯಲಾರದವನಾದನು. ಅವನಿಗೆ ಎಲ್ಲಿಲ್ಲದ ಚಟುವಟಿಕೆ. ತುಂಟತನ. ನೆರೆಹೊರೆಯ ಮಕ್ಕಳೊಂದಿಗೆ ಸೇರಿ ಜಗಳವಾಡಿ ದಿನಕ್ಕೆ ನಾಲ್ಕು ಬಾರಿ ದೂರು ತರುವನು. ಸ್ಕೂಲಿಗೆ ಚಕ್ಕರ್ ಕೊಟ್ಟು ಪೋಲೀ ಹುಡುಗರೊಂದಿಗೆ ಅಲೆಯುವನು. ಕಬ್ಬು ಕೀಳುವುದಕ್ಕೆ ಹೋಗಿ ಪೆಟ್ಟು ತಿಂದು ಬರುವನು.

ಹೀಗಿದ್ದರೂ ಹನುಮಂತುವು ಯಾರ ಕಣ್ಣಿಗಾದರೂ ಬಿದ್ದರೆ ತಿರುಗಿ ನೋಡುವಂತಿದ್ದನು.

ಮುದ್ದು ಮುದ್ದಾಗಿದ್ದ ಹುಡುಗ ಕಂಪನಿಯ ನಾಟಕ ಸಂಘದವರ ಕಣ್ಣಿಗೆ ಬಿದ್ದನು. ಅವರು ನಾಟಕಗಳಲ್ಲಿ ಇವನಿಗೆ ಪುತ್ರನ ಪಾರ್ಟ್ ಕೊಟ್ಟು ಕುಣಿಸಿದರು. ಬರು ಬರುತ್ತ ನಾಟಕಗಳಲ್ಲಿ ಪ್ರಾಮುಖ್ಯವಾದ ಪಾತ್ರಗಳು ಸಿಕ್ಕಲು ಮೊದಲಾದುವು. ಹೀಗಾಗಿ ಹನುಮಂತೂ ಹಳ್ಳಿ ನಾಟಕ ಕಂಪನಿಯವರ ಕಣ್ಣಿಗೆ ಬಿದ್ದನು. ಅವರು ಹಿಡಿದುಕೊಂಡು ಹೋಗಿ ಅಭಿಮನ್ಯು, ಲವ ಮುಂತಾದ ಪಾರ್ಟುಗಳನ್ನು ಹಾಕಿಸಿದರು. ರಾಣೀ ಪಾರ್ಟುಗಳನ್ನು ಕೊಟ್ಟರು. ದೇವದಾಸೀ ನಾಟಕದಲ್ಲಿ ಶಿರೋಮಣಿಯ ಪಾತ್ರವಂತೂ ಅವನಿಗೇ ಮೀಸಲಾಗಿದ್ದಿತು.

ಯಾರಾದರೂ ನಾಟಕವಾಡುತ್ತಾರೆಂದು ಗೊತ್ತಾದರೆ ಹೇಗೋ ಅವರೊಂದಿಗೆ ಸೇರಿಬಿಡುತ್ತಿದ್ದನು. ನಾಟಕವಾಗುವವರೆವಿಗೆ ಕಾಲಕಳೆಯುತ್ತಿತ್ತು. ಅನಂತರ ಪುನಃ ಮನೆಗೆ ವಾಪ್ಸು ಬರುತ್ತಿದ್ದನು.

ಈ ಗಲಾಟೆಯಲ್ಲಿಯೇ ಅವನು ಸ್ಕೂಲು ಬಿಟ್ಟಿದ್ದು.

ಇಂತಹ ಸ್ಥಿತಿಯಲ್ಲಿ ಶ್ಯಾಮಲಮ್ಮನು ಕೈ ಹಿಡಿದದ್ದು ಹನುಮಂತುವಿಗೆ ದೇವರು ಕೊಟ್ಟ ವರಪ್ರಸಾದದಂತಿತ್ತು.

ಶ್ಯಾಮಲಮ್ಮನ ಯಜಮಾನರು ನಾಗಪ್ಪನವರಿಗೆ ಕಂಪನಿಯಲ್ಲಿ ಕೆಲಸವಿತ್ತು. ಅವರೂ ಸಹ ಮನೆಗೆ ಬಂದು ಹೋಗುತ್ತಿದ್ದ ಹನುಮಂತುವಿನ ಮುಗ್ಧವಾದ ಮುಖವನ್ನು ನೋಡಿ ಮಾರುಹೋದರು. ಕಂಪನಿಯಲ್ಲಿ ಅವನಿಗೊಂದು ಕೆಲಸ ಮಾಡಿಸಿಕೊಟ್ಟರು. ನಾಲ್ಕು ದಿನ ಕೆಲಸಕ್ಕೆ ಹೋದ ನಂತರ ಹೋಗಬೇಕಾಗಿ ಬರಲಿಲ್ಲ. ಮನೆಯಲ್ಲಿಯೇ ಇದ್ದುಕೊಂಡು ತಿಂಗಳಿಗೊಂದು ದಿನ ಹೋಗಿ ಸಂಬಳ ತರಲು ನಾಗಪ್ಪನವರು ಅನುಕೂಲ ಮಾಡಿಕೊಟ್ಟರು.

ಹನುಮಂತುವಿಗೆ ಆ ಮನೆಯಲ್ಲಿ ಮತ್ತೊಂದು ಆಸಕ್ತಿಯೂ ಇತ್ತು. ಆಗಾಗ ಶ್ಯಾಮಲಮ್ಮನನ್ನು ನೋಡಲು ಮಂಜುಳೆಯು ಬರುತ್ತಿದ್ದಳು. ದೂರದಿಂದ ನೋಡುವುದರಲ್ಲಿಯೇ ತೃಪ್ತನಾಗ ಬೇಕಾಗುತ್ತಿದ್ದ ಅವನು ಈಗ ಮಂಜುಳೆಯನ್ನು ಮನದಣಿಯ ನೋಡಬಹುದಾಗಿತ್ತು. ಅವಳೊಡನೆ ಮಾತನಾಡಬಹುದಾಗಿತ್ತು. ಕುಳಿತು ಅವಳೊಡನೆ ಚೌಕಾಭಾರವನ್ನೋ ಅಥವಾ ಕೇರಮ್ಮನ್ನೋ ಆಡಬಹುದಾಗಿತ್ತು.

ಈ ರೀತಿಯಾಗಿ ಶ್ಯಾಮಲಮ್ಮನನ್ನು ನೋಡಿದ ನಂತರ ಹನುಮಂತುವಿನ ಜೀವನಯಾತ್ರೆಯು ಸುಗಮವಾಗಿ ಸಾಗುತ್ತಿತ್ತು.

## ೨

ಹನುಮಂತುವು ಪಾಂಡವಪುರಕ್ಕೆ ನಾಟಕದಲ್ಲಿ ಪಾರ್ಟು ಮಾಡಲು ಹೋಗಿದ್ದನು. ಅಲ್ಲಿಯೇ ನಾಲ್ಕೈದು ದಿನಗಳು ಕಳೆದುವು. ಅವನ್ನು ಮುಗಿಸಿಕೊಂಡು ಮಂಡ್ಯಕ್ಕೆ ವಾಪ್ಸು ಬಂದನು. ಬಂದಾಗ ಮಧ್ಯಾಹ್ನ ಮೂರು ಗಂಟೆಯಾಗಿತ್ತು. ನೇರವಾಗಿ ಶ್ಯಾಮಲಮ್ಮನ ಮನೆಗೆ ಬಂದನು.

ಅವನು ಬಂದಾಗ ಬೀದಿಯ ಬಾಗಿಲು ತೆಗೆದಿತ್ತು. ಕೆಲಸದವಳು ಹಜಾರದಲ್ಲಿ ಕುಳಿತು ಅಕ್ಕಿ ಮಾಡುತ್ತಿದ್ದಳು. ಬಂದು ಶ್ಯಾಮಲಮ್ಮ ಎಲ್ಲಿದ್ದಾಳೆಯೋ ಎಂದು ನೋಡಿದನು. ಅವಳೆಲ್ಲಿಯೂ ಇರುವ ಸುಳಿವು ಕಂಡು ಬರಲಿಲ್ಲ.

"ಮಾರಮ್ಮ! ಅಮ್ಮಾವರು ಎಲ್ಲಿ?" ಎಂದು ಕೇಳಿದನು.

"ಮಾಡೀ ಮೇಲಿರಬಹುದಪ್ಪ."

ಹಜಾರದಲ್ಲಿ ಬೀದಿಯ ಬಾಗಿಲಿಗೆ ಎದುರಾಗಿ ಮರದ ಮೆಟ್ಟಿಲು. ಅದನ್ನು ಹತ್ತಿ ಹೋದರೆ ಮರದಲ್ಲಿಯೇ ಮಾಡಿದ ಕೈ ಸಾಲೆ. ಆ ಕೈ ಸಾಲೆಯಿಂದ ಒಳಗೆ ಹೋಗಲು ಬಾಗಿಲು. ಅದನ್ನು ದಾಟಿದರೆ ಶಯನ ಗೃಹ. ಶಯನ ಗೃಹವು ಕಂಡುಬರದಂತೆ ಕೈ ಸಾಲೆಯುದ್ದಕ್ಕೂ ಅತ್ತ ಕಡೆಯಿಂದ ಇತ್ತ ಕಡೆಯವರೆವಿಗೆ ಮಾಸಲು ಹಸಿರು ಬಣ್ಣದ ಬಟ್ಟೆಯ ಪರದೆಯನ್ನು ಇಳಿಬಿಡಲಾಗಿತ್ತು.

ಹನುಮಂತು ಮೆಟ್ಟಿಲನ್ನು ಹತ್ತಿ ಹೋದನು. ಬಾಗಿಲಿನ ಎರಡು ಕಡೆಯೂ ಒಂದೊಂದು ಕಿಟಕಿ. ಹೋಗುತ್ತಾ ಎಡಗಡೆಯ ಕಿಟಕಿಯನ್ನೂ ಬಾಗಿಲನ್ನೂ ಮುಚ್ಚಲಾಗಿತ್ತು. ಆದರೆ ಯಾರೋ ಮಾತನಾಡುತ್ತಿರುವ ಧ್ವನಿಯು ಕೇಳಿಸಿತು. ಅವನಿಗೆ ಆಸಕ್ತಿಯುಂಟಾಗಿ ಆಲಿಸತೊಡಗಿದನು.

ಮಾತನಾಡುತ್ತಿದ್ದವರು ಶ್ಯಾಮಲಮ್ಮ ಮತ್ತು ಮಂಜುಳಾ.

ಅವರೇನು ಮಾತನಾಡುತ್ತಿರುವರೋ ಕೇಳಬೇಕೆಂದು ಅವನಿಗೆ ಮನಸ್ಸಾಯಿತು. ಆದರಿಂದ ಹೋಗಿ ಬಾಗಿಲು ತಟ್ಟಲಿಲ್ಲ. ನೇರವಾಗಿ ಬಾಗಿಲಿನ ಆತ್ತಕಡೆಯಿದ್ದ ಕಿಟಕಿಯ ಬಳಿಗೆ ಹೋದನು. ಅದು ಮುಚ್ಚಿದ್ದರೂ ಒಂದು ಬಾಗಿಲು ಮಾತ್ರ ಸ್ವಲ್ಪ ತೆಗೆದಿತ್ತು. ಅಲ್ಲಿ ನಿಂತು ಅವರು ಏನು ಮಾಡುತ್ತಾರೆಂದು ನಿರೀಕ್ಷಿಸ ತೊಡಗಿದನು.

ಶ್ಯಾಮಲಮ್ಮ ತಾನು ಕೊಂಡುಕೊಂಡು ಬಂದಿದ್ದ ಹೊಸ ಸೀರೆಯನ್ನು ತೋರಿಸುತ್ತಿದ್ದಳು. ಮಂಜುಳೆಯು ನೋಡಿ ಅದೆಷ್ಟೋ ಚೆನ್ನಾಗಿದೆ ಎಂದು ಪ್ರಶಂಸೆ ಮಾಡುತ್ತಿದ್ದಳು.

"ಎಲ್ಲಿ, ಈ ಸೀರೆಯನ್ನುಟ್ಟುಕೋ. ಹೇಗಿರುತ್ತದೆಯೋ ನೋಡೋಣ"

"ಬೇಡಮ್ಮ"

"ಯಾಕೆ ಸಂಕೋಚವೇ ?"

"ಇಲ್ಲ. ಚೆನ್ನಾಗಿವೆ ಎಂದ ಸೀರೆಯನ್ನೆಲ್ಲಾ ಉಟ್ಟುಕೊಳ್ಳಬೇಕೇ ?"

"ಉಟ್ಟುಕೊಳ್ಳಬಾರದೇಕೆ ? "

"ಈಗ ಬೇಡ. "

" ಆ ಸೀರೆ ನಿನಗೆ ಹೇಗಿರುತ್ತದೆಯೋ ನಾನು ನೋಡಬೇಕು. ಉಟ್ಟುಕೋ ! "

"ನಾಳೆ ಉಟ್ಟು ಕೊಳ್ಳುತ್ತೇನೆ."

"ನಾಳೇ ಬೇಡ. ಈ ದಿನವೇ ಆಗಲಿ"

ಮಂಜುಳೆಗೆ ಇನ್ನೇನು ಹೇಳಿ ತಪ್ಪಿಸಿಕೊಳ್ಳಬೇಕೋ ಗೊತ್ತಾಗಲಿಲ್ಲ. ಯೋಚನೆ ಮಾಡುತ್ತಾ ನಿಂತುಕೊಂಡಳು.

ಶ್ಯಾಮಲಮ್ಮ ಅವಳ ಸೆರಗು ಎಳೆಯುತ್ತಾ "ನಾನು ಹೇಳುವ ಮಾತು ಕೇಳುತ್ತೀಯೋ ಇಲ್ಲವೋ ? " ಎಂದಳು.

"ಕೇಳಬಾರದೆಂದೇನೂ ಇಲ್ಲ. ಆದರೆ———"

ಶ್ಯಾಮಲಮ್ಮನಿಗೆ ಇನ್ನೇನು ತೋರಿತೋ? ಅವಳು ಮೇಲೆದ್ದು ಹೊಸ ಸೀರೆಯನ್ನು ಬಿಚ್ಚಿ ಅದನ್ನು ಅವಳ ಮೇಲೆ ಹಾಕಿ "ಉಟ್ಟುಕೋ. ನಿನಗೆ ನಾಚಿಕೆಯಾದರೆ ನಾನು ಅತ್ತಕಡೆ ತಿರುಗಿಕೊಳ್ಳುತ್ತೇನೆ" ಎಂದು ತಿರುಗಿ ನಿಂತುಕೊಂಡಳು.

ವಿಧಿಯಿಲ್ಲದೇ ಮಂಜುಳೆಯು ಹೊಸ ಸೀರೆಯ ಮರೆಯಲ್ಲಿ ಹಳೆಯ ಸೀರೆಯನ್ನು ಬಿಚ್ಚಿ ಮೈ ಮೇಲಿದ್ದ ಹೊಸದನ್ನು ಉಡಲು ಆರಂಭ ಮಾಡಿದಳು.

ಅಷ್ಟರಲ್ಲಿ ಶ್ಯಾಮಲಮ್ಮ ತಟ್ಟನೆ ಹಿಂತಿರುಗಿ ಮಂಜುಳೆಯನ್ನು ಆಲಂಗಿಸಿ ಚುಂಬಿಸ ತೊಡಗಿದಳು.

ಹನುಮಂತುವಿಗೆ ಶ್ಯಾಮಲಮ್ಮನ ವರ್ತನೆಯು ಚೋದ್ಯವಾಗಿ ಕಂಡಿತು. ಅವನಿಗೇನೂ ತೋರದೇ ಕೆಳಗೆ ಬಂದು ಕುಳಿತುಕೊಂಡನು.

ಮಾರಮ್ಮನು ಅಕ್ಕಿ ಮಾಡುವುದನ್ನು ಮುಗಿಸಿ, ಕಸ ಗುಡಿಸಲು ಮೊದಲು ಮಾಡಿದಳು.

ಸ್ವಲ್ಪ ಹೊತ್ತಿನಲ್ಲಿಯೇ ಮಹಡಿಯ ಮೇಲಿದ್ದ ಹೆಂಗಸರು ಕೆಳಗೆ ಬಂದರು. ಮಂಜುಳೆಯ ಮುಖವು ಕೆಂಪಾಗಿತ್ತು. ನಾಚಿಕೆಯಿಂದಲೋ ಏನೋ ತಲೆಯು ತಗ್ಗಿ ಹೋಗಿತ್ತು. ಕೆಳಗೆ ಬರುತ್ತಲೇ ಓಡಿ ಅವಳು ಹೊರಟು ಹೋದಳು.

ಶ್ಯಾಮಲಮ್ಮನು ಹನುಮಂತುವಿನೊಡನೆ ಯೋಗಕ್ಷೇಮವನ್ನು ಮಾತನಾಡುತ್ತಾ ಕುಳಿತಳು. ಪಾಂಡವಪುರದಲ್ಲಿ ನಡೆದ ನಾಟಕ, ಅಲ್ಲಿ ಹನುಮಂತುವು ಧರಿಸಿದ ಪಾತ್ರಗಳು ಮುಂತಾದುವನ್ನೆಲ್ಲಾ ವಿಚಾರಿಸ ತೊಡಗಿದಳು. ಎಷ್ಟು ಹೊತ್ತಾದರೂ ಅವರ ಮಾತುಗಳು ಮುಗಿಯುವಂತೆ ಕಂಡುಬರಲಿಲ್ಲ.

ಕೆಲಸವನ್ನೆಲ್ಲಾ ಮುಗಿಸಿಕೊಂಡು ಮಾರಮ್ಮನು ಅಮ್ಮಾವರಿಗೆ ಹೇಳಿ ಹೊರಟು ಹೋದಳು.

ಅವಳು ಹೋಗುತ್ತಲೇ ಶ್ಯಾಮಲಮ್ಮನು "ಹನುಮಂತು, ಬೀದಿಯ ಬಾಗಿಲು ಹಾಕಿ ಬಾ" ಎಂದು ಹೇಳಿದಳು.

ಮೂರು ದಿನಗಳಾದರೂ ಮಂಜುಳೆಯು ಬರಲಿಲ್ಲ. ಅವಳು ಬರದೇ ಇದ್ದುದು ಹನುಮಂತುವಿಗೆ ಮುಜುಗರವಾಯಿತು. ಆದರೆ ಸ್ಪಷ್ಟವಾಗಿ ಅವಳೇಕೆ ಬರಲಿಲ್ಲ ಎಂದು ಕೇಳುವ ಧೈರ್ಯವು ಅವನಿಗೆ ಬರಲಿಲ್ಲ.

ನಾಲ್ಕನೆಯ ದಿನ ಹನುಮಂತುವು ಬಟ್ಟೆಗಳನ್ನು ಇಸ್ತ್ರೀ ಮಾಡುತ್ತಾ ಇದ್ದಾಗ ಶ್ಯಾಮಲಮ್ಮ ಮಂಜುಳೆಯ ಕೈಯನ್ನು ಹಿಡಿದುಕೊಂಡು ಕರೆತಂದಳು.

ಪಕ್ಕದಲ್ಲಿಯೇ ಇದ್ದ ಚಾಪೆಯ ಮೇಲೆ ಹೆಂಗಸರಿಬ್ಬರೂ ಕುಳಿತು ಕೊಂಡರು.

"ಅದೇನು ಮಂಜುಳಾ! ಮೂರು ದಿನಗಳಿಂದ ಬರಲಿಲ್ಲ."

"ತಲೇ ನೋವು ಬರುತ್ತಿತ್ತು. ಬರಲಿಲ್ಲ."

ಶ್ಯಾಮಲಮ್ಮನು "ಇನ್ನು ಮೇಲೆ ನಿನಗೆ ತಲೇ ನೋವು ಬರಲಿ. ಏನು ಮಾಡುತ್ತೇನೆಯೋ, ನೋಡು" ಎಂದಳು.

ಇಬ್ಬರೂ ಸುಳ್ಳಾಡುತ್ತಿದ್ದಾರೆಂದು ಹನುಮಂತುವಿಗೆ ಚೆನ್ನಾಗಿ ಗೊತ್ತಿತ್ತು. ಆದರೆ ಅವನಿಗದೊಂದೂ ಮುಖ್ಯವಾಗಿರಲಿಲ್ಲ. ಮಂಜುಳೆಯು ಪುನಃ ಮೊದಲಿನಂತೆಯೇ ಬರುತ್ತಾಳೆಂಬುದಷ್ಟೇ ಅವನಿಗೆ ಸಾಕಾಗಿತ್ತು.

ಹೀಗೆಯೇ ಎಂಟು ಹತ್ತು ದಿನಗಳು ಕಳೆದುವು!

ಮಧ್ಯಾಹ್ನ ನಾಲ್ಕು ಗಂಟೆಯ ಸಮಯವಾಗಿರಬಹುದು. ಶ್ಯಾಮಲಮ್ಮ ಮನೆಯಲ್ಲಿರಲಿಲ್ಲ. ಹೊರಗಡೆ ಎಲ್ಲಿಯೋ ಹೋಗಿದ್ದಳು. ಹನುಮಂತು ಇದ್ದಿಲು ಒಲೆಯ ಮೇಲೆ ಕಾಫಿಗೆ ನೀರಿಟ್ಟು ಬೀಸಣಿಗೆಯಿಂದ ಬೀಸುತ್ತಾ ಕುಳಿತ್ತಿದ್ದನು.

"ಶ್ಯಾಮಲಕ್ಕ. ಶ್ಯಾಮಲಕ್ಕ."

—ಬಾಗಿಲು ತಟ್ಟಿದ ಶಬ್ದವಾಯಿತು.

ಬಂದು ತಟ್ಟಿದವಳು ಮಂಜುಳೆಯೆಂದು ಹನುಮಂತನಿಗೆ ಗೊತ್ತಾಯಿತು. ರೆಕ್ಕೆ ಹುಟ್ಟಿ ಬಂದಂತೆ ಹಾರಿಹೋಗಿ ಬಾಗಿಲು ತೆಗೆದನು.

ಮಂಜುಳೆಯು ಬರುತ್ತಾ "ಅಕ್ಕನೆಲ್ಲಿ?" ಎಂದಳು.

"ಇಲ್ಲಿಯೇ ಹೊರಗೆ ಹೋಗಿದ್ದಾರೆ. ಕಾಫೀ ಆಗುವ ಹೊತ್ತಿಗೆ ಬರುತ್ತೇನೆಂದರು. ನಾನೇ ಕಾಫಿ ಮಾಡುತ್ತಿದ್ದೇನೆ."

ಬಾಗಿಲು ಸೇರಿಸಿಕೊಂಡು ಮಂಜುಳೆಯು ಅಡಿಗೆಯ ಮನೆಯ ಕಡೆಗೆ ಹೊರಟಳು. ಅವಳೊಂದಿಗೆ ಹನುಮಂತನೂ ಹೋದನು.

ಮಂಜುಳೆಯು ಒಲೆಯ ಬಳಿ ಹೋಗಿ ನೋಡಿದಳು. ಸೇರಿಟ್ಟಿರುವುದು ಅವಳಿಗೆ ಸರಿಯಾಗಿ ಕಂಡು ಬರಲಿಲ್ಲ.

ನಗುತ್ತಾ "ಗಂಡಸರಿಗೆಲ್ಲಿಯಾದರೂ ಈ ಕೆಲಸಗಳು ಬರುತ್ತವೆಯೇ ?" ಎಂದಳು.

ಅನಂತರ ಸೇರಿನ ಪಾತ್ರೆಯನ್ನು ತೆಗೆದು ಕೆಳಗಿಟ್ಟಳು. ಒಲೆಯಲ್ಲಿದ್ದ ಕೆಂಡಗಳನ್ನು ಸಪುಟದ ಕಾವಿನಿಂದ ಕೆದಕಿ ಹಳ್ಳಮಾಡಿದಳು. ಪುನಃ ಪಾತ್ರೆಯನ್ನು ಒಲೆಯ ಮೇಲಿಟ್ಟು, ಬೀಸಣಿಗೆಯಿಂದ ಗಾಳಿ ಹಾಕಲು ತೊಡಗಿದಳು.

ಹನುಮಂತು ಕಾಂಡವ ಪ್ರದೇಶದಿಂದ ಮಂಡ್ಯಕ್ಕೆ ಬಂದ ದಿನದಿಂದಲೂ ಅವನ ಮನಸ್ಸಿನಲ್ಲಿ ಒಂದು ಆಸೆಯು ಹೊಕ್ಕು ಹುಳುವಿನಂತೆ ಕೊರೆಯುತ್ತಿತ್ತು. ಆದಾಗಲೂ ಮನೆಯಲ್ಲಿ ರಾಮುಲಮ್ಮನು ಇರುತ್ತಿದ್ದಳು. ಆದರೆ ಈ ದಿನ ಅವಳಿಲ್ಲದೇ ಮಂಜುಳೆಯೊಬ್ಬಳೇ ಇದ್ದುದರಿಂದ ಪುನಃ ಆ ಆಸೆಯು ಮೇಲೆದ್ದು ಬಂದಿತು.

ಅವನು ಮಂಜುಳೆಯನ್ನು ಸಮೀಪಿಸಿ "ನಾನೇ ಬೀಸುತ್ತೇನೆ" ಎಂದು ಹೇಳಿ, ಬೀಸಣಿಗೆಯನ್ನು ಕಿತ್ತುಕೊಳ್ಳಲು ಹೋದನು.

ಅವಳು ಕೂಡಲೇ ಹಿಂದೆ ಸರಿದಳು. ಅವನು ಮುಂದೆ ಸರಿದನು. ಅವಳಿದ್ದು ಬೀಸಣಿಗೆಯನ್ನು ತನ್ನ ಬೆನ್ನ ಹಿಂದೆ ಇಟ್ಟುಕೊಂಡು ಗೋಡೆಗೆ ಒರಗಿ ನಿಂತಳು. ಅವನೂ ಎದ್ದು ಕಿತ್ತುಕೊಳ್ಳುವ ನೆವದಿಂದ ಅವಳನ್ನು ಸ್ಪರ್ಶ ಮಾಡಿದನು.

ಆ ಸ್ಪರ್ಶದಿಂದ ಮಂಜುಳೆಯು ಚಕಿತಳಾದಳು. ಬೀಸಣಿಗೆಯನ್ನು ಕೆಳಗೆ ಹಾಕಿ "ಇದೇನು, ಹನುಮಂತು" ಎಂದಳು.

ಅವನು ನಗುತ್ತಾ "ಏನಾಯಿತು ?" ಎಂದನು.

"ನೀನು ಇಂತಹವನೆಂದು ಕೊಂಡಿರಲಿಲ್ಲ"

" ನೀನೂ ಇಂತಹವಳೆಂದು ಕೊಂಡಿರಲಿಲ್ಲ "

" ಅಂತಹದೇನು ನೀನು ನೋಡಿದ್ದು ?"

" ನೀನೇಕೆ ಆಗ ಮೂರು ದಿನ ಇಲ್ಲಿಗೆ ಬರುತ್ತಿರಲಿಲ್ಲ "

" ಯಾಕೋ ಬರಲಿಲ್ಲ. ಅವೆಲ್ಲಾ ನಿನಗೇಕೆ ?"

" ಆ ಕಾರಣ ನನಗೆ ಗೊತ್ತು "

" ಏನು ನಿನಗೆ ಗೊತ್ತಿರುವುದು ?"

" ನೀನು ಹೊಸ ಸೀರೆ ಉಟ್ಟುಕೊಳ್ಳುತ್ತಿದ್ದಾಗ ಶ್ಯಾಮಲಮ್ಮ——"

ಆ ಮಾತು ಬರುವುದೆಂದು ಮಂಜುಳೆಯು ನಿರೀಕ್ಷಿಸಿರಲಿಲ್ಲ. ತನ್ನ ಮಾತು ಅಲ್ಲಿಗೆ ಮುಟ್ಟುವುದೆಂದುಕೊಂಡೂ ಇರಲಿಲ್ಲ. ಅವಳು ಸುಮ್ಮನೆ ನಿಂತುಕೊಂಡಳು. ಅವರೂ ಮುಖದಲ್ಲಿ ಏನೋ ಭಾವವು ಕಂಡುಬರುತ್ತಿದ್ದಿತು.

ಹನುಮಂತುವು " ಮಂಜುಳ. ಒಂದೇ ಒಂದು ಮುತ್ತು——" ಎಂದನು.

"——————————"

ಮೌನವನ್ನೇ ಸಮ್ಮತಿ ಎಂದುಕೊಂಡನೋ ಏನೋ ? ಅವನು ಮುಂದೆ ಹೋಗಿ ಮಂಜುಳೆಯನ್ನು ಚುಂಬಿಸಿದನು.

ಅಷ್ಟರಲ್ಲಿ ಗಡುಸಾದ ಧ್ವನಿಯಲ್ಲಿ ಯಾರೋ " ಹನುಮಂತೂ " ಎಂದು ಕೂಗಿದರು.

ಹನುಮಂತು ಮಂಜುಳೆಯನ್ನು ಅಗಲಿ ಹಿಂತಿರುಗಿ ನೋಡಿದನು. ಬಾಗಿಲಲ್ಲಿ ಶ್ಯಾಮಲಮ್ಮನು ನಿಂತಿದ್ದಳು.

"ಪರವಾಯಿಲ್ಲ. ನಮಗೆಲ್ಲಾ ಒಳ್ಳೆಯ ಗೌರವ ತರುತ್ತೀ."

ಮಂಜುಳೆಗೆ ಜವಾಬು ಹೇಳಿದಂತೆ ಶ್ಯಾಮಲಮ್ಮನಿಗೆ ಜವಾಬು ಹೇಳಲು ಅವನಿಂದಾಗಲಿಲ್ಲ. ತಲೆತಗ್ಗಿಸಿಕೊಂಡು ಹಜಾರಕ್ಕೆ ಬಂದು ನಿಂತುಕೊಂಡನು.

ಒಳಗಡೆ ಮಂಜುಳೆಯು ಬಿಕ್ಕಿ ಬಿಕ್ಕಿ ಅಳಲು ಮೊದಲು ಮಾಡಿದಳು. ಶ್ಯಾಮಲೆ ಸಮಾಧಾನ ಹೇಳ ತೊಡಗಿದಳು.

ಹೊರಗಡೆ ನಿಂತಿದ್ದ ಹನುಮಂತುವಿಗೆ ಸಂಕೋಚವಾಯಿತು. ಶ್ಯಾಮ

ಲಮ್ಮನಿಗೆ ಮುಖ ತೋರಿಸುವುದು ಹೇಗೆಂದು ಯೋಚನೆಗೆ ಇಟ್ಟುಕೊಂಡಿತು. ಅವನು ನಿದಾನವಾಗಿ ಆ ಮನೆಯಿಂದ ಹೊರಟಿದ್ದನು.

ಸಂಜೆ ಏಳು ಗಂಟೆಯ ಸಮಯವಾಗಿತ್ತು. ಹನುಮಂತುವಿಗೆ ಏನು ಮಾಡುವುದಕ್ಕೂ ತೋಚದೇ ಪಾರ್ಕಿನಲ್ಲಿ ಕುಳಿತುಕೊಂಡಿದ್ದನು.

ಮುಖಗಳು ಅಸ್ಪಷ್ಟವಾಗಿ ಕಾಣುವ ಮಬ್ಬಿನಲ್ಲಿ ಯಾರೋ ಹೆಂಗಸೊಬ್ಬಳು ಯಾರನ್ನೋ ಹುಡುಕಿಕೊಂಡು ಅಲೆಯುತ್ತಿರುವಂತೆ ಕಂಡು ಬಂದಿತು. ಅವಳು ಪಾರ್ಕಿನಲ್ಲಿ ತನಗೆ ಬೇಕಾದವರು ಇದ್ದಾರೆಯೋ ಎಂದು ನೋಡುತ್ತಿದ್ದಳು. ಆದರೆ ಪಾರ್ಕಿನ ಒಳಗೆ ಬರದೇ ಹೊರಗಡೆಯೇ ಸುಳಿದಾಡುತ್ತಿದ್ದಳು.

ಹೆಂಗಸಿನ ಈ ವಿಚಿತ್ರ ವರ್ತನೆಯು ಹನುಮಂತುವಿಗೆ ಆಶ್ಚರ್ಯವನ್ನು ಉಂಟು ಮಾಡಿತು. ಯಾವ ಹೆಂಗಸೋ ನೋಡೋಣವೆಂಬ ಕುತೂಹಲದಿಂದ ಮುಂದೆ ಬಂದನು.

ಅವನ ಮುಖವು ಕಣ್ಣಿಗೆ ಬಿದ್ದ ಕೂಡಲೇ ಆ ಹೆಂಗಸು " ಹನುಮಂತಣ್ಣ '' ಎಂದು ಗಾಬರಿಯಿಂದ ಕರೆದಳು.

ಅಷ್ಟು ಹೊತ್ತಿನಲ್ಲಿ ಹೀಗೆ ಮಂಜುಳೆಯು ಹುಡುಕಿಕೊಂಡು ಬಂದು ಕರೆಯುತ್ತಾಳೆಂದು ಹನುಮಂತುವು ಕನಸು ಮನಸಿನಲ್ಲಿಯೂ ನೆನಸಿರಲಿಲ್ಲ.

"ಹನುಮಂತು! ಶ್ಯಾಮಲಕ್ಕ ಎಲ್ಲವನ್ನೂ ನಾಗಪ್ಪನವರೊಂದಿಗೆ ಹೇಳುವುದಾಗಿ ಹೇಳಿದಳು. ನಿಮ್ಮ ಮನೆಯವರಿಗೆ ಹೇಳಿ ಮನೆಯಿಂದ ಹೊರಗೆ ಹಾಕಿಸುತ್ತಾಳೆಯಂತೆ! ಕೆಲಸದಿಂದ ಡಿಸ್‌ಮಿಸ್ ಮಾಡಿಸುತ್ತಾಳಂತೆ. ಕೈಗೆ ಸಿಕ್ಕಲಿ. ಅವನ ಮೂಳೆ ಮುರಿಯುತ್ತೇನೆ–ಎಂದಳು'' ಎಂಬುದಾಗಿ ಅವಳು ಏದುತ್ತಾ ಹೇಳಿದಳು.

" ಹೇಗೆಲ್ಲಾ ಹೇಳಿದಳೇ? ಮಂಜುಳ."

"ನನ್ನಾಣೆ ನಿನ್ನಾಣೆಗೂ ಹೇಳಿದಳು. ದೇವರಾಣೆಗೂ ಹೇಳಿದಳು. ನಾನು ಆಗಿದ್ದು ಆಗಿಹೋಯಿತು. ಬಿಡಿ, ಅಕ್ಕ–ಎಂದೆ. ಆದರೂ ಶ್ಯಾಮಲಕ್ಕ ಕೋಪವಾಗಿಯೇ ಇದ್ದಳು."

"———————"

"ನಾನೊಂದು ಮಾತು ಹೇಳುತ್ತೇನೆ ಕೇಳುತ್ತೀಯಾ, ಹನುಮಂತು"

"ಹೂಂ———"

"ನಾಲ್ಕು ದಿನ ಶ್ಯಾಮುಲಕ್ಕನ ಕಣ್ಣಿಗೆ ಬೀಳದೇ ಎಲ್ಲಿಯಾದರೂ ತಪ್ಪಿಸಿಕೊಂಡಿರು. ಅಷ್ಟು ಹೊತ್ತಿಗೆ ಅವಳಿಗೆ ಸಮಾಧಾನವಾಗಬಹುದು."

ಅವನು ಸುಮ್ಮನೆ ನಿಂತುಕೊಂಡನು.

ಮಂಜುಳೆಯು "ಏನು ಯೋಚಿಸುತ್ತೀಯೆ?" ಎಂದಳು.

"ಶ್ಯಾಮುಲಮ್ಮನ ಕಣ್ಣಿಗೆ ಬೀಳದೇ ಎಲ್ಲಿರಲೆಂದು ಯೋಚಿಸುತ್ತಿದ್ದೇನೆ"

"ಎಲ್ಲಿಯಾದರೂ ಇರು. ಅಂತೂ ಶ್ಯಾಮುಲಕ್ಕನ ಕಣ್ಣಿಗೆ ಬೀಳಬಾರದು. ಸಮಾಧಾನವಾದ ಮೇಲೆ ನಾನು ಬಂದು ಹೇಳುತ್ತೇನೆ."

ಮಾತನಾಡಲು ಹನುಮಂತುವಿಗೆ ಏನೂ ಇರಲಿಲ್ಲ.

ಮಂಜುಳೆಯು ಹೊರಟು ಹೋಗುವ ಮೊದಲು "ನನ್ನ ಮಾತು ಕೇಳು, ಹನುಮಂತು. ಈಗಲೇ ಅಕ್ಕನಿಗೆ ಸಿಕ್ಕಿದೆಯೋ ನಿನ್ನ ಗತಿ ಮುಗಿಯಿತು" ಎಂದು ಹೇಳಿದಳು.

ಅವನು ಕತ್ತಲಲ್ಲಿ ಕ್ಷಣಕ್ಷಣಕ್ಕೂ ದೂರಕ್ಕೆ ಹೋಗುತ್ತಿದ್ದ ಮಂಜುಳೆಯು ಕಣ್ಮರೆಯಾಗುವವರೆವಿಗೆ ನೋಡುತ್ತಾ ನಿಂತಿದ್ದನು.

## ೪

ಬೆಳಗಿನ ಜಾವದ ಮಂಜು ಬೀಳುತ್ತಿರುವಾಗಲೇ ರೈಲು 'ಹನುಮಂತು' ವನ್ನು ಬೆಂಗಳೂರಿಗೆ ತಂದುಬಿಟ್ಟಿತು. ಅವನ ಜೇಬಿನಲ್ಲಿ ಮೂರು ನಾಲ್ಕು ರೂಪಾಯಿಗಳಿದ್ದವು. ಮೈಮೇಲಿನ ಬಟ್ಟೆಗಳಲ್ಲದೇ ಮತ್ತಾವ ಬಟ್ಟೆಬರೆಗಳನ್ನೂ ಅವನು ತಂದಿರಲಿಲ್ಲ.

ಧರ್ಮಾಂಬುದೀ ಕೆರೆಯ ಏರಿಯ ಮೇಲೆ ನಡೆದುಕೊಂಡು ಬರುತ್ತಿರುತ್ತಿರುವಾಗ ಶ್ಯಾಮಲ, ನಾಗಪ್ಪ, ತನ್ನ ತಂದೆ, ಅಕ್ಕ ಮುಂತಾದವರ ಮೇಲೆಲ್ಲಾ ಅವನಿಗೆ ಕೋಪ ಬಂದಿತು. "ಸಮಯ ಬರಲಿ. ಅವರಿಗೇನು ಮಾಡುತ್ತೇನೆಯೋ ?" ಎಂದುಕೊಂಡನು. ಏನು ಮಾಡುತ್ತೇನೆ, ಯಾಕೆ ಮಾಡಬೇಕು ಎಂಬುದೊಂದೂ ಅವನಿಗೇ ಅರ್ಥವಾಗಿರಲಿಲ್ಲ.

ಆಗವನು ಹತ್ತೊಂಬತ್ತು ವರ್ಷದ ತರುಣ. ಏಕಾಂಗಿಯಾಗಿ ಪ್ರಪಂಚದಲ್ಲಿ ಪ್ರವೇಶ ಮಾಡಿದ್ದಾನೆ. ಯಾರನ್ನು ಸಾಕುವ ಹೊಣೆಗಾರಿಕೆಯೂ ಇರಲಿಲ್ಲ. ಆದರೂ ತನ್ನ ಹೊಟ್ಟೆ ಹೊರೆದುಕೊಳ್ಳಬೇಕಲ್ಲ. ಒಬ್ಬನ ಊಟ ಸಂಪಾದಿಸುವುದೇನು ಮಹಾ ಎಂದುಕೊಂಡನು.

ಬಳೇಪೇಟೆಗೆ ಬಂದು ಹೋಟಲಿನಲ್ಲಿ ಕಾಫೀ ತಿಂಡಿ ತೆಗೆದುಕೊಂಡನು. ಎಂಟು ಗಂಟೆಯ ಮೇಲೆ ಕೋಟೆ ಬೀದಿಯಲ್ಲೆಲ್ಲಾ ಒಂದು ಸುತ್ತು ಬಂದನು. ಯಾವುದಾದರೂ ನಾಟಕವಿದ್ದರೆ ಹೇಗಾದರೂ ಆ ಕಂಪನಿಯವರೊಡನೆ

ಎಲ್ಲೆಲ್ಲಿಯೂ "ನೋ ವೇಕೆನ್ಸಿ" ಎಂಬ ಬೋರ್ಡುಗಳು ಕಂಡಹಾಗೆ ಅವನ ಸುತ್ತಲೂ "ಕೆಲಸವಿಲ್ಲ–ಕೆಲಸವಿಲ್ಲ" ಎಂಬ ಕೂಗು ಎದ್ದ ಹಾಗಾಯಿತು.

ಪುನಃ ನೇರವಾಗಿ ಚಿಕ್ಕಲಾಲಬಾಗಿಗೆ ಬಂದು ಬಿಸಿಲು ಕಾಯಿಸಿಕೊಳ್ಳುತ್ತಾ ಕುಳಿತುಕೊಂಡನು.

ಅಲ್ಲಿ ಹನುಮಂತುವಿಗೆ ಒಂದು ಆಲೋಚನೆಯು ಹೊಳೆಯಿತು.

ಬೆಳಗಾಗ ಚಿಕ್ಕಲಾಲಬಾಗಿಗೆ ಬರುತ್ತಿದ್ದಾಗ "ಹೋಟೆಲು ಕೆಲಸಗಾರರ ಸಂಘ" ಎಂಬೊಂದು ಬೋರ್ಡು ಕಂಡಿತ್ತು. ನೇರವಾಗಿ ಹೋಗಿ ಎಲ್ಲಿ ಕೆಲಸ ಕೇಳುವುದರಿಂದಲೂ ಪ್ರಯೋಜನವಿಲ್ಲ. ಆ ಸಂಘಕ್ಕೆ ಹೋಗಿ ವಿಚಾರಿಸಿದರೆ ಏನಾದರೂ ಪ್ರಯೋಜನವಾಗುತ್ತದೆಯೋ ಎಂದು ತೋರಿತು.

ಎದ್ದು ನೇರವಾಗಿ ಅಲ್ಲಿಗೆ ಹೋದನು. ಸಂಘದ ಕಾರ್ಯದರ್ಶಿಗಳಾದ ವ್ಯಾಸರಾಯರು ಕರೆದು ಮಾತನಾಡಿಸಿದರು. ಹನುಮಂತುವು ತನಗಾರೂ ಇಲ್ಲವೆಂದೂ, ಬೆಂಗಳೂರಿಗೆ ಬಂದು ಕೆಲಸಕ್ಕೆ ಅಲೆಯುತ್ತಿರುವುದಾಗಿಯೂ ಹೇಳಿಕೊಂಡನು. ಅವರು ತಮ್ಮ ಪರಿತಾಪವನ್ನು ತೋರಿದರು. ಒಂದು ಕಪ್ಪು ಕಾಫೀ ತರಿಸಿಕೊಟ್ಟರು.

"ನಾವೇನು ಮಾಡುವುದಕ್ಕೆ ಆಗುತ್ತದೆ ? ಹೋಟೆಲಿನ ಕೆಲಸ ಮಾಡುವುದಾದರೆ ಅಲ್ಲಿ ಇಲ್ಲಿ ಹೇಳಿ ನೋಡಬಹುದು." ಎಂದರು.

ಒಂದು ಗಳಿಯ ಕಾಲ ಹನುಮಂತು ಯೋಚಿಸಿದನು. ಅದನ್ನಾದರೂ ಒಪ್ಪಿಕೊಂಡರೆ ಕೂಳು ಸಿಗುವ ಸಂಭವವಾದರೂ ಇದೆ. ಇಲ್ಲದಿದ್ದರೆ ಅದೂ ಇಲ್ಲ.

"ಆ ಕೆಲಸವನ್ನು ಮಾಡುವುದಕ್ಕೂ ತಯಾರಾಗಿದ್ದೇನೆ. ನೀವು ಯಾರಿಗಾದರೂ ಹೇಳಿದರೆ ಬಹಳ ಉಪಕಾರವಾಗುತ್ತದೆ."

ವ್ಯಾಸರಾಯರು ಹೋಟೆಲ್ ವಿರಾಂಸ ಯಜಮಾನರಿಗೆ ಒಂದು ಕಾಗದ ಬರೆದು ಕೊಟ್ಟು ಹೋಗಿ ನೋಡುವುದಕ್ಕೆ ಹೇಳಿದರು.

ಮೆಜೆಸ್ಟಿಕ್ ಥಿಯೇಟರಿನಿಂದ ಮಲ್ಲೇಶ್ವರಕ್ಕೆ ಬಸ್ಸು ಹೋಗುವ ದಾರಿಯಲ್ಲಿ ವಿರಾಂ ಹೋಟೆಲು. ವ್ಯಾಸರಾಯರ ಕಾಗದವನ್ನು ನೋಡಿದ ಹೋಟೆಲು ಮಾಲೀಕರು ಕೆಲಸ ಕೊಡುವುದಕ್ಕೆ ಒಪ್ಪಿದರು. ಊಟ, ಕಾಫಿ,

ಮಲಗಲು ಜಾಗಗಳೆಲ್ಲವನ್ನೂ ಕೊಟ್ಟು ತಿಂಗಳಿಗೆ ಹದಿನೈದು ರೂಪಾಯಿ ಸಂಬಳ ಕೊಡುವುದಾಗಿ ಹೇಳಿದರು.

ಹನುಮಂತುವಿಗೆ ಒಪ್ಪಿಕೊಳ್ಳದೇ ಬೇರೆಯ ಗತ್ಯಂತರವೇ ಇರಲಿಲ್ಲ.

ಮಧ್ಯಾಹ್ನ ಊಟವಾದ ಮೇಲೆ ಕೆಲಸ ಆರಂಭಿಸುವ ಮೊದಲು ಅನಂತಯ್ಯನವರು "ಏ ! ಹನುಮಂತು. ನೀನೆಲ್ಲಿಯಾದರೂ ಹೋಟಲು ಕೆಲಸಮಾಡಿ ರೂಢಿ ಉಂಟೋ ?" ಎಂದು ಕೇಳಿದರು.

ಹನುಮಂತು ಕೈಗೆ ಬಂದದ್ದು ಬಾಯಿಗಿಲ್ಲದೇ ಹೋಗುತ್ತದೆಯೋ ಎಂಬ ಭಯದಿಂದ "ಎಲ್ಲೂ ಕೆಲಸ ಮಾಡಿಲ್ಲ. ಆದರೂ ಚೆನ್ನಾಗಿ ಮಾಡು ತ್ತೇನೆ. ಎರಡು ದಿನ ನೋಡಿ. ನಿಮಗೆ ಉಪಯೋಗವಿಲ್ಲನೆಂದು ತೋರಿ ದರೆ ಕಳುಹಿಸಿಬಿಡಿ" ಎಂದು ದೈನ್ಯದಿಂದ ಹೇಳಿಕೊಂಡನು.

ಅನಂತಯ್ಯ ನಗುತ್ತಾ "ಮೊದಲು ರೂಮುಗಳವರಿಗೆ ಸಪ್ಲೈ ಮಾಡು. ಹೇಗೆ ಮಾಡುತ್ತೀಯೋ ನೋಡೋಣ" ಎಂದು ಹೇಳಿದರು.

ಅಂದಿನಿಂದಲೇ ಹನುಮಂತು ಕೆಲಸವನ್ನು ಮೊದಲು ಮಾಡಿದನು. ರೂಮುಗಳಲ್ಲಿರುತ್ತಿದ್ದ ಪ್ರವಾಸಿಗಳು ಕರೆದ ಕೂಡಲೇ "ಏನು ಸಾರ್ ?" ಎಂದು ಹೋಗಿ ನಿಂತುಕೊಳ್ಳಲು ಮೊದಮೊದಲು ನಾಚಿಕೆಯಾಗುತ್ತಿತ್ತು. ಕಾಫೀ ತಿಂಡಿಗಳನ್ನು ತೆಗೆದುಕೊಂಡು ಹೋಗಿ ಕೊಡಲು ಸಂಕೋಚವಾಗು ತ್ತಿತ್ತು. ಎರಡು ದಿನಗಳೊಳಗೆ ನಾಚಿಕೆ, ಸಂಕೋಚಗಳು ಸರಿಹೋದುವು. ಆ ಮೇಲೆ ಅಭ್ಯಾಸವಿಲ್ಲದೇ ಕೆಲಸವು ಕಷ್ಟವಾಗಿ ಕಂಡು ಬರುತ್ತಿದ್ದಿತು. ಎಂಟು ಹತ್ತು ದಿನಗಳಾದ ನಂತರ ಕೆಲಸ ಸುಲಭವೇ ಆಯಿತು.

ತಕ್ಕಮಟ್ಟಿಗೆ ಸುಸಂಸ್ಕೃತನೂ, ನೋಡಲು ಲಕ್ಷಣವಾಗಿದ್ದವನೂ ಆದ ಅವನು ಅಲ್ಲಿ ಕೆಲಸ ಮಾಡುತ್ತಿದ್ದವರೆಲ್ಲೆಲ್ಲಾ ಬಹಳ ಬಳಕೆಯುವ ನಾದನು. ಅನಂತಯ್ಯನವರ ವಿಶ್ವಾಸಕ್ಕೂ ಪಾತ್ರನಾದನು.

ಇಷ್ಟಾದರೂ ಅವನಿಗೆ ನಾಟಕದ ಗೀಳು ಬಿಡಲಿಲ್ಲ. ಒಂದೆರಡು ನಾಟಕದ ಕಂಪನಿಗಳು ಬೆಂಗಳೂರಿಗೆ ಬಂದಾಗ ಹೋಗಿ ಕೆಲಸವನ್ನು ಕೇಳಿ ದನು. ಅವರೊಬ್ಬರೂ ಈಗ ಕೆಲಸವಿಲ್ಲವೆಂದು ಹೇಳಿ ಕಳುಹಿಸಿಬಿಟ್ಟರು. ಒಬ್ಬ ನಾಟಕ ಕಂಪನಿಯ ಮಾಲೀಕರು "ಹೊರಗೆ ಹೋಗು. ಹೋಟಲಿನ

ಹುಡುಗರೆಲ್ಲಾ ಪಾರ್ಟಿ ಮಾಡುತ್ತೇವೆಂದು ಬಂದುವರಿಂದಲೇ ನಾಟಕವನ್ನ ರಿಗೆ ಕೂಳಿಲ್ಲದೇ ಹೋಗುವಂತಹ ಗತಿಯು ಬಂದಿತು" ಎಂದು ಗದ್ದರಿಸಿ ಹೊರಗೆ ಅಟ್ಟಿದರು.

ಬರಬರುತ್ತಾ ಹೋಟಲಿಗೆ ಬಂದು ಹೋಗುವ ಖಾಯಂ ಗಿರಾಕಿಗಳೆಲ್ಲರೂ ಹನುಮಂತುವಿಗೆ ಪರಿಚಯವಾಗುತ್ತ ಬಂದರು. ಈ ಹೋಟಲಿಗೆ ಬಂದನಂತರ ಅವನೊಂದು ಗುಟ್ಟು ಕಂಡುಹಿಡಿದುಕೊಂಡನು. ಹೋಟಲಿನಲ್ಲಿ ಸಪ್ಲೈ ಮಾಡುವಾಗಲೂ, ಬೀದಿಯಲ್ಲಿ ಹೋಗುವಾಗಲೂ ತರುಣಿಯರೂ, ವಯಸ್ಸಾದ ಹೆಂಗಸರೂ ಅವನ ಕಡೆಗೆ ನೋಡುತ್ತಿದ್ದರು. ಒಬ್ಬ ಹೆಂಗಸು ತನ್ನನ್ನು ನೋಡಿದಾಗ ಅವಳು ತನ್ನ ಕಡೆಗೆ ಆಕರ್ಷಿತಳಾಗಿದ್ದಾಳೆಯೋ ಇಲ್ಲವೇ ಎಂಬುದನ್ನು ಹನುಮಂತೂ ಹೇಳಬಲ್ಲವನಾಗಿದ್ದನು. ತಾನು ರೂಪವಂತನೆಂದೂ, ಅದರಿಂದ ಯಾರನ್ನು ಬೇಕಾದರೂ ಹಿಡಿಯಬಹುದೆಂದೂ ಅರ್ಥಮಾಡಿಕೊಂಡನು. ಸಾಧ್ಯವಾದ ರೀತಿಗಳಲ್ಲೆಲ್ಲಾ ಅದನ್ನು ಉಪಯೋಗಿಸಬೇಕೆಂದು ನಿರ್ಧರಿಸಿದನು.

ಒಂದು ಬಾರಿ ವಿರಾಮ ಹೋಟಲಿಗೆ ಒಬ್ಬ ಹೆಂಗಸು ಬಂದಳು.

ಅವಳು ಒಂದು ಬಗೆಯ ವಿಚಿತ್ರ ಹೆಂಗಸು. ಅವಳ ವೇಷಭೂಷಣಗಳ ರೀತಿಯು ಎಂತಹವರಿಗಾದರೂ ಆಶ್ಚರ್ಯವನ್ನು ಉಂಟು ಮಾಡುವಂತಿದ್ದಿತು.

ಮೊಟ್ಟಮೊದಲನೆಯದಾಗಿ ಅವಳ ಹೆಸರೇ ಆಸಕ್ತಿಯನ್ನು ಕೆರಳಿಸುವಂತೆ ಇದ್ದಿತು. ಅರಸುರತ್ನೆ ಎಂದು ಅವಳ ಹೆಸರು. ಒಂದು ಬಾರಿ ಉದ್ದವಾದ ಲಂಗದಂತಹ ವಸ್ತ್ರವನ್ನು ಧರಿಸುತ್ತಿದ್ದಳು. ಮತ್ತೊಂದು ಬಾರಿ ತಮಿಳು ದೇಶದ ಹೆಂಗಸರಂತೆ ಸೀರೆಯುಡುತ್ತಿದ್ದಳು. ಕೆಲವು ಬಾರಿ ಯೂರೋಪಿಯನ್ ಹೆಂಗಸರು ಭಾರತೀಯರ ಉಡುಪು ಧರಿಸಿದಂತೆ ಕಂಡು ಬರುತ್ತಿದ್ದಳು.

ಅವಳು ತಲೆಯನ್ನು ಕಟ್ಟುತ್ತಿದ್ದುದು ಮತ್ತೂ ವಿಚಿತ್ರ. ಬಗೆಬಗೆಯಾಗಿ ಹೆರಳು ಕಟ್ಟುತ್ತಿದ್ದಳು. ತಲೆಗೂದಲು ಬಿಚ್ಚಿಬಿಟ್ಟು ನೋಲೊಂದು

ರಿಬ್ಬನ್ ಕಟ್ಟುತ್ತಿದ್ದಳು. ಹಿಂದಕ್ಕೆ ಬಾಚಿ ಬಲವಾಗಿ ಎಳೆದು ಗಂಟು ಹಾಕಿ ಕೊಳ್ಳುತ್ತಿದ್ದಳು. ಆಕಕವಾಗಿ ಬಾಬ್ ಮಾಡಿಕೊಂಡವರಂತೆ ಹರಪಿ ಕಟ್ಟುತ್ತಿದ್ದಳು. ಜಟೆಯಂತೆ ಕೂದಲನ್ನು ನೆತ್ತಿಯ ಮೇಲೆ ಸುತ್ತುತ್ತಿದ್ದಳು. ಹೆರಳು ಕಟ್ಟುವ ಬಗೆಬಗೆಯ ರೀತಿಗಳನ್ನು ಹೆಂಗಸರು ಅವಳಿಂದ ಕಲಿಯ ಬಹುದಾಗಿತ್ತು.

ಶ್ಯಾಮಲ ವರ್ಣದ ಗುಂಡುಮುಖವವಳದು. ಎತ್ತರವಾದ ಸ್ಥೂಲಾಂಗಿ. ರೂಪವತಿ ಎಂದು ಒಪ್ಪುವುದಕ್ಕೆ ಕಷ್ಟವಾದರೂ ಮುಖವು ಕಳಾಮಯವಾ ಗಿದ್ದಿತು.

ಯಾರಿಗೇ ಆಗಲಿ ಅವಳನ್ನು ನೋಡಿದ ಕೂಡಲೇ ಇಂತಹ ದೇಶದ ಹೆಂಗಸೆಂದು ಹೇಳುವುದು ಅಸಂಭವವಾಗುತ್ತಿತ್ತು. ಅವಳು ಸ್ವಚ್ಛವಾದ ತಮಿಳು ಮಾತನಾಡುತ್ತಿದ್ದಳು. ಆದರವಳು ತಮಿಳು ಹೆಂಗಸಿನಂತೆ ಕಂಡು ಬರುತ್ತಿರಲಿಲ್ಲ.

ಹಣವನ್ನು ಖರ್ಚು ಮಾಡುವುದರಲ್ಲಿಯೂ ಅವಳದೇ ಒಂದು ರೀತಿ. ನರ್ತಕಿಯು ಕುಣಿಯುವಾಗಲೆಲ್ಲಾ ಕಾಲಿನ ಗೆಜ್ಜೆಗಳು ಘಣಘಣವೆನ್ನು ವಂತೆ ಅವಳು ನಡೆದಾಗಲೆಲ್ಲಾ ರೂಪಾಯಿಗಳು ಚಿಮ್ಮಿ ಬೀಳುತ್ತಿವೆಯೋ ಎಂಬಂತೆ ಅವಳನ್ನು ನೋಡಿದಾಗ ಭಾಸವಾಗುತ್ತಿತ್ತು.

ಒಂದೆರಡು ಬಾರಿ ಕೋಣೆಗೆ ಸಪ್ಲೇ ಮಾಡುವಾಗ ಅರಸು ರತ್ನ ಹನು ಮಂತುವಿನ ಕಡೆಗೆ ನೋಡಿದ್ದಳು.

ಹೆಂಗಸರು ತನ್ನ ಕಡೆಗೆ ನೋಡಿದಾಗಲೆಲ್ಲಾ ಅವರಿಗೆ ತನ್ನಲ್ಲಿ ಆಸಕ್ತಿ ಯುಂಟಾಗಿದೆಯೋ ಇಲ್ಲವೋ ಎಂಬುದನ್ನು ಹನುಮಂತು ಅರ್ಥಮಾಡಿಕೊಳ್ಳು ತ್ತಿದ್ದನು. ಆದರೆ ಅವನು ಅರಸು ರತ್ನಳ ದೃಷ್ಟಿಯಿಂದ ಏನೂ ತಿಳಿದು ಕೊಳ್ಳಲಾಗಲಿಲ್ಲ.

ದಿನದ ಕೆಲಸವೆಲ್ಲಾ ಮುಗಿದ ನಂತರ ಮಲಗಿಕೊಳ್ಳುವ ಮೊದಲು ಹನುಮಂತು ಮಹಡಿಯ ಮೇಲಿನ ವರಾಂಡದಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿ ಕೊಳ್ಳುತ್ತಿದ್ದನು. ಆ ದಿನ ಮಾಮೂಲಿನಂತೆ ಮೂಲೆಯಲ್ಲಿ ಹಾಕಿದ್ದ ಬೆಂಚಿನ ಮೇಲೆ ಕುಳಿತು ಸಿಗರೇಟು ಸೇದುತ್ತಿದ್ದನು.

ಅದು ಅರಸು ರತ್ನೆ ಹೋಟಲಿಗೆ ಬಂದ ಮೂರನೆಯ ದಿನ. ರಾತ್ರಿ ಒಂಬತ್ತು ಒಂಬತ್ತೂವರೆ ಗಂಟೆಯಲ್ಲಿ ಅವಳು ಕೋಣೆಯಿಂದ ಹೊರಗೆ ಬಂದಳು. ಮಹಡಿಯ ಮೆಟ್ಟಿಲುಗಳನ್ನಿಳಿಯುವಾಗ ಹನುಮಂತುವಿನ ಮೇಲೆ ಅವಳ ಗಮನವು ಬಿದ್ದಿತು.

ನಿಂತುಕೊಂಡು ಕಣ್ಣು ಸನ್ನೆಮಾಡಿ ಅವನನ್ನು ಕರೆದಳು.

ಅವನು ಬಂದು ನಮ್ರನಾಗಿ ಅವಳ ಮುಂದೆ ನಿಂತುಕೊಂಡನು.

" ನಿನಗೆ ಮೋರ್ಹ ಥಿಯೇಟರ್ ಎಲ್ಲಿದೆ ಎಂಬುದು ಗೊತ್ತೋ?" ಎಂದು ತಪ್ಪು ತಪ್ಪು ಕನ್ನಡದಲ್ಲಿ ತಡವರಿಸುತ್ತಾ ಕೇಳಿದಳು.

ಹನುಮಂತು ಗೊತ್ತೆಂದು ಹೇಳಿದನು.

"ಸರಿ. ಬಾ ತೋರಿಸು"

ಅರಸುರತ್ನೆಯ ಹಿಂದೆ ಹಿಂದೆಯೇ ಮಹಡಿಯ ಮೆಟ್ಟಿಲುಗಳನ್ನಿಳಿದು ಹೋದನು. ಹೋಟಲಿನ ಪಕ್ಕದಲ್ಲಿ ಟ್ಯಾಕ್ಸಿಯು ಕಾಯುತ್ತಾ ನಿಂತಿತ್ತು. ಹೋಗಿ ಕುಳಿತುಕೊಂಡು, ಹನುಮಂತುವನ್ನೂ ಕುಳಿತುಕೊಳ್ಳುವಂತೆ ಹೇಳಿ, ಮೋರ್ಹ ಥಿಯೇಟರಿಗೆ ಬಿಡುವಂತೆ ಟ್ಯಾಕ್ಸಿಯವನಿಗೆ ಹೇಳಿದಳು.

ಟ್ಯಾಕ್ಸಿಯು ಹೊರಟಿತು.

ಹನುಮಂತುವಿಗೆ ಮನಸ್ಸಿನಲ್ಲಿ ಬಗೆಬಗೆಯ ಆಲೋಚನೆಗಳು ಬಂದುವು. ಅರಸುರತ್ನೆಯು ತನ್ನನ್ನು ಯಾಕೆ ಕರೆದುಕೊಂಡು ಬಂದಳು? ಈಗ ನೋಡಿದರೆ ಬಹುಮಟ್ಟಿಗೆ ಥಿಯೇಟರು ಎಲ್ಲಿದೆ ಎಂದು ಅವಳಿಗೇ ಗೊತ್ತಿರಬಹುದು. ಒಂದು ವೇಳೆ ಗೊತ್ತಿಲ್ಲದಿದ್ದರೂ ಟ್ಯಾಕ್ಸಿಯವನಿಗಂತೂ ಗೊತ್ತೇ ಇದೆ. ಹಾಗಿರುವಾಗ ತನ್ನ ಆವಶ್ಯಕತೆಯೇನು?

ಆದರೆ ತನ್ನ ಮನಸ್ಸಿನಲ್ಲಿ ಬಂದ ಸಂದೇಹವನ್ನು ಕೇಳಲು ಅವನಿಗೆ ಧೈರ್ಯವಿರಲಿಲ್ಲ.

ಥಿಯೇಟರಿನ ಬಳಿ ಇಬ್ಬರೂ ಇಳಿದರು. ಎಲ್ಲರಂತೆ ಅವಳು ಹೋಗಿ ಟಿಕೆಟ್ಟು ತೆಗೆದುಕೊಳ್ಳಲಿಲ್ಲ. ಹಾಗೆಯೇ ಥಿಯೇಟರಿನ ಬಾಲ್ಕನಿಗೆ ಹೊರಟಳು.

[೪]

ಅದನ್ನು ನೋಡಿ ಹನುಮಂತು "ಇವಳಿಗೆ ಸಿನಿಮಾ ಬಿಟ್ಟಿಯೇನೋ" ಎಂದುಕೊಂಡನು.

ಮೇಲೆ ಹೋದವಳು ಒಳಗೆ ಪ್ರವೇಶಿಸುವ ಮುನ್ನ ವ್ಯಾನಿಟೀ ಬ್ಯಾಗ್ ತೆಗೆದು ಹತ್ತುರೂಪಾಯಿನ ಹೊಸ ನೋಟನ್ನು ಗೇಟ್‌ನಲ್ಲಿದ್ದವನ ಕೈಗೆ ಕೊಟ್ಟು "ಟಿಕೆಟ್ಟು ತೆಗೆದುಕೊಂಡು ಬಾ" ಎಂದು ಹೇಳಿ, ಬಾಕ್ಸ್‌ನಲ್ಲಿ ಹೋಗಿ ಕುಳಿತುಕೊಂಡಳು.

ಒಳಗೆ ಹೋಗಿ ಕುಳಿತುಕೊಂಡು ನೋಡಿದಳು. ಅವನು ಬಂದಿರಲಿಲ್ಲ.

ಪುನಃ ಹೊರಗೆ ಬಂದು ಅವನನ್ನು ಬರುವಂತೆ ಕಣ್ಣುಸನ್ನೆ ಮಾಡಿ ಕರೆದಳು.

ಇಬ್ಬರೂ ಒಳಗೆ ಹೋಗಿ ಕುಳಿತು ಕೊಂಡರು.

ಚಿತ್ರವು ಇನ್ನೂ ಆರಂಭವಾಗಿರಲಿಲ್ಲ. ಕಡೆಯ ಆಟವಾದುದರಿಂದ ಬಾಲ್ಕನಿಯಲ್ಲಿ ಹೆಚ್ಚು ಗಲಾಟೆಯೂ ಇರಲಿಲ್ಲ.

ಹನುಮಂತುವು ಮೌನವನ್ನು ಒಡೆದು "ಅರವಿಂದರು ನಟಿಸಿರುವ ಚಿತ್ರ" ಎಂದನು.

ಅವಳು ನಗುತ್ತಾ "ನೀನೂ ಅರವಿಂದನ ಫ್ಯಾನೋ?" ಎಂದಳು.

"ನನಗೆ ಅವರ ಚಿತ್ರಗಳೆಂದರೆ ಪ್ರಾಣ."

"ನೀನೋ ಜೊತೆಗೆ ಇರಲಿ—ಎಂದು ಕರೆದುಕೊಂಡು ಬಂದೆ. ನಿನಗೆ ಪ್ರಿಯವಾದ ಚಿತ್ರವೆಂದರೆ ನನಗೆ ಬಹಳ ಸಂತೋಷ."

ದೀಪಗಳು ಆರಿ ಚಿತ್ರವು ಆರಂಭವಾಯಿತು. ಗೇಟ್ ಕೀಪರ್ ಟಿಕೆಟ್ಟುಗಳನ್ನೂ ಉಳಿದ ಹಣವನ್ನೂ ತಂದುಕೊಟ್ಟನು. ಅರಸುರತ್ನ ಟಿಕೆಟ್ಟುಗಳನ್ನೂ ಐದು ರೂಪಾಯಿನ ನೋಟನ್ನೂ ತೆಗೆದುಕೊಂಡು ಉಳಿದ ಚಿಲ್ಲರೆಯನ್ನು ಬಿಟ್ಟು ಬಿಟ್ಟಳು.

ಸುಮಾರು ಅರ್ಧ ಗಂಟೆಯ ಹೊತ್ತು ಅವರು ಚಿತ್ರವನ್ನು ನೋಡಿದರು.

ಅರಸುರತ್ನಗೆ ಚಿತ್ರವು ರುಚಿಸಲಿಲ್ಲವೆಂದು ತೋರುತ್ತದೆ.

ಅವಳು "ಚಿತ್ರ ಚೆನ್ನಾಗಿಲ್ಲ. ಹೋಗೋಣವೇ?" ಎಂದಳು.

ಚಿತ್ರವೂ ಅರವಿಂದನ ಅಭಿನಯವೂ ಅಷ್ಟು ಚೆನ್ನಾಗಿಲ್ಲವೆಂದು ನಿರಾ

ಕೆಯಾಗಿದ್ದಿತು. ಆದರೂ ಅರ್ಧದಲ್ಲಿ ಸಿನಿಮಾದಿಂದ ಎದ್ದು ಹೋಗಲು ಅವನಿಗೆ ಮನಸ್ಸಿರಲಿಲ್ಲ. ಆದರೆ ಮನಸ್ಸಿನಲ್ಲಿರುವುದನ್ನು ಹೇಳಿದರೆ ಅವಳೇನೆಂದು ಕೊಳ್ಳುತ್ತಾಳೆಯೋ ?

"ಆಗಬಹುದು" ಎಂದು ಎದ್ದು ನಿಂತನು.

ಅರಸುರತ್ನೆಯೂ ಎದ್ದಳು. ಅಷ್ಟರಲ್ಲಿ ಅವಳಿಗೇನು ತೋರಿತೋ ?

ಪುನಃ ಕುಳಿತುಕೊಂಡು "ಮರೆತೇ ಬಿಟ್ಟಿದ್ದೆ. ಅರವಿಂದನ ಫ್ಯಾನ್ ಅಲ್ಲವೇ, ನೀನು ? ಪೂರಾ ನೋಡಿಕೊಂಡೇ ಹೋಗೋಣ. ಕುಳಿತುಕೋ" ಎಂದು ಹೇಳಿ, ಅವನ ತೋಳು ಹಿಡಿದು ಕೂರಿಸಿದಳು.

ಆಸ್ಪರ್ಶದಿಂದ ಅವನ ಮೈ ಪುಲಕಿತವಾಯಿತು.

ಅರಸುರತ್ನೆ ಸಿಗರೇಟು ಪ್ಯಾಕ್ ತೆಗೆದು ಹಚ್ಚಿಕೊಂಡು, ಪ್ಯಾಕ್ ಮತ್ತು ಬೆಂಕಿಪೆಟ್ಟಿಗೆಗಳನ್ನು ಹನುಮಂತುವಿನ ಕೈಗೆ ಕೊಟ್ಟಳು.

ಅವನು "ಸಿಗರೇಟು ಸೇದುವುದು ರೂಢಿಯಿಲ್ಲ" ಎಂದನು.

"ಸುಳ್ಳು ಹೇಳಬೇಡ. ನೀನು ಸಿಗರೇಟು ಸೇದುತ್ತಿದ್ದುದನ್ನು ನೋಡಿದೆ. ನಾನು ಬಂದಾಗ ನೀನು ಆರಿಸಿ ಜೇಬಿನಲ್ಲಿಟ್ಟುಕೊಂಡೆ."

ಅವನಿಗೇನು ಹೇಳುವುದಕ್ಕೂ ತೋರಲಿಲ್ಲ.

"ಸಂಕೋಚ ಪಡಬೇಡ. ಸೇದು. ಪರವಾಗಿಲ್ಲ"

ಹನುಮಂತು ಸಿಗರೇಟು ಹಚ್ಚಿಕೊಂಡನು. ಆದರೆ ಅವಳೆದುರಿಗೆ ಧಾರಾಳವಾಗಿ ಸಿಗರೇಟು ಸೇದುವ ಧಾತಿ ಇರಲಿಲ್ಲ. ಭಯದಿಂದ ಸೇದ ತೊಡಗಿದನು.

ಚಿತ್ರವು ಮುಗಿಯಿತು. ಆದರೆ ಅದು ಸ್ವಲ್ಪವೂ ಚೆನ್ನಾಗಿರಲಿಲ್ಲ. ಅದನ್ನು ನೋಡದೇ ಇದ್ದಿದ್ದರೆ ಚೆನ್ನಾಗಿತ್ತು—ಎನ್ನುವಷ್ಟರಮಟ್ಟಿಗೆ ಇದ್ದಿತು.

ಇವರು ಬಾಲ್ಕನಿಯಿಂದ ಇಳಿದು ಬರುವಷ್ಟು ಹೊತ್ತಿಗೆ ಟ್ಯಾಕ್ಸಿಯವನು ಗಾಡಿಯನ್ನು ತಂದು ನಿಲ್ಲಿಸಿದನು.

ಟ್ಯಾಕ್ಸಿಯು ಹೊರಟನಂತರ ಅರಸು ರತ್ನೆಯು " ಆಟ ಸುತರಾಂ ಚೆನ್ನಾಗಿಲ್ಲ " ಎಂದಳು.

ಹನುಮಂತುವು ಧೈರ್ಯವನ್ನು ತಂದುಕೊಂಡು " ಅರವಿಂದನೆಂದರೆ

ನನಗೆ ಎಷ್ಟೋ ಸಮಾಧಾನ ತನ್ನ ಮಾಮತೆ. ಅವರು ಪಾರ್ಟಿ ಮಾಡಿರುವ ಚಿತ್ರ ಚೆನ್ನಾಗಿಲ್ಲ ವೆಂದರೆ ನನಗೆ ಏನೋ ಕಳೆದುಕೊಂಡಂತೆ ಆಗುತ್ತದೆ " ಎಂದನು.

" ಹೌದು. ಮೊದಲಿನಂತೆ ಅವನ ಚಿತ್ರಗಳೆಲ್ಲವೂ ಈಗ ಚೆನ್ನಾಗಿರು ವುದಿಲ್ಲ. ಅವನ ಅವನತಿಯು ಆರಂಭವಾದ ಹಾಗಿದೆ "

ಏನೂ ಅರಿಯದ ಮಗುವಿನಂತೆ ಅವನು " ಯಾಕೆ ಹೀಗಾಗುತ್ತದೆ ?" ಎಂದನು.

" ಈ ಅಕ್ಷರುಗಳು ದೊಡ್ಡವರಾಗುತ್ತ ಬಂದ ಹಾಗೆಲ್ಲಾ ಅಹಂಕಾರವು ಬೆಳೆಯುತ್ತದೆ. ಅವರು ಆರಂಭದಲ್ಲಿ ತೆಗೆದುಕೊಳ್ಳುವಂತೆ ಶ್ರದ್ಧೆಯನ್ನು ತೆಗೆದುಕೊಳ್ಳುವುದಿಲ್ಲ "

ಹನುಮಂತುವಿಗೆ ಆ ಮಾತು ನಿಜವಿರಬೇಕೆಂದು ತೋರಿತು. ಅವಳು ತನಗಿಂತ ಬುದ್ಧಿವಂತಳೆಂದೂ, ಹೆಚ್ಚು ವಿಷಯಗಳನ್ನು ತಿಳಿದವಳೆಂದೂ ಮನಸ್ಸಿನಲ್ಲಿಯೇ ಅಂದುಕೊಂಡನು.

ಸ್ವಲ್ಪ ಹೊತ್ತು ಯಾರೂ ಮಾತನಾಡದೇ ಸುಮ್ಮನಿದ್ದರು.

ಅನಂತರ ಅವಳು "ನಿನ್ನ ವಯಸ್ಸೆಷ್ಟು?" ಎಂದಳು.

"ಇಪ್ಪತ್ತುನಾಲ್ಕು ವರ್ಷ."

ಅವಳು ನಗುತ್ತಾ "ನಿನಗೆ ಇನ್ನೂ ಇಪ್ಪತ್ತು ಆಗಿರುವಂತೆಯೂ ಕಂಡುಬರುವುದಿಲ್ಲ. ಚೆನ್ನಾಗಿ ಬೆಳೆದಿದ್ದೀ, ಅಷ್ಟೆ. ಯಾಕೆ ಸುಳ್ಳು ಹೇಳು ತ್ತೀಯೆ?" ಎಂದಳು.

ಅವನೇಕೆ ಹಾಗೆಂದನೋ ಅವನಿಗೇ ಗೊತ್ತಿರಲಿಲ್ಲ. ಅಂತೂ ಹೇಳಿದ್ದನು.

ಕೂಡಲೇ ಅದಕ್ಕೊಂದು ಸಮಾಧಾನವನ್ನು ಯೋಚಿಸಿ "ವಯಸ್ಸಾಗಿಲ್ಲ ವೆಂದರೆ ಸರಿಯಾಗಿ ಸಂಬಳ ಕೊಡುವುದಿಲ್ಲವೆಂದು ವಯಸ್ಸು ಹೆಚ್ಚಾಗಿ ಹೇಳುವುದು ರೂಢಿಯಾಗಿದೆ. ನೀವು ಹೇಳುವುದು ಸರಿ. ನನಗಿನ್ನೂ ಇಪ್ಪತ್ತು ಸಹ ಆಗಿಲ್ಲ" ಎಂದನು.

ಹೋಟಲಿನ ಮಹಡಿಯ ಮೆಟ್ಟಿಲುಗಳನ್ನು ಹತ್ತುವಾಗ ಅರಸು ರತ್ನೆ ಅವನ ಕೈಗೆ ಬೀಗದ ಕೈ ಕೊಟ್ಟಳು. ಅವನೇ ರೂಮಿನ ಬಾಗಿಲು ತೆಗೆದನು.

ಅವಳು ಒಳಗೆ ಬಂದನಂತರ ಬೀಳ್ಕೊಂಡು ಹೋಗಲು ಬಾಗಿಲ ಬಳಿ ನಮ್ರನಾಗಿ ನಿಂತುಕೊಂಡನು.

ಅರಸು ರತ್ನೆಯು ಮಂಚದ ಮೇಲೆ ಕುಳಿತುಕೊಂಡು " ಬಾಗಿಲು ಸೇರಿಸು. ಆ ಸಣ್ಣ ಮೇಜುವನ್ನು ಇಲ್ಲಿ ಹಾಕು. ಗ್ಲಾಸುಗಳೂ ಸೋಡಾಗಳೂ ಎಲ್ಲಿಲ್ಲಿಯೋ ಇರಬೇಕು. ಅದನ್ನು ತೆಗೆದಿಡು. ಆ ದಿಂಬಿನ ಕೆಳಗೆ ಜಿನ್ ಬಾಟಲಿದೆ. ತೆಗೆದುಕೋ " ಎಂದಳು.

ಹನುಮಂತು ತನಗೆ ಹೇಳಿದಂತೆ ಮಾಡಿದನು.

ಅವಳು ಎರಡು ಗ್ಲಾಸುಗಳಿಗೆ ಜಿನ್ ಬಗ್ಗಿಸಿ, ಸೋಡಾ ಸುರಿದಳು. ಒಂದನ್ನು ಅವನ ಕಡೆಗೆ ತಳ್ಳಿ, ಮತ್ತೊಂದನ್ನು ತಾನು ತೆಗೆದುಕೊಂಡು ಸಿಪ್ ಮಾಡಿ, ಗ್ಲಾಸನ್ನು ಕೆಳಗಿಟ್ಟಳು.

ಹನುಮಂತೂ ನಿಂತೇ ಇದ್ದನು. ಅವನು ಗ್ಲಾಸ್ ಕೈಗೆತ್ತಿಕೊಳ್ಳಲಿಲ್ಲ.

"ಏನು ನೋಡುತ್ತೀಯೆ ? ಕುಳಿತುಕೋ. ಅದನ್ನು ತೆಗೆದುಕೋ."

ಅದುವರೆವಿಗೆ ಅವನು ಮಾದಕ ಪದಾರ್ಥಗಳನ್ನು ಸೇವನೆ ಮಾಡಿರಲಿಲ್ಲ. ಕುಡಿದು ಹೇಗಿರುತ್ತದೆಯೋ ನೋಡಬೇಕೆಂದು ಬಹುದಿನಗಳಿಂದಲೂ ಮನಸ್ಸಿತ್ತು. ಆಶೆಯನ್ನು ಈಡೇರಿಸಿಕೊಳ್ಳುವ ಸಂದರ್ಭವು ತನಗೆ ತಾನೇ ಬಂದಿದೆ.

ಅರಸುರತ್ನೆ ಬಲಾತ್ಕಾರ ಮಾಡಲು " ನನಗೆ ಇದು ರೂಢಿ ಇಲ್ಲ " ಎಂದನು.

"ತೆಗೆದುಕೋ. ರೂಢಿಯಾಗುತ್ತದೆ."

"ನಾವೆಲ್ಲಾ ಹೀಗೆ ಕೋಣೆಗೆ ಬಂದರೆ ಯಜಮಾನರು ಕೆಲಸದಿಂದ ತೆಗೆದುಬಿಡುತ್ತಾರೆ. ನಾಳೆಯಿಂದ ಬೀದಿಯಲ್ಲಿ ನಿಲ್ಲಬೇಕಾಗುತ್ತದೆ."

"ಕೆಲಸ ಹೋದರೆ ನಾನು ಕೊಡಿಸುತ್ತೇನೆ."

ಸಂಕೋಚ ಪಡುತ್ತಾ, ಪಡುತ್ತಾ ಕುಳಿತು ಗ್ಲಾಸ್ ಕೈಗೆತ್ತಿಕೊಂಡು ನೀರು, ಕುಡಿದಂತೆ ಕುಡಿದು ಬಿಟ್ಟನು.

ಅವಳು ಮುಗುಳುನಗೆಯನ್ನು ನಗುತ್ತಾ ಇನ್ನೊಂದು ಬಾರಿ ಸ್ವಲ್ಪ ಹೆಚ್ಚಾಗಿಯೇ ಜಿನ್ ಬಗ್ಗಿಸಿದಳು.

ಅರಸುರತ್ನೆಯು ನಾಲ್ಕನೆಯ ಬಾರಿ ಹನುಮಂತುವಿನ ಗ್ಲಾಸಿಗೆ ಜಿನ್ ಬಗ್ಗಿಸುತ್ತಿದ್ದಾಗ ಅವನೊಂದು ಗೊಂದಲಕ್ಕೆ ಬಿದ್ದನು.

ಇವಳು ತನ್ನನ್ನು ಪ್ರೀತಿಸುತ್ತಾಳೆಯೆ ? ಅವಕ್ಕವನು ಉತ್ತರ ಕೊಡಲಾರದವನಾಗಿದ್ದನು. ಆದರೂ ಅವಳೇಕೆ ತನ್ನನ್ನು ಸಿನಿಮಾಗೆ ಕರೆದುಕೊಂಡು ಹೋದಳು ? ತನಗೇಕೆ ಕುಡಿಸುತ್ತಿದ್ದಾಳೆ ? ಇದರಿಂದ ಪ್ರೀತಿಸುತ್ತಿದ್ದಾಳೆಯೇನೋ ಎನ್ನಿಸಿತು.

ಆಗ ಅವನಿಗೆ ಶ್ಯಾಮಲಮ್ಮನು ತನ್ನನ್ನು ಹಾಸಿಗೆಯ ಮೇಲೆ ಕೂರಿಸಿಕೊಂಡು ಮಾತನಾಡುತ್ತಿದ್ದುದು ನೆನಪಿಗೆ ಬಂದಿತು. ಅರಸುರತ್ನೆಯ ಮುಖಭಾವದಲ್ಲಿಯಾಗಲಿ, ನಡತೆಯಲ್ಲಿಯಾಗಲೀ, ಶ್ಯಾಮಲಮ್ಮನ ತರಹ ಕಂಡುಬರಲಿಲ್ಲ.

ಹಾಗಾದರೆ ಇದೇನು?

ಅವಳು ಹಾಕಿದ್ದ ಜಿನ್ ಕುಡಿಯುತ್ತಾ "ನೀವು ಹಾಗೆಯೇ ಇಟ್ಟಿದ್ದೀರಲ್ಲಾ" ಎಂದನು.

ಅವಳ ಗ್ಲಾಸಿನಲ್ಲಿ ಮೊದಲು ಹಾಕಿದ್ದು ಹಾಗೆಯೇ ಇದ್ದಿತು.

"ನಾನು ಕುಡಿಯುವುದು ನಿಧಾನ."

"ನಾನು ಬೇಗ ಬೇಗ ಕುಡಿದೆ. ಆದರೂ ಏನೂ ಆಗಲೇ ಇಲ್ಲ."

ಅವನ ಮಾತು ಕೇಳಿ, ಅರಸುರತ್ನೆ ನಕ್ಕಳು.

"ನಿನಗೆ ಸ್ವಲ್ಪ ಆಗಿದೆ. ಗೊತ್ತಾಗುವಂತೆ ಆಗಬೇಕಾದರೆ ಕಾಲ ಬೇಕು. ಜಿನ್ ಬೇಡ."

ಏನೋ ಮಾತನಾಡಲು ಹೋಗಿ ಹೀಗೆನ್ನಿಸಿ ಕೊಳ್ಳಬೇಕಾಯಿತಲ್ಲ- ಎಂದು ಅವನು ಪೆಚ್ಚಾದನು.

ಅದನ್ನು ಗಮನಿಸಿದ ಅರಸುರತ್ನೆ "ನಾನು ಹಾಗೆ ಹೇಳಿದ್ದು ನಿನಗೆ ಸಂಕೋಚವಾಯಿತೇನು? ಹಾಗೆಲ್ಲಾ ಮಾಡಬೇಡ. ಕುಡಿ. ನಿನ್ನಂತಹ ಹುಡುಗರು ಹೆಚ್ಚಾಗಿ ಕುಡಿಯುತ್ತಾ ಮಾತನಾಡುತ್ತಿದ್ದರೆ ನೋಡುತ್ತಾ ಕೇಳಲು ನನಗೆ ಬಹಳ ಖುಷಿ" ಎಂದಳು.

ಅವಳ ಮಾತು ತೆಗೆದುಹಾಕಲಾರದೇ ಕುಡಿಯುತೊಡಗಿದನು.

ಅವಳು "ನೀನು ಕುಡಿಯುವುದು ಇದೇ ಮೊದಲನೆಯ ಬಾರಿ ಎಂದು ಕಂಡು ಬರುತ್ತದೆ" ಎಂದಳು.

ನಾಚಿಕೆಯಿಂದ "ಹೌದು" ಎಂದನು.

"ಮೊದಲನೆಯ ಬಾರಿ ಕುಡಿಯುತ್ತಿರುವುದು ಎನ್ನುವುದಕ್ಕೆ ನಾಚಿಕೆಯೇನು? ಕುಡಿಯುವವರು ಮೊದಲನೆಯ ಬಾರಿ ಕುಡಿಯಲೇ ಬೇಕಲ್ಲವೇ?"

ಸೂಕ್ಷ್ಮಮತಿಯಾದ ಅರಸು ರತ್ನ ಹನುಮಂತುವಿನ ತೇಲುವ ಕಣ್ಣುಗಳನ್ನು ನೋಡಿ ಜಿನ್ ತಲೆಗೆ ಹತ್ತಿದೆ-ಎಂದು ಅರ್ಥ ಮಾಡಿಕೊಂಡಳು.

ಅವನ ವಿಷಯಗಳನ್ನು ಕುರಿತು ಪ್ರಶ್ನೆ ಮಾಡಿದಳು.

ಹನುಮಂತುವು ತನ್ನ ವಿಷಯವನ್ನೆಲ್ಲಾ ಹೇಳಿದನು. ತಾನು ಮಂಡ್ಯದವನೆಂದೂ, ತನ್ನ ಅಕ್ಕ, ಅಪ್ಪ ಇದ್ದಾರೆಂದೂ, ಅವರೆಲ್ಲರೂ ಬಡವರೆಂದೂ ಹೇಳಿದನು. ತಾನು ನಾಟಕಗಳಲ್ಲಿ ಪಾರ್ಟ್ ಮಾಡಲಾರಂಭಿಸಿದುದನ್ನು ತಿಳಿಸಿದನು. ಅದರಿಂದ ಅವರಿಗೂ ತನಗೂ ಅಸಮಾಧಾನವಾಯಿತೆಂದನು. ಶ್ಯಾಮಲಮ್ಮನ ಮನೆಯಲ್ಲಿ ನಡೆದ ಘಟನೆಯನ್ನೂ, ತಾನು ಓಡಿ ಬಂದ ನಿಜವಾದ ಕಾರಣವನ್ನೂ ಹೇಳದೇ ಮಿಕ್ಕ ವಿಷಯವೆಲ್ಲವನ್ನೂ ಹೇಳಿದನು.

ಕಡೆಯಲ್ಲಿ ತೊದಲುತ್ತಾ "ನನಗೆ ಪಾರ್ಟ್ ಮಾಡಬೇಕೆಂದು ಬಹಳ ಆಸೆ. ಹಳ್ಳಿ ಊರಿನಲ್ಲಿರುವುದಕ್ಕಿಂತ ಬೆಂಗಳೂರಿನಂತಹ ಮಹಾ ನಗರದಲ್ಲಿರುವುದು ಒಳ್ಳೆಯದೆಂದು ಇಲ್ಲಿಗೆ ಬಂದೆ" ಎಂದನು.

"ನಿನ್ನಲ್ಲಿ ಉತ್ತಮ ನಟನಾಗುವ ಎಲ್ಲ ಲಕ್ಷಣಗಳೂ ಇವೆ"

"ನಾನೊಂದು ಮಾತು ಹೇಳಿದರೆ ನೀವೇನೆನ್ನುತ್ತೀರೋ?"

"ಯಾಕೆ, ಏನೋ ಎನ್ನಬೇಕು? ಹೇಳು"

"ನಾನು ಎಷ್ಟೋ ನಾಟಕಗಳಲ್ಲಿ ಪಾರ್ಟ್ ಮಾಡಿದ್ದೇನೆ. ಅದರಿಂದ ಸುಖವಿಲ್ಲ. ಏನಾದರೂ ಮಾಡಿ ಸಿನಿಮಾದಲ್ಲಿ ಪಾರ್ಟ್ ಮಾಡಬೇಕೆಂದಿದ್ದೇನೆ"

"ಅದೆಲ್ಲಾ ಚಾನ್ಸ್. ಕೆಲಸಕ್ಕೆ ಬಾರದವರು ಎಷ್ಟೋ ದೊಡ್ಡ ಅಭಿನೇತೃಗಳಾಗಿದ್ದಾರೆ"

"ನನಗೆ ಸಿನಿಮಾದಲ್ಲಿ ದೊಡ್ಡ ನಟನಾಗ ಬೇಕು-ಎಂದಿದೆ. ಅರವಿಂದ

ನಂತಹ ನಟನಾಗಬೇಕು. ಒಳ್ಳೆ ಒಳ್ಳೇ ಚಿತ್ರಗಳಲ್ಲಿ ಪಾರ್ಟು ಮಾಡಬೇಕು. ಚೆನ್ನಾಗಿ ಪಾರ್ಟು ಮಾಡಬೇಕು. ಈ ದಿನ ಅವನು ಮಾಡಿದ್ದಂತೆ ಆಗ ಬಾರದು-ಎಂದೆಲ್ಲಾ ಇದೆ ”

ಅವಳು ಮಾತನಾಡಲಿಲ್ಲ. ಅವನು ಹೇಳುವುದನ್ನು ಮೌನವಾಗಿ ಕೇಳುತ್ತಾ ಕುಳಿತುಕೊಂಡಳು. ಅವನು ಮಾತನಾಡುವುದನ್ನು ಕೇಳುತ್ತಿರ ಬೇಕು-ಎಂದವಳಿಗೆ ಆಸೆಯಿತ್ತು. ಮಾತು ನಿಂತಾಗ ನಿರಾಶೆಯಾದಂ ತಾಯಿತು.

ಜಿಣ್ ಸಿಪ್ ಮಾಡುತ್ತಾ ಕುಳಿತಿದ್ದವಳು ದಿಂಬಿನ ಮೇಲೆ ಒರಗಿ ಕೊಂಡಿದ್ದಳು.

ಅವನ ಗ್ಲಾಸು ಖಾಲಿಯಾಗಿದ್ದುದನ್ನು ನೋಡಿ ಅರಸು ರತ್ನಿ ಜಿಣ್ ಹಾಕುವುದಕ್ಕೆ ಹೋದಳು.

ಅವನು “ ಬೇಡ. ಈಗಲೇ ಹೊತ್ತಾಯಿತು. ಬೆಳಗಾಗ ಬೇಗ ಏಳಬೇಕು ” ಎಂದು ಹೇಳಿ ಮೇಲೆದ್ದನು.

ಅವಳು “ ಹೂ ” ಎಂದಳು.

ಅವನು ಮಾತನಾಡಲಿಲ್ಲ. ಆದರೆ ಅವಳನ್ನು ತದೇಕ ದೃಷ್ಟಿಯಿಂದ ಗಳಿಗೆಯ ಹೊತ್ತು ನೋಡಿ, ಮುಗುಳ್ನಗೆ ನಕ್ಕು ಹೊರಟು ಹೋದನು.

ಮಾರನೆಯ ದಿನ ಬೆಳಗಾಗ ಅರಸುರತ್ನಿ ಹೊರಟು ಹೋದಳು.

ಹನುಮಂತು ಮಂಜುಳೆಗೆ ಒಂದು ಕಾಗದ ಬರೆದನು. ತಾನು ಅವ ಳೊಡನೆ ಆ ದಿನ ನಡೆದುಕೊಂಡ ತರಹಕ್ಕೆ ವಿವರಣೆಯನ್ನು ಕೊಟ್ಟು ಉದ್ದ ವಾಗಿ ಬರೆದನು. ಸರಿಯಲ್ಲವೆಂದು ಅದನ್ನು ಹರಿದುಹಾಕಿದನು. ಆದರೆ ತನ್ನ ವಿಷಯವಾಗಿ ಅವಳೇನೆಂದು ಕೊಂಡಿದ್ದಾಳೆ—ಎಂಬುದನ್ನು ತಿಳಿದು ಕೊಳ್ಳಲು ಅವನ ಮನಸ್ಸು ಪತರಗುಟ್ಟುತ್ತಿತ್ತು. ಅಷ್ಟಾದ ಮೇಲೆಯೂ ಆ ದಿನ ಸಂಜೆ ಪಾರ್ಕಿಗೆ ಬಂದು ತನಗೆ ಹುಷಾರಿ ಕೊಟ್ಟಿದ್ದಾಳೆ. ಅಂದರೆ ಅವಳು ತನ್ನನ್ನು ಪ್ರೀತಿಸುತ್ತಲೇ ಇರಬೇಕು. ಹಾಗಿರುವಾಗ ತಾನೂ ಪ್ರೀತಿಸುತ್ತಿದ್ದೇನೆಂದು ಅವಳಿಗೆ ಒಂದು ಬಾರಿಯಾದರೂ ತಿಳಿಸುವುದು ತನ್ನ ಕರ್ತವ್ಯವೆಂದು ಕೊಂಡನು. ಆದರಿಂದ ಅವಳನ್ನು ಪ್ರೀತಿಸುತ್ತಿರುವುದಾಗಿ

ಒಂದು ಕಾಗದವನ್ನು ಬರೆದು ಅವಳ ಸ್ಕೂಲು ಅಡ್ರೆಸ್‌ಗೆ ಪೋಸ್ಟ್ ಮಾಡಿದನು. ಡಬ್ಬದಲ್ಲಿ ಹಾಕಿದನಂತರ ಆ ಕಾಗದವನ್ನು ಹರಿದು ಹಾಕಿದ್ದರೆ ಚೆನ್ನಾಗಿದ್ದಿತೆಂದು ಕೊಂಡನು. ಆದರೆ ಅವಳಿಂದ ಉತ್ತರ ಬರಲಿಲ್ಲ.

## ೫

ಪುನಃ ಅವನಿಗೆ ಅರಸುರತ್ನೆಯ ಭೇಟಿಯಾಯಿತು. ಆ ಬಾರಿ ಅವಳು ವಿರಾಮದಲ್ಲಿ ಬಂದು ಇಳಿಯಲಿಲ್ಲ. ದಂಡಿನ ಹೋಟಲೊಂದರಲ್ಲಿ ಬಂದು ಇಳಿದುಕೊಂಡಿದ್ದಳು. ವಿರಾಮಕ್ಕೆ ಜನ ಕಳುಹಿಸಿ ಹನುಮಂತು ವನ್ನು ಕರೆಸಿದಳು.

ಅವನನ್ನು ನೋಡಿದ ಕೂಡಲೇ ಅರಸುರತ್ನೆಗೆ ಆಶ್ಚರ್ಯವಾಯಿತು. ಹಿಂದೆ ನೋಡಿದಾಗ ಇದ್ದಂತೆ ಇರಲಿಲ್ಲ. ಮಲ್ ಪಾಯಿಜಾಮಾ ಹಾಕಿ ಕೊಂಡು ಸಾಧಾರಣವಾದ ಸಿಲ್ಕ್ ಜುಬ್ಬಾ ಹಾಕಿಕೊಂಡಿದ್ದನು. ಕಾಲಿನಲ್ಲಿ ಒಳ್ಳೆಯ ಚಪ್ಪಲಿ ಇತ್ತು. ಮುಖಕ್ಷೌರ ಮಾಡಿಕೊಂಡು ಎಣ್ಣೆ ಹಾಕಿ ಕ್ರಾಪ್ ಬಾಚಿಕೊಂಡಿದ್ದನು.

ಅರಸುರತ್ನೆ "ಹುಡುಗ ಹೋದ ಬಾರಿ ನೋಡಿದುದಕ್ಕಿಂತಲೂ ಸುಧಾ ರಿಸಿದ್ದಾನೆ" ಎಂದುಕೊಂಡಳು.

"ಒಂದು ವಾರ ರಜಾ ತೆಗೆದುಕೊಂಡು ಇಲ್ಲಿಯೇ ಬಂದಿರು. ಸ್ವಲ್ಪ ಕೆಲಸವಿದೆ."

ಹನುಮಂತು ಹೋಟಲಿಗೆ ಹೋಗಿ ಯಜಮಾನರನ್ನು ಕಂಡು ತಾನು ಊರಿಗೆ ಹೋಗಿ ಮನೆಯವರನ್ನು ನೋಡಿಕೊಂಡು ಬರುವುದಾಗಿಯೂ,

ಒಂದು ವಾರ ರಜಾ ಬೇಕೆಂದೂ ಕೇಳಿದನು. ಅವನೂ ಒಂದು ಮೂರು ನಾಲ್ಕು ತಿಂಗಳಾಗಿದ್ದಿತು. ಅನಂತಯ್ಯನವರು ಒಪ್ಪಿಕೊಂಡರು.

ಅದೇ ದಿನ ಹನುಮಂತು ಬಂದು ಅರಸುರತ್ನಿಯ ಕೋಣೆಯಲ್ಲಿಯೇ ಇರಲಾರಂಭ ಮಾಡಿದನು. ಬೆಳಗಿನಿಂದ ಸಂಜೆಯವರೆವಿಗೆ ಇಬ್ಬರೂ ಒಟ್ಟಿಗೇ ಇರುತ್ತಿದ್ದರು. ಅವಳು ಬೆಳಗಾಗ ಹೋಟಲಿನಿಂದ ಹೊರಟರೆ ಪುನಃ ವಾಪಸ್ಸು ಬರುವವರೆಗೆ ಓಡುವ ಟ್ಯಾಕ್ಸಿಯಲ್ಲಿಯೇ ಇರುತ್ತಿದ್ದಳು. ಅನೇಕ ಹೋಟಲುಗಳಿಗೆ ಹೋಗುತ್ತಿದ್ದಳು. ಬಗೆಬಗೆಯ ಜನಗಳನ್ನು ನೋಡಿ ಮಾತನಾಡುತ್ತಿದ್ದಳು. ದೊಡ್ಡ ಮನುಷ್ಯರಿಂದ ಹಿಡಿದು ಜಟಕಾ ಸಾಬಿಗಳಂತಹ ಮನುಷ್ಯರವರೆವಿಗೆ ಅವಳಿಗೆ ಪರಿಚಯವಿರುವಂತಿತ್ತು. ಕೆಲವರೊಡನೆ ಕೆಲಸವಿದ್ದು ಮಾತನಾಡುವಂತೆಯೂ, ಮತ್ತೆ ಕೆಲವರೊಡನೆ ಕೆಲಸವಿಲ್ಲದೇ ವೃಥಾ ಕಾಲಕ್ಷೇಪ ಮಾಡುವಂತೆಯೂ ಇರುತ್ತಿತ್ತು.

ಮಧ್ಯಾನ್ಹ ಹೋಟಲಿಗೆ ವಾಪ್ಸು ಬಂದನಂತರ ಊಟ ಮುಗಿಸಿ ಮಲಗಿಕೊಂಡು ವಿಶ್ರಾಂತಿ ಪಡೆಯುತ್ತಿದ್ದಳು. ಸಂಜೆ ಸ್ನಾನ ಮಾಡಿ, ಹೊಸ ಉಡಿಗೆ ತೊಡಿಗೆಗಳನ್ನು ತೊಟ್ಟು, ಹೆರಳು ಕಟ್ಟಿ, ಗಂಟೆಯ ಹೊತ್ತು ಶೃಂಗಾರ ಮಾಡಿಕೊಂಡು ಹೊರಟರೆ ಆಗಲೂ ಯಾರನ್ನಾದರೂ ನೋಡುವ ಕೆಲಸವಿರುತ್ತಿತ್ತು.

ಆದಾದನಂತರ ತೋರಿದರೆ ಸಿನಿಮಾಗಳಿಗೆ ಹೋಗುತ್ತಿದ್ದಳು. ಇಲ್ಲದಿದ್ದರೆ ಯಾವುದಾದರೂ ಬಾರಿನಲ್ಲಿ ಅರ್ಧ ರಾತ್ರಿಯವರೆವಿಗೆ ಕುಳಿತಿದ್ದು ವಾಪ್ಸು ಬರುವಳು. ಸಾಧಾರಣವಾಗಿ ರಾತ್ರಿ ಊಟವಿರುತ್ತಿರಲಿಲ್ಲ.

ಅರಸು ರತ್ನಿಯನ್ನು ನೋಡುತ್ತಾ ನೋಡುತ್ತಾ ಹನುಮಂತುವಿಗೆ ಅವಳು ಬಗೆಹರಿಯದ ಸಮಸ್ಯೆಯಾಗುತ್ತ ಬಂದಳು.

ಒಂದು ದಿನ ರಾತ್ರಿ ಅವರೆಲ್ಲಿಯೂ ಹೋಗದೇ ತಮ್ಮ ಕೋಣೆಯಲ್ಲಿಯೇ ಕುಳಿತು ಕುಡಿಯುತ್ತಿದ್ದರು. ಸಾಧಾರಣವಾಗಿ ಹೆಚ್ಚು ಮಾತನಾಡದೇ ಇರುತ್ತಿದ್ದ ಅರಸು ರತ್ನಿಯು ಆ ದಿನ ಬಹಳ ಮಾತನಾಡಿದಳು.

" ನಿನ್ನನ್ನು ನೋಡಿದ ಕೂಡಲೇ ನನಗೊಂದು ಬಗೆಯ ವಿಶ್ವಾಸ

ಉಂಟಾಯಿತು. ಯಾವಾಗಲೂ ನೀನು ಎದುರಿಗೇ ಇರಬೇಕು. ಮಾತನಾಡುತ್ತಿರಬೇಕು–ಎನ್ನಿಸುತ್ತದೆ " ಎಂದಳು.

ಸ್ವಲ್ಪ ಹೊತ್ತು ಸುಮ್ಮನಿದ್ದು " ನೀನು ದೊಡ್ಡ ನಟನಾಗಬೇಕು ಎಂದು ಆಸೆ ಇಟ್ಟುಕೊಂಡಿದ್ದೀಯೆ. ಅದಕ್ಕಾಗಿ ಹೀಗಿದ್ದರೆ ಆಗುತ್ತದೆಯೇ? ನೀನು ಹೋಟೆಲಿನ ಸರ್ವರ್ ಆಗಿದ್ದರೆ ಯಾರು ಲಕ್ಷ್ಯ ಮಾಡುತ್ತಾರೆ. ನೀನು ದೊಡ್ಡ ಮನುಷ್ಯನಂತೆ ಕಾಣಬೇಕು. ಸಂಗೀತ ಕಲಿಯಬೇಕು. ಅವರಿವರನ್ನು ಹಿಡಿದು ಸಿನಿಮಾದವರಿಗೆ ಶಿಫಾರಸು ಮಾಡಿಸಬೇಕು " ಎಂದಳು.

ಮಂಚದ ಮೇಲೆ ಕುಳಿತಿದ್ದ ಅರಸು ರತ್ನಿ ಎಲ್ಲಿಯೋ ನೋಡುತ್ತಾ ಈ ಮಾತುಗಳನ್ನು ಹೇಳಿದಳು.

ಹನುಮಂತುವಿಗೆ ಅವಳು ಹೇಳಿದ್ದು ಅಕ್ಷರಶಃ ನಿಜವೆನ್ನಿಸಿತು. ಬೆಂಗಳೂರಿಗೆ ಬಂದ ಮೇಲೆ ನಾಟಕ ಕಂಪನಿಯ ಮಾಲೀಕರೊಬ್ಬರು ಹೋಟೆಲು ಸರ್ವರ್ ನಟನಾಗುವುದೆಂದರೇನು ಎಂದು ಗದ್ದರಿಸಿ ಕಳುಹಿಸಿದ್ದರು.

ಅವನು " ನೀವು ಹೇಳುವುದೆಲ್ಲವೂ ನಿಜ. ಆದರೆ ಅಷ್ಟೆಲ್ಲಾ ಮಾಡಲು ನನ್ನ ಕೈಲಾಗುತ್ತದೆಯೇ ?" ಎಂದನು.

ಅರಸುರತ್ನಿ ಅವನ ಕಣ್ಣುಗಳನ್ನೇ ನೋಡುತ್ತಾ "ನೀನು ಹೇಳಿದಂತೆ ಕೇಳುವುದಾದರೆ ನಾನು ಅದಕ್ಕೆಲ್ಲಾ ಸಹಾಯ ಮಾಡುತ್ತೇನೆ. " ಎಂದಳು.

ಅವಳು ತೋರಿದ್ದನ್ನು ಮಾಡಬಲ್ಲಳೆಂದು ಅಷ್ಟು ಹೊತ್ತಿಗಾಗಲೇ ಹನುಮಂತನ ಮನಸ್ಸಿಗೆ ಬಂದಿದ್ದಿತು. ಅಂತಹವಳು " ನೀನು ಅರವಿಂದನಂತಹ ನಟನಾಗಲು ಸಹಾಯ ಮಾಡುತ್ತೇನೆ " ಎಂದದ್ದು ಅವನಿಗೆ ಆಕಾಶವೇ ಬಾಗಿಲು ತೆರೆದಂತಾಯಿತು.

ಆಸಕ್ತಿಯಿಂದ ಅವಳ ಕಡೆ ನೋಡಿದನು.

"ಕೇಳು, ಹನುಮಂತು. ನಾನು ಆಗಾಗ ಈ ಊರಿಗೆ ಬರುತ್ತೇನೆ. ಬಂದಾಗಲೆಲ್ಲಾ ಹೋಟೆಲುಗಳಲ್ಲಿರುತ್ತೇನೆ. ಇದು ನನಗೆ ಬೇಜಾರಾಗಿದೆ. ಈಗ ಒಂದು ಮನೆಯನ್ನು ಮಾಡಬೇಕೆಂದಿದ್ದೇನೆ. ನಮ್ಮಮ್ಮ ಮದರಾಸಿನಲ್ಲಿದ್ದಾರೆ. ಹವಾ ಬದಲಾವಣೆಗೆ ಬೆಂಗಳೂರಿಗೆ ಬರಬೇಕೆಂದಿದ್ದಾರೆ. ನಾನೋ

ಒಂದು ದಿನ ಊರಿನಲ್ಲಿದ್ದರೆ ಮತ್ತೊಂದು ದಿನ ಇರುವುದಿಲ್ಲ. ಅವರನ್ನು ನೋಡಿಕೊಳ್ಳುವವರಾರು-ಎಂಬುದೇ ಯೋಚನೆಯಾಗಿತ್ತು. ಮನೆ ಮಾಡುತ್ತೇನೆ. ನಮ್ಮ ತಾಯಿ ಇಲ್ಲಿಯೇ ಬಂದಿರುತ್ತಾರೆ. ನಾನಿಲ್ಲದಾಗ ನೀನು ಅವರನ್ನು ನೋಡಿಕೊಳ್ಳಬೇಕು. ನಾನು ಹೇಳುವಂತೆ ನೀನು ಕೇಳುವುದಾದರೆ ನಾನು ನಿನ್ನನ್ನು ಏನು ಮಾಡುತ್ತೇನೆಂಬೋ, ನೋಡು. ನಾನು ಹೇಳಿದ್ದು ತಿಳಿಯಿತೇ ?"

ಅವಳು ಹೇಳಿದ್ದು ವಾಸ್ತವವಾಗಿಯೂ ಹನುಮಂತುವಿಗೆ ಸರಿಯಾಗಿ ತಿಳಿಯಲಿಲ್ಲ. ಆದರೂ ಎಲ್ಲವನ್ನೂ ತಿಳಿದುಕೊಂಡವನಂತೆ ತಲೆಯಾಡಿಸಿದನು.

ಉತ್ಸಾಹದಿಂದ ಅವಳು "ಹಳ್ಳಿಯಲ್ಲಿ ಮಾಡುತ್ತಿದ್ದ ಪಾರ್ಟ್ ಗೀರ್ಟ್ ಪ್ರಯೋಜನವಿಲ್ಲ. ಸರಿಯಾಗಿ ಅಭಿನಯವನ್ನು ಕಲಿಯಬೇಕು. ಸಂಗೀತ ಬರಬೇಕು. ನಿನ್ನ ಈ ಹೆಸರನ್ನು ಬದಲಾಯಿಸಬೇಕು. ಸಿನಿಮಾ ನಿರ್ಮಾತೃಗಳ ಸ್ನೇಹ ಮಾಡಿ ಒಳ್ಳೆಯ ಚಿತ್ರದಲ್ಲಿ ಹೀರೋ ಪಾರ್ಟ್ ಮಾಡಬೇಕು. ಇಷ್ಟು ನಾನು ಮಾಡಿಕೊಡುತ್ತೇನೆ. ಅನಂತರ ಅದೃಷ್ಟವಿದ್ದು ನಿನ್ನ ಅಭಿನಯವು ಜನಗಳಿಗೆ ಹಿಡಿಸಿದರೆ ನೀನು ದೊಡ್ಡ ನಟನಾಗುತ್ತೀಯೆ. ಇಲ್ಲದಿದ್ದರೆ ಇಲ್ಲ." ಎಂದಳು.

ಅರಸುರತ್ನ ಬಹಳವಾಗಿ ಕುಡಿದಿದ್ದಳು. ಇನ್ನಷ್ಟು ಬಗ್ಗಿಸಿಕೊಂಡು ಕುಡಿಯುತ್ತಾ "ನಮ್ಮಮ್ಮ. ಅವಳು ಮುದುಕಿ. ನಾನು ಸರಿಯಾಗಿ ನೋಡಿಕೊಳ್ಳುವುದಿಲ್ಲವೆಂದು ಬೈಯುತ್ತಾಳೆ. ನನ್ನ ಕೆಲಸಗಳಲ್ಲಿ ನನಗೆ ಪುರಸತ್ತಾಗುತ್ತದೆಯೇ, ಹನುಮಂತು" ಎಂದಳು.

" ಇಲ್ಲ. ನಾನು ನೋಡುತ್ತಿದ್ದೇನಲ್ಲ. ನಿನಗೆ ಒಂದು ನಿಮಿಷವೂ ಪುರಸತ್ತಾಗುವುದಿಲ್ಲ "

" ಅಮ್ಮ ! ಅವಳಿಗೂ ಕಷ್ಟ. ಅವಳಿಗೆ ನಾನೊಬ್ಬಳೇ ಮಗಳು. ನಾನು ಸರಿಯಾಗಿ ನೋಡಿಕೊಳ್ಳದಿದ್ದರೆ ಅವಳಿಗೆ ತಾನೇ ಯಾರಿದ್ದಾರೆ ? ಹನುಮಂತು. ಅವಳು ಮುದುಕಿ. ಇಂದೋ ನಾಳೆಯೋ ಸತ್ತು ಹೋಗುತ್ತಾಳೆ. ಆಗ ನಾನು ಅನಾಥಳಾಗುತ್ತೇನೆ—ಅಮ್ಮಾ——ಅಮ್ಮಾ——"

ತಟ್ಟನೆ ಅವಳಿಗೆ ಅಳು ಬಂದಿತು. ಅದರಿಂದ ಮಾತು ಅರ್ಧದಲ್ಲಿ ನಿಂತು ಹೋಯಿತು. ಬಿಕ್ಕಿ ಬಿಕ್ಕಿ ಅಳತೊಡಗಿದಳು.

" ನೀವು ಅಳಬೇಡಿ. ನಾನು ನಿಮ್ಮನ್ನು ನೋಡಿಕೊಳ್ಳುತ್ತೇನೆ "

" ನೀನು ಅಂತಹವನೆಂದು ನನಗೆ ಗೊತ್ತು. ನೋಡಿದ ಕೂಡಲೇ ಕಂಡುಕೊಂಡೆ. ಅದರಿಂದಲೇ ನಿನ್ನನ್ನು ಹಿಡಿದೆ "

ಆಗ ಹನುಮಂತುವಿನ ಮನಸ್ಸಿಗೊಂದು ಆಲೋಚನೆಯು ಬಂದಿತು. ಅರಸು ರತ್ನೆಯನ್ನು ನೋಡಿದಂದಿನಿಂದಲೂ ಅವಳಿಗೆ ತನ್ನ ಮೇಲೆ ಪ್ರೀತಿ ಇದೆ ಎಂದು ಅವನಿಗೆ ತೋರುತ್ತಿತ್ತು. ಈ ಸಮಯದಲ್ಲಿ ಅದನ್ನು ಇತ್ಯರ್ಥ ಮಾಡಿಬಿಡ ಬೇಕೆಂದುಕೊಂಡನು.

ಮಧ್ಯದಲ್ಲಿ ಶ್ಯಾಮಲೆಯು ಮನೆಯಲ್ಲಿ ಆದಂತಾದರೆ———?

ಅನನುಭವದಿಂದ ಕೂಡಿದ್ದರೂ ಅವನ ಮನಸ್ಸು " ಇವಳಿಂದ ನಿನಗೇನಾದರೂ ಆಗಬೇಕಾದರೆ ನೀನು ಅದನ್ನು ಈಗಲೇ ಇತ್ಯರ್ಥ ಮಾಡ ಬೇಕು " ಎಂದು ಎಚ್ಚರಿಸಿತು.

ಅರಸು ರತ್ನೆ ಅಳುವುದನ್ನು ನಿಲ್ಲಿಸಿರಲಿಲ್ಲ. ಅವಳ ಕಣ್ಣುಗಳಲ್ಲಿ ನಾಲ್ಕಾರು ತೊಟ್ಟು ನೀರು ಬಂದಿದ್ದಿತು.

ಹನುಮಂತು ಕುರ್ಚಿಯ ಮೇಲೆ ಕುಳಿತಿದ್ದವನು ಅವಳ ಪಕ್ಕದಲ್ಲಿ ಹೋಗಿ ಕುಳಿತುಕೊಂಡು ತನ್ನ ಜುಬ್ಬಾದ ಕೊನೆಯಿಂದ ಅವಳ ಕಣ್ಣೀರನ್ನು ಒರಸುತ್ತಾ " ಅಳಬೇಡಿ. ನೀವು ಅತ್ತರೆ ನನಗೂ ಅಳು ಬರುತ್ತದೆ " ಎಂದನು.

ಅವನು ಮೈಯೆಲ್ಲಾ ಕಣ್ಣಾಗಿ ಅವಳನ್ನು ನೋಡುತ್ತಿದ್ದನು.

ನಾಲ್ಕು ಕಣ್ಣುಗಳೂ ಕೂಡಿದುವು.

"ಹನುಮಂತೂ."

ಅವನು ಅವಳನ್ನು ಕೈಗಳಿಂದ ತೆಗೆದುಕೊಳ್ಳಲು ಹೋದಾಗ ಅವಳು ಹಾರದಂತೆ ತನ್ನ ಕೈಗಳೆರಡನ್ನೂ ಅವನ ಕೊರಳಲ್ಲಿ ಹಾಕಿದಳು. ತನ್ನ ಮುಖವನ್ನು ಅವನ ಮುಖದ ಕಡೆಗೆ ಎತ್ತಿದಳು. ಚುಂಬನವು ಮಧುರ ವಾಗಿಯೂ ಪ್ರೇಮದಿಂದ ಕೂಡಿದುದಾಗಿಯೂ ಇತ್ತು. ಆ ಆಲಿಂಗನವು ಗಾಢವಾಗಿದ್ದಿತು.

ಭಾವಾವೇಶದಲ್ಲಿ ಅವಳಿಗೆ ದುಃಖವು ಮರುಕಳಿಸಿ, ಪುನಃ ಬಿಕ್ಕಲು ತೊಡಗಿದಳು.

ಹನುಮಂತುವು ಅವಳ ಮುಂಗೂದಲುಗಳ ಮೇಲೆ ಕೈ ಆಡಿಸುತ್ತಾ "ನೀವುಹೀಗೆ ಅಳಬಾರದು" ಎಂದನು.

"ಇಲ್ಲ. ಇನ್ನು ಅಳುವುದಿಲ್ಲ."

ವಾಸ್ತವವಾಗಿ ಅರಸುರತ್ನೆ ಅವನನ್ನು ಪ್ರೀತಿಸುತ್ತಿದ್ದಳು. ಆ ಪ್ರೇಮ ದಿಂದ ಅವನು ಪ್ರಭಾವಿತನಾಗಿದ್ದನು. ಆ ಪ್ರಭಾವದಲ್ಲಿ ಅವಳು ತನಗಿಂತ ವಯಸ್ಸಾದವಳಂತೆ ಹನುಮಂತುವಿಗೆ ಕಂಡುಬರಲಿಲ್ಲ. ಅವರು ಪರಸ್ಪರ ಎಷ್ಟೋ ಬಾರಿ ಚುಂಬಿಸಿದರು. ತಮ್ಮ ಎರಡನೆಯ ಆಲಿಂಗನದಿಂದ ಎಷ್ಟು ಹೊತ್ತಿಗೆ ವಿಶ್ರಮಿಸಿದರೋ ಅವರಿಗೇ ಗೊತ್ತಾಗಲಿಲ್ಲ.

ಸುರತ ಕ್ರೀಡಾತುರದಲ್ಲಿ ದೀಪವಾರಿಸುವುದನ್ನೇ ಮರೆತುಬಿಟ್ಟಿದ್ದರು. ಮೆತ್ತನೆಯ ಸುಪ್ಪತ್ತಿಗೆಯ ಮೇಲೆ ಬಿಳಿಯ ಮುಗ್ಗುಲು ಹಾಸಿಗೆಯ ಮೇಲೆ ಇಬ್ಬರೂ ಮಕ್ಕಳಂತೆ ಬಿದ್ದಿರುವಾಗ ನಿದ್ರಾಪರವಶರಾದರು.

ಹನುಮಂತು ವಿರಾಮ ಹೋಟಲಿನಲ್ಲಿ ಕೆಲಸವನ್ನು ಬಿಟ್ಟುಬಿಟ್ಟನು. ಅರಸುರತ್ನೆ ಅವನನ್ನೇ ಕಳುಹಿಸಿ ಮಲ್ಲೇಶ್ವರದಲ್ಲಿ ದೊಡ್ಡ ಬಂಗಲೆಯನ್ನು ಗೊತ್ತುಮಾಡುವಂತೆ ಹೇಳಿದಳು. ಹನುಮಂತುವಿನ ಹೆಸರಿನಲ್ಲಿಯೇ ಬಾಡಿಗೆಗೆ ತೆಗೆದುಕೊಳ್ಳಲಾಯಿತು. ಸುಪ್ರಸಿದ್ಧ ಫರ್ನಿಷರ್ ಎಂದು ಹೆಸರಾಗಿದ್ದ ಮಹಮದ್ ಜಬ್ಬಾರ್‌ರ ಅಂಗಡಿಗೆ ಹನುಮಂತುವನ್ನೂ ಕರೆದುಕೊಂಡು ಹೋಗಿ ಫರ್ನೀಚರುಗಳನ್ನು ನೋಡಿಕೊಂಡು ಬಂದಳು. ಬಂಗಲೆಯಲ್ಲಿ ಎಲ್ಲೆಲ್ಲಿ ಏನೇನು ಇಡಬೇಕೆಂಬುದನ್ನು ತೀರ್ಮಾನ ಮಾಡಿ ಮಂಚಗಳಿಗೂ, ಸೋಫಾ ಸೆಟ್ಟುಗಳಿಗೂ, ನಿಲುವುಗನ್ನಡಿಗಳಿಗೂ, ಮೇಜು ಕುರ್ಚಿ ಬೀರುಗಳಿಗೂ ಆರ್ಡರ್‌ಮಾಡಿ ಬಾಡಿಗೆಗೆ ತರಿಸಿದಳು. ಪೇಟೆಗೆ ಹೋಗಿ ಜಮಖಾನಗಳನ್ನೂ, ಚಿತ್ತಾರದ ಕೆಲಸ ಮಾಡಿದ್ದ ದೊಡ್ಡ ಪುಟ್ಟ ತಾಂಬ್ರ ಹಿತ್ತಾಳೆಯ ತಟ್ಟೆಗಳನ್ನೂ, ಗಿಡಗಳಿಡಲು ಬಗೆಬಗೆಯ ಬಟ್ಟಲುಗಳನ್ನೂ ತಂದಳು. ತಾನೇ ನಿಂತುಕೊಂಡು ಅವುಗಳನ್ನೆಲ್ಲಾ ಎಲ್ಲೆಲ್ಲಿ ಇಡಬೇಕೋ ಅಲ್ಲಲ್ಲಿ ಇಡಿಸಿದಳು.

ಇದೆಲ್ಲವೂ ಆದನಂತರವೂ ಅರಸುರತ್ನೆಗೆ ತೃಪ್ತಿಯಾಗಲಿಲ್ಲ. ಆ ಬಂಗ

ಲಿಯ ಉದ್ದವಾದ ವರಾಂಡವು ಅವಳ ಕಣ್ಣಿಗೆ ಬಿಕೋ ಎಂದು ಕಂಡುಬಂದಿತು. ಅಲ್ಲಿ ಹಾಕಲು ಬೆತ್ತದ ಕುರ್ಚಿಗಳನ್ನೂ ಇಡಲು ಕ್ರೋಟನ್ ಪಾಟುಗಳನ್ನೂ ಕೊಂಡು ತಂದಳು.

ಹೊಸ ಮನೆಯಲ್ಲಿ ಬಂದಿರಲಾರಂಭ ಮಾಡಿದನಂತರ ಮುಂದೆ ಅವನು ಉತ್ತಮ ನಟನಾದಾಗ ಹನುಮಂತು ಎಂಬ ಹೆಸರು ಚೆನ್ನಾಗಿರುವುದಿಲ್ಲವೆಂದು ಅರಸುರತ್ನೆ ಅವನ ಹೆಸರನ್ನು ಬದಲಾಯಿಸಿ ಅನಿಲಕುಮಾರನೆಂಬ ಹೊಸ ಹೆಸರನ್ನು ಇಟ್ಟಳು.

ಹೊಸ ಹೆಸರಿನಲ್ಲಿ ಹೊಸ ಜೀವನವನ್ನು ಹನುಮಂತು ಆರಂಭಿಸಿದನು.

ಹೊಸ ಜೀವನವು ಅರಸುರತ್ನೆಯಲ್ಲಿ ಬದಲಾವಣೆಯನ್ನು ಮಾಡಲಿಲ್ಲ. ಅನಿಲಕುಮಾರನಲ್ಲಿ ಬಹಳ ಪರಿವರ್ತನೆಯನ್ನು ಮಾಡಿತು. ಅರಸುರತ್ನೆ ಅವನಿಗೆ ಏನೇನು ಬೇಕೆಂಬುದನ್ನು ಆಲೋಚನೆ ಮಾಡಿದಳು.

ಅವನು ಆ ಮನೆಯಲ್ಲಿ ಇರಲಾರಂಭಿಸಿದ ಎರಡನೆಯ ದಿನವೇ "ಅನಿಲ್! ನಿನಗೆ ಒಂದಿಷ್ಟು ಬಟ್ಟೆಗಳನ್ನು ತೆಗೆದುಕೊಳ್ಳೋಣ" ಎಂದು ಅಂಗಡಿಗೆ ಕರೆದುಕೊಂಡು ಹೋದಳು.

ಕಲಾಪತ್ತಿನ ಸಣ್ಣ ಅಂಚಿನ ಪಂಚೆಗಳನ್ನು ಕೊಂಡುಕೊಂಡಳು. ಜುಬ್ಬಾಗಳಿಗೆ ಸಿಲ್ಕ್ ಬಟ್ಟೆಗಳನ್ನು ತೆಗೆದುಕೊಂಡಳು. ಎಂಟು ಒಳ್ಳೆಯ ಸೂಟುಗಳನ್ನು ಹೊಲಿಸಿ ಹಾಕಿದಳು. ಬಗೆಬಗೆಯ ಬೂಡ್ಸುಗಳಿಗೆ ಆರ್ಡರ್ ಮಾಡಿದಳು.

ಪೇಟೆಯಿಂದ ಬರುವಾಗ ಅವನಿಗಾಗಿ ಹೇರ್ ಆಯಿಲ್, ಬಾಚಣಿಗೆ, ಸೋಪು, ಷಾಂಪು, ಸ್ನೋ, ಕ್ರೀಂಗಳನ್ನು ಕೊಂಡುಕೊಂಡಳು. ಎರಡು ಜೊತೆ ಕಾಪುರ್ ಚಪ್ಪಲಿಗಳನ್ನೂ, ಟೂತ್ ಪೇಸ್ಟ್, ಬ್ರಷ್ ಗಳನ್ನೂ, ಷೇವಿಂಗ್ ಸೆಟ್ ಮತ್ತು ನೈಲ್ ಪಾಲಿಷ್‌ಗಳನ್ನೂ ತೆಗೆದುಕೊಂಡಳು.

ಈ ವ್ಯಾಪಾರವನ್ನು ನೋಡುತ್ತಾ ಅನಿಲನು ಬೆರಗಾಗಿರುವಾಗ ಅರಸುರತ್ನೆ ರೆಡಿಮೇಡ್ ಬಟ್ಟೆ ಅಂಗಡಿಗೆ ಹೋಗಿ ಎರಡು ಜುಬ್ಬಾಗಳನ್ನು ತೆಗೆದುಕೊಂಡಳು.

ಅಂಗಡಿಯಿಂದ ಹೊರಗೆ ಬರುವಾಗ ಅನಿಲನು "ಇಷ್ಟೆಲ್ಲಾ ಆದ ನಂತರ ಈ ಜುಬ್ಬಾಗಳನ್ನು ಯಾಕೆ ಕೊಂಡುಕೊಂಡಿರಿ ?" ಎಂದನು.

"ಅವೆಲ್ಲಾ ಬರಲು ಎರಡು ಮೂರು ದಿನಗಳಾಗಬಹುದು. ಅಲ್ಲಿಯವರೆವಿಗೆ ಏನು ಮಾಡುತ್ತೀ ?"

ಆ ದಿನ ಸಂಧ್ಯಾಕಾಲ ಅನಿಲನು ಸೆಲ್ಫ್ ಷೇವಿಂಗ್ ಮಾಡಿಕೊಂಡು, ಕಲಾಪತ್ತಿನ ಪಂಚೆಯುಟ್ಟು ಜುಬ್ಬಾ ಧರಿಸಿದನು. ಅವನ ಎತ್ತರವಾದ ದೇಹಕ್ಕೂ, ವಿಶಾಲವಾದ ವಕ್ಷಸ್ಥಳಕ್ಕೂ ಜುಬ್ಬಾ ಬಹಳ ಚೆನ್ನಾಗಿ ಒಪ್ಪುತ್ತಿತ್ತು.

ಅದನ್ನು ನೋಡಿ ಅರಸು ರತ್ನೆಗೆ ಸಂತೋಷವಾಯಿತು.

ಅವಳು "ಅನಿಲ್ ! ನೀನೀಗ ಎಷ್ಟು ಚೆನ್ನಾಗಿ ಕಾಣುತ್ತೀಯೋ, ಗೊತ್ತೇ ?" ಎಂದಳು.

ಅನಿಲನು ನಿಲುವು ಕನ್ನಡಿಯ ಮುಂದೆ ನಿಂತು, ತನ್ನನ್ನು ನೋಡಿಕೊಂಡನು. ಅವಳು ಹೇಳಿದುದು ಅಕ್ಷರಶಃ ನಿಜವೆನ್ನಿಸಿತು. ತಾನು ಅಷ್ಟು ಚೆನ್ನಾಗಿದ್ದೇನೆಂದು ಅವನಿಗೇ ಗೊತ್ತಿರಲಿಲ್ಲ.

ಕತ್ತಲೆಯಲ್ಲಿ ಅರಸು ರತ್ನೆ ಅವನ ಬಾಹುಬಂಧನದಲ್ಲಿ ಮಲಗಿಕೊಂಡಿದ್ದಾಗ "ಅನಿಲ್. ನೀನಾವುದಕ್ಕೂ ಸಂಕೋಚ ಪಡಬೇಡ. ಹಣ ಹೇಗೋ ಬರುತ್ತದೆ. ಹೇಗೋ ಖರ್ಚಾಗುತ್ತದೆ. ನಿನಗಾಗಿ ಖರ್ಚು ಮಾಡುವುದೆಂದರೆ ನನಗೆ ಎಷ್ಟೋ ಸಂತೋಷವಾಗುತ್ತದೆ. ನಿನಗೆ ಖರ್ಚು ಮಾಡಲು ಹಣ ಬೇಕಾದರೆ ಕೇಳು" ಎಂದಳು.

ಅರಸು ರತ್ನೆ ಅವನಿಗೆ ಹಣ ಕೊಡುವಾಗಲೂ ಕೂಡಾ ನಯ, ನಾಜೂಕುಗಳಿದ್ದವು. ಅವನಿಗೆ ಸಿಕ್ಕುವಂತೆ ಹಣವನ್ನು ಹಾಕಿರುತ್ತಿದ್ದಳು. ಅವನು ತೆಗೆದು ಖರ್ಚು ಮಾಡಿದರೆ ಹಣವೆಲ್ಲಿ, ಏನು ಮಾಡಿದೆ, ಎಂದು ಕೇಳುತ್ತಿರಲಿಲ್ಲ. ಬರುಬರುತ್ತಾ ಅವನಿಗೆ ಬಳಕೆಯಾಯಿತು. ಹಣ ಬೇಕಾದರೆ ಕೇಳಿ ತೆಗೆದುಕೊಳ್ಳುತ್ತಿದ್ದನು. ಏನಾದರೂ ಬೇಕಾದರೆ ಸೂಕ್ಷ್ಮವಾಗಿ ಹೇಳುತ್ತಿದ್ದನು. ಅವಳು ಅದನ್ನು ಕೂಡಲೇ ಒದಗಿಸುತ್ತಿದ್ದಳು.

ಈ ನಡುವೆ ಅರಸು ರತ್ನೆ ಸೌತ್ ಪೆರೇಡಿನಲ್ಲಿ ಒಂದು ಸ್ಟುಡಿಯೋಗೆ

ಕರೆದುಕೊಂಡು ಹೋಗಿ ಅವನ ಫೋಟೋ ತೆಗೆಸಿದಳು. ಎರಡು ದಿನಗಳ ನಂತರ ಕಾಪಿಗಳನ್ನು ತರಲು ಅವರು ಸ್ಟುಡಿಯೋಗೆ ಹೋದರು. ಅಷ್ಟು ಹೊತ್ತಿಗೆ ಹೊಸದಾಗಿ ಸಿದ್ಧಪಡಿಸಿದ್ದ ಅನಿಲ ಕುಮಾರನ ಚಿತ್ರದ ಪ್ರತಿಯೊಂದನ್ನು ಬೀದಿಗೆ ಕಾಣುವಂತೆ ಷೋ ಕೇಸ್‌ನಲ್ಲಿ ಹಾಕಿದ್ದರು. ಅದನ್ನು ನೋಡಿ ಅನಿಲನಿಗೆ ಎಷ್ಟೋ ಹೆಮ್ಮೆಯಾಯಿತು.

ಮನೆಗೆ ಬಂದ ನಂತರ ಅರಸು ರತ್ನ ಫೋಟೋ ಕಾಪಿಗಳನ್ನು ಅವನ ಮುಂದೆ ಹಾಕಿ " ಅನಿಲ್. ನೀನೆಷ್ಟು ಚೆನ್ನಾಗಿದ್ದೀಯೋ, ನೋಡಿದೆಯಾ ?" ಎಂದಳು.

"ಆದರೆ ಚೆನ್ನಾಗಲು ಬಹಳ ಖರ್ಚಾಗಿರುವಂತಿದೆ"

"ಒಂದೊಂದು ಕಾಸೂ ಸಾರ್ಥಕವೇ ಆಗಿದೆ."

"ನನಗೆ ಗೊತ್ತಿಲ್ಲ. ಆಗಾಗ ನನಗೆ————"

"ಏನೆನ್ನಿಸುತ್ತದೆ ? "

"ಸ್ಪಷ್ಟವಾಗಿ ಅದನ್ನು ಮಾತನಾಡದಿರುವುದು ಒಳ್ಳೆಯದು."

"ಹಾಗಲ್ಲ. ಯಾವ ವಿಷಯವಾದರೂ ಸ್ಪಷ್ಟವಾಗಿ ಮಾತನಾಡುವುದು ಒಳ್ಳೆಯದು."

"ನಾನು ನಿಮಗೆ ವಿರೋಧವಾಗಿ ಏನೂ ಹೇಳುತ್ತಿಲ್ಲ. ನನಗೇ ವಿರೋಧವಾಗಿ ಆಲೋಚನೆ ಮಾಡುತ್ತಿದ್ದೇನೆ."

"ಅದೇನೇ ಆಗಿರಲಿ, ಹೇಳು. ಸಂಕೋಚವೇನು ?"

"ನಾನು ನಿಮಗೆ ಭಾರವಾಗಿದ್ದೇನೆ—ಎನ್ನಿಸುತ್ತದೆ. "

ಅವಳು ಹತ್ತಿರ ಬಂದು ಅವನ ಕಿವಿಯಲ್ಲಿ ಹೇಳುವಂತೆ, ಗಟ್ಟಿಯಾಗಿಯೇ "ಅಯ್ಯೋ ಹುಚ್ಚ. ಈ ಪ್ರಪಂಚದಲ್ಲಿ ಒಬ್ಬರಿಗೆ ಭಾರವಾಗಿಯೇ ಮತ್ತೊಬ್ಬರು ಬದುಕಿರುವುದು. ನೀನು ನನಗೆ ಭಾರವಾಗಿದ್ದೀಯೆ. ನಾನು ಮತ್ತೊಬ್ಬರಿಗೆ ಭಾರವಾಗಿದ್ದೇನೆ. ಅವರು ಮಗನೊಬ್ಬರಿಗೆ ಭಾರವಾಗಿದ್ದಾರೆ" ಎಂದಳು.

"ಇರಬಹುದು—ಆದರೂ ಕೂಡಾ——"

"ನಾನು ಹೇಳುವ ಮಾತು ಕೇಳು. ನಾನು ನಿನಗೇನಾದರೂ ಮಾಡುತ್ತಿದ್ದರೆ ಅದನ್ನು ನನಗಾಗಿಯೇ ಮಾಡಿಕೊಳ್ಳುತ್ತಿದ್ದೇನೆ. ಸ್ವಾರ್ಥವೇ

ಜಗತ್ತನ್ನು ಆಡಿಸುತ್ತಿರುವ ಸೂತ್ರ. ನಾನು ಯಾವ ಪ್ರತಿಫಲಕ್ಕಾಗಿ ಇವೆಲ್ಲವನ್ನೂ ಮಾಡುತ್ತಿದ್ದೇನೆಂಬುದನ್ನು ಅರಿಯೆಯಾ? ನಿನ್ನೆಯ ರಾತ್ರಿಯನ್ನು ನೆನೆಸಿಕೋ."

ಅವನು ನಿನ್ನೆಯ ರಾತ್ರಿಯನ್ನು ನೆನೆಸಿಕೊಂಡನು.

ಅರಸುರತ್ನೆ ಮೆಲ್ಲನೆ "ನೀನೆಂದರೆ ನನಗೆ ಹೇಗೆ ಹೇಗೋ ಆಗುತ್ತದೆ. ನಿನ್ನಂತಹ ಗಂಡಸು ಸಿಕ್ಕಬೇಕಾದರೆ ಹೆಂಗಸು ಪುಣ್ಯಮಾಡಿರಬೇಕು. ಇನ್ನು ಮುಂದೆ ಹುಚ್ಚು ಹುಚ್ಚಾಗಿ ಆಲೋಚನೆ ಮಾಡಬೇಡ" ಎಂದಳು.

ಏನು ಮಾತನಾಡಬೇಕೋ ಅವನಿಗೆ ತೋರಲಿಲ್ಲ.

"ಯಾವಳಾದರೂ ನಿನ್ನನ್ನು ಹಾರಿಸಿಕೊಂಡು ಹೋಗುತ್ತಾಳೆಯೋ ಏನೋ ಎಂದೇ ನನಗೆ ದಿಗಿಲು."

ಅವನು ದೈನ್ಯವಾಗಿ "ನನ್ನಲ್ಲಿ ನಿಮಗೆ ನಂಬಿಕೆ ಇಲ್ಲವೆ? ನಾನು ನಿಮ್ಮನ್ನು ಬಿಟ್ಟಿರುವುದೇ ಇಲ್ಲ" ಎಂದನು.

"ಬಿಟ್ಟಿರುವುದಿಲ್ಲವೇ?"

"ಇಲ್ಲ!"

ಅರಸುರತ್ನೆ ಕುಡಿನೋಟವನ್ನು ಬೀರಿದಳು.

ಅನಿಲನು ಅದನ್ನು ಅರ್ಥ ಮಾಡಿಕೊಂಡು, ಉದ್ವೇಗಪೂರ್ವಕವಾಗಿ "ಇನ್ನೂ ಮೂರು ಗಂಟೆ" ಎಂದನು.

"ಹಾಗೇನು?"

"ಈಗೇನು ಅವಸರ? ರಾತ್ರಿಯಾಗಲಿ."

"ಈಗ ಬೇರೆ! ಆಗ ಬೇರೆ!"

ಅನಿಲನು ನಗುತ್ತಾ ಅವಳನ್ನು ಎತ್ತಿಕೊಳ್ಳುವವನಂತೆ ಹಿಡಿದುಕೊಂಡು ಮಲಗುವ ಮನೆಗೆ ಕರೆದುಕೊಂಡು ಹೋದನು.

# ೭

ಅರಸುರತ್ನೆಯೂ ಅನಿಲಕುಮಾರನೂ ಹೊಸ ಮನೆಯಲ್ಲಿ ವಾಸಮಾಡಲಾರಂಭಿಸಿ ವಾರವಾಯಿತು. ಅವಳು ಎಂದಿನಂತೆಯೇ ಬೆಳಗಾಗ ಟ್ಯಾಕ್ಸಿಯಲ್ಲಿ ತನ್ನ ಕೆಲಸಕಾರ್ಯಗಳಿಗೆ ಹೊರಟುಹೋಗುತ್ತಿದ್ದಳು. ಸಾಯಂಕಾಲ ತಾನು ಹೊರಗೆ ಹೋಗುವಾಗ ಒಂದೊಂದು ದಿನ ಅನಿಲನನ್ನು ಕರೆದುಕೊಂಡು ಹೋಗುತ್ತಿದ್ದಳು. ಬೆಳಗಿನಿಂದ ಸಾಯಂಕಾಲದವರೆವಿಗೆ ಅವನು ಮನೆಯಲ್ಲಿಯೇ ಇರುತ್ತಿದ್ದನು.

ಈ ಮನೆಗೆ ಬಂದುದು ಅವನಿಗೆ ಚಿನ್ನದ ಪಂಜರದಲ್ಲಿದ್ದಂತೆ ಆಗಿದ್ದಿತೇ ಹೊರತು ಅವನ ಆಶೆ ಆಕಾಂಕ್ಷೆಗಳು ಚಿಗುರುವ ಯಾವ ಚಿಹ್ನೆಯೂ ಕಂಡುಬರಲಿಲ್ಲ. ಬೇರೆಯ ಕೆಲಸವಿಲ್ಲದೇ ಮನೆಯಲ್ಲಿಯೇ ಕುಳಿತಿದ್ದುದರಿಂದ ನಟನಾಗುವ ಗೀಳು ಅವನ ಮನಸ್ಸನ್ನು ಹುಳುವಿನಂತೆ ಕೊರೆಯುತ್ತಿತ್ತು. ಒಂದೊಂದು ಬಾರಿ ತಾನು ದೊಡ್ಡ ನಟನಾಗಿ ಮೆರೆಯುತ್ತಿದ್ದ ಹಾಗೆ ಕನಸು ಕಾಣುವನು. ಅದು ಬೆಳೆದು ದೊಡ್ಡ ಆಶಾಸೌಧದಂತೆ ಕಣ್ಣು ಮುಂದೆ ನಿಲ್ಲುವುದು. ಮರುಗಳಿಗೆಯೇ ಅದು ಗಾಳಿಯ ಗೋಪುರದಂತೆ ಮಾಯವಾಗುವುದು.

ಹೀಗೆ ಅನಿಲಕುಮಾರನು ಆಶೆ–ನಿರಾಶೆಗಳಲ್ಲಿ ತೊಳಲುತ್ತಾ ಕಾಲ ಆಳೆಯುತ್ತಿದ್ದನು.

ಆಗಾಗ ಈ ವಿಷಯವನ್ನು ಅರಸುರತ್ನೆಯೊಡನೆ ಹೇಳುವನು. ಆ ಸಮಯದಲ್ಲಿ ಅವಳು ಬಹಳ ಪ್ರೋತ್ಸಾಹಿಸಿ ಮಾತನಾಡುವಳು. ತಾನೆಲ್ಲ ವನ್ನೂ ಮಾಡುವುದಾಗಿ ಭರವಸೆಯನ್ನು ಕೊಡುವಳು. ಆಗವನಿಗೆ ಉತ್ಸಾಹವಾಗುವುದು.

ಮತ್ತೆ ಯಥಾ ಸ್ಥಿತಿ!

ಈ ನಡುವೆ ಅರಸುರತ್ನೆಗೆ ಕೂಡಲೇ ಬರಬೇಕೆಂದು ಬೊಂಬಾಯಿನಿಂದ ತಂತಿಯು ಬಂದಿತು. ಹೊರಡಲು ಅನುವಾದಳು. ಹೋಗುವಾಗ ತಾನು ಇನ್ನು ಎರಡು ಮೂರು ದಿನಗಳಲ್ಲಿ ವಾಪ್ಸು ಬರುವುದಾಗಿ ಹೇಳಿದಳು. ಬಂದ ಕೂಡಲೇ ಅವನನ್ನು ನಟನನ್ನಾಗಿ ಮಾಡಲು ತಕ್ಕ ಏರ್ಪಾಟುಗಳನ್ನು ಮಾಡುವುದಾಗಿ ತಿಳಿಸಿದಳು. ಅನಿಲನು ಬೆಳಗಾಗ ಅಷ್ಟು ಹೊತ್ತಿಗೇ ಏರೋಡ್ರಂಗೆ ಹೋಗಿ ಅವಳನ್ನು ಬೀಳ್ಕೊಟ್ಟು ಬಂದನು.

ಮೂರು ದಿನಗಳಾದುವು. ಐದು ದಿನಗಳಾದುವು. ವಾರವಾಯಿತು. ಅರಸು ರತ್ನೆಯು ಬರಲಿಲ್ಲ. ಯಾವಾಗ ಬರುತ್ತೇನೆ, ಏನು, ಎಂಬುದಕ್ಕೆ ಅವನಿಗೆ ಕಾಗದವಾಗಲೀ ತಂತಿಯಾಗಲೀ ಬರಲಿಲ್ಲ.

ಒಂದೊಂದು ದಿನವೂ ಅವನಿಗೆ ಒಂದೊಂದು ಯುಗದಂತೆ ಭಾಸವಾಯಿತು. ಕಾದು ಕಾದು ಸಾಕಾಗಿ ಕಡೆಗೆ ಅವನಿಗೊಂದು ಆಲೋಚನೆಯು ಹೊಳೆಯಿತು.

ಅನಿಲನು ಹೋಟಲಿನಲ್ಲಿ ಸರ್ವ್ ಮಾಡುತ್ತಿದ್ದಾಗ ಅವನ ಜೊತೆಯಲ್ಲಿ ಕೆಲಸ ಮಾಡುತ್ತಿದ್ದ ಶೇಖರನು ಬಸವನಗುಡಿಯಲ್ಲಿ ಸಂಗೀತ ಕಲಿಯಲು ಹೋಗುತ್ತಿದ್ದುದು ನೆನಪಿಗೆ ಬಂದಿತು. ತಾನೂ ಸಂಗೀತ ಕಲಿಯುವುದನ್ನು ಯಾಕೆ ಆರಂಭ ಮಾಡಬಾರದೆಂದು ಕೊಂಡನು.

ಮಾರನೆಯ ದಿನವೇ ವಿರಾಮ ಹೋಟಲಿಗೆ ಹೋದನು. ಅವನ ಜೊತೆಯಲ್ಲಿ ಕೆಲಸ ಮಾಡುತ್ತಿದ್ದವರೆಲ್ಲರೂ ಅನಿಲನಲ್ಲಿ ಆಗಿದ್ದ ಪರಿವರ್ತನೆಯನ್ನು ಕಂಡು ಅಚ್ಚರಿಗೊಂಡರು.

ಅನಂತಯ್ಯನವರು ಯೋಗಕ್ಷೇಮ ಮಾಡಿದರು.

" ಏನು, ಹನುಮಂತು. ಎಲ್ಲಿದ್ದೀಯೆ ? ಕೆಲಸ ಬಿಟ್ಟು ಈಗ ಏನು ಮಾಡುತ್ತಿದ್ದೀಯೆ ?" ಎಂದು ವಿಚಾರಿಸಿದರು.

ನಿಜವಾದ ವಿಷಯುವನ್ನು ಹೇಳಲು ಅನಿಲನಿಗೆ ಮನಸ್ಸಾಗಲಿಲ್ಲ.

ಅವನು "ಅದೇ. ನಮ್ಮಜ್ಜಿಗೆ ಮೈ ಚೆನ್ನಾಗಿಲ್ಲವೆಂದೂ ಊರಿಗೆ ಬರಬೇಕೆಂದೂ ಕಾಗದ ಬಂದಿತು. ಅದರಿಂದಲೇ ರಜಾ ತೆಗೆದುಕೊಂಡು ಹೋಗಿದ್ದೆ. ಅವರು ಸತ್ತು ಹೋದರು. ಆಕೆ ನಮ್ಮ ತಾಯಿಯ ತಾಯಿ. ನಮ್ಮಮ್ಮನಿಗೆ ಅವರ ಸ್ವತ್ತು ಬರಬೇಕಾಗಿತ್ತು. ನಮ್ಮ ತಾಯಿ ಮೊದಲೇ ತೀರಿಕೊಂಡುದರಿಂದ ಅದು ನನಗೆ ಸಿಕ್ಕಿತು. ಈ ಊರಲ್ಲಿ ಎಲ್ಲಿಯಾದರೂ ಚಿಲ್ಲರೇ ಅಂಗಡಿ ಹಾಕಿಕೊಳ್ಳಬೇಕೆಂದಿದ್ದೇನೆ" ಎಂದನು.

"ಹಾಗೇ ಮಾಡು. ಹಣ ಸಿಕ್ಕುವುವೇ ಕಷ್ಟ. ಸಿಕ್ಕಿದಾಗ ಅದನ್ನು ಪೋಲು ಮಾಡಬಾರದು. ಕಷ್ಟ ಅನುಭವಿಸಿರುವ ನಿನಗೆ ಅದು ಗೊತ್ತೇ ಇರುತ್ತದೆ"

"ಇಲ್ಲ, ಸಾರ್. ಹಾಳುಮಾಡುವುದಿಲ್ಲ. ಅದರಿಂದಲೇ ದುಡ್ಡು ಕೈಯಲ್ಲಿರುವಾಗ ಸಣ್ಣದೊಂದು ಅಂಗಡಿ ಹಾಕಿಕೊಳ್ಳಬೇಕೆಂದಿದ್ದೇನೆ."

"ಹಾಗೇ ಮಾಡು. ಕೆಂಪೇಗೌಡ ರಸ್ತೆಯಲ್ಲಿ ನಮ್ಮ ವೆಂಕಪ್ಪಯ್ಯ ಹೋಟಲಿಟ್ಟಿದ್ದಾನಲ್ಲ. ಅವನಿಗೆ ಹೇಳಿ ಅಲ್ಲೊಂದು ಬಂಕು ಹಾಕಿಸಿಕೊಡು ತ್ತೇನೆ. ಅಲ್ಲಿ ಒಳ್ಳೇ ವ್ಯಾಪಾರವಾಗುತ್ತದೆ. ಬುದ್ಧಿವಂತನಾಗಿದ್ದರೆ ಆಮೇಲೆ ಯೋಚನೆಯಿಲ್ಲ."

ಊರಿಗೆ ಹೋಗಿ ಹಣ ತೆಗೆದುಕೊಂಡು ಬಂದು ಅವರನ್ನು ನೋಡು ವುದಾಗಿ ಹೇಳಿದನು.

ಒಳಗೆ ಹೋದನಂತರ ಕೆಲಸದವರೆಲ್ಲಾ ಅವನನ್ನು ಸುತ್ತಿಕೊಂಡು ಬಗೆಬಗೆಯಾಗಿ ಪ್ರಶ್ನೆ ಮಾಡಿದರು. ಅವನ ಮಾತುಗಳೂ ನಡವಳಿಕೆಗಳೂ ಪ್ರಿಯವಾಗಿ ಕಂಡರೂ ಅವುಗಳಲ್ಲೆಲ್ಲಾ ಸ್ವಲ್ಪ ಸ್ವಲ್ಪ ಅಸೂಯೆಯ ಛಾಯೆ ಇದ್ದಿತು.

ಮಾತು ಮುಗಿಸಿಕೊಂಡು ಶೇಖರನನ್ನು ಕರೆದು "ಸುಮ್ಮನಿದ್ದೀ ಯಲ್ಲ. ನಿನಗೆ ಡ್ಯೂಟಿ ಯಾವಾಗ?" ಎಂದು ಕೇಳಿದನು.

"ಮಧ್ಯಾಹ್ನದ ಡ್ಯೂಟಿ. ಸಂಗೀತ ಪಾಠಕ್ಕೆ ಹೋಗುವುದರಿಂದ ಬೆಳ ಗಿನ ಡ್ಯೂಟಿ ಹಾಕಿಸಿಕೊಳ್ಳುತ್ತಿಲ್ಲ.''

ಇಬ್ಬರೂ ಮಾತನಾಡಿಕೊಂಡು ಹೊರಗೆ ಹೊರಟರು.

ದಾರಿಯಲ್ಲಿ ಹೋಗಿ ಇಬ್ಬರೂ ಮೆಜೆಸ್ಟಿಕ್ ಬಳಿ ಹೋಟೆಲಿನಲ್ಲಿ ಕಾಫಿ ತೆಗೆದುಕೊಂಡರು.

ಅವನು ಕೊಟ್ಟ ಸಿಗರೇಟು ಹಚ್ಚಿಕೊಂಡು, ಶೇಖರನು "ಓಹೋ! ಬಹಳ ದುಡ್ಡು ಓಡಿಯಾಡುವಂತಿದೆಯಲ್ಲಾ. ಗೋಲ್ಡ್ ಫ್ಲೇಕ್ ಸಿಗರೇಟ್. ಅನುಕೂಲವಾಗಿದ್ದರೂ ನಿನಗೆ ಬಡವರ ನೆನಪು ಬಂದಿತಲ್ಲ. ಅದೇ ಬಹಳ ಸಂತೋಷ" ಎಂದನು.

"ಅದೆಲ್ಲಾ ಇರಲಿ, ನಿನ್ನಿಂದ ಒಂದು ಕೆಲಸವಾಗ ಬೇಕಲ್ಲಯ್ಯ."

"ಏನಪ್ಪಾ ಅದು?"

"ನಾನೂ ಸಂಗೀತ ಕಲಿಯಬೇಕೆಂದಿದ್ದೇನೆ. ನೀನೆಲ್ಲಿಯೋ ಹೋಗುತ್ತಿದ್ದೀಯಲ್ಲಾ. ಅವರು ಹೇಗೆ?"

"ಅವರ ವಿಷಯ ಕೇಳಬೇಕಾದ್ದೇನಿದೆಯಯ್ಯಾ! ಸುಬ್ರಹ್ಮಣ್ಯಾಯ್ಯರ್ ಎಂದರೆ ಈ ದಕ್ಷಿಣ ದೇಶದಲ್ಲೆಲ್ಲಾ ಪ್ರಸಿದ್ಧಿ. ಅವರು ಅರಮನೆಯಲ್ಲಿಯೇ ಇದ್ದರು. ದೊಡ್ಡ ಮಹಾರಾಜರಿದ್ದಾಗ ದಿನವೂ ಅರ್ಧಗಂಟೆಯಾದರೂ ಇವರು ಹಾಡಲೇಬೇಕು. ಈಗ ಬೆಂಗಳೂರಿಗೇ ಬಂದಿದ್ದಾರೆ. ಮೊನ್ನೆ ಕೂಡಾ ಟೌನ್ ಹಾಲಿನಲ್ಲಿ ಅವರ ಸಂಗೀತವಾಯಿತಲ್ಲ."

"ನನಗೆ ಅವರ ಪರಿಚಯ ಮಾಡಿಸುತ್ತೀಯಾ?"

"ಅದೇನು ? ಇದ್ದಕ್ಕಿದ್ದಂತೆಯೇ ಸಂಗೀತದ ಖಯಾಲಿ. ಯಜಮಾನರೊಡನೆ ಅಂಗಡಿಯೋ ಪಂಗಡಿಯೋ ಇಡುವುದಾಗಿ ಹೇಳುತ್ತಿದ್ದೆಯಲ್ಲಾ"

"ಹೌದು. ಆದರೆ ಇನ್ನಾರು ತಿಂಗಳು ನನ್ನ ಗ್ರಹಗತಿಗಳು ಚೆನ್ನಾಗಿಲ್ಲವಂತೆ. ಅದರಿಂದ ಏನು ಮಾಡುವುದಕ್ಕೂ ಇಷ್ಟವಿಲ್ಲ. ಸುಮ್ಮನಿರುವ ಬದಲು ಸಂಗೀತವನ್ನಾದರೂ ಕಲಿಯುತ್ತಿರೋಣವೆಂದು ಕೊಂಡಿದ್ದೇನೆ.''

ಶೇಖರನು ಅನಿಲನನ್ನು ಕರೆದುಕೊಂಡು ಹೋಗಲು ಒಪ್ಪಿಕೊಂಡನು.

ಮಾರನೆಯ ದಿನ ಗಾಂಧೀ ಬಜಾರ್ ಚೌಕದಲ್ಲಿ ಶೇಖರನು ಬರುವ ವೇಳೆಗೆ ಅನಿಲನು ಕಾಯುತ್ತಾ ನಿಂತಿದ್ದನು. ಇಬ್ಬರೂ ಲೋಕಾಭಿರಾಮವಾಗಿ ಮಾತನಾಡುತ್ತಾ ಸುಬ್ರಹ್ಮಣ್ಯ ಅಯ್ಯರ್‌ರ ಮನೆ ಹೋದರು.

ಬಸ್ ಸ್ಟಾಂಡಿಗೆ ಹತ್ತಿರದಲ್ಲಿಯೇ ಅವರ ಮನೆ. ದೊಡ್ಡ ಮನೆಯಲ್ಲಿ ಮುಂದುಗಡೆ ಹಾಲಿನಲ್ಲಿ ಅವರ ಸಂಗೀತ ಶಾಲೆ. ಅನೇಕ ಮಂದಿ ತರು

ಣರೂ ತರುಣಿಯರೂ ಅವರಲ್ಲಿ ಸಂಗೀತ ಕಲಿಯಲು ಬರುತ್ತಿದ್ದರು. ಹಾಡುವುದರಲ್ಲಿ ಪ್ರಖ್ಯಾತರಾಗಿದ್ದಂತೆಯೇ ಅವರು ಹೇಳಿಕೊಡುವುದರಲ್ಲಿಯೂ ನಿಸ್ಸೀಮರೆಂದು ಹೆಸರು ಮಾಡಿದ್ದರು.

ಶೇಖರನು ಆ ದಿನ ಎಂದಿಗಿಂತಲೂ ಮೊದಲೇ ಅನಿಲನನ್ನು ಕರೆದುಕೊಂಡು ಹೋಗಿದ್ದನು. ಇನ್ನೂ ಪಾಠಗಳು ಆರಂಭವಾಗಿರಲಿಲ್ಲ.

ದೊಡ್ಡ ಹಜಾರದಲ್ಲಿ ಹಾಕಿದ್ದ ಅಗಲವಾದ ಜಮಖಾನದ ಕೆಳಗೆ ಸರಸ್ವತಿಯ ಪಟದ ಕೆಳಗೆ ಕುಳಿತು ಅಯ್ಯರು ತಂಬೂರಿಯನ್ನು ಶೃತಿಮಾಡುತ್ತಿದ್ದರು.

ಗುರುಗಳಿಗೆ ಶೇಖರನು ತನ್ನ ಸ್ನೇಹಿತನ ಪರಿಚಯಮಾಡಿಸಿ ಅವನ ಮನೋಗತವನ್ನು ತಿಳಿಸಿದನು.

ಗುರುಗಳು "ಆಗಬಹುದು. ಆದರೆ ಇದುವರೆವಿಗೆ ನಿನಗೆ ಎಲ್ಲಿಯಾದರೂ ಅಭ್ಯಾಸವಾಗಿದೆಯೇ ?" ಎಂದು ಕೇಳಿದರು.

"ಸಂಗೀತವೆಂದು ಕಲಿತಿಲ್ಲ. ನಾಟಕದಲ್ಲಿ ಪಾರ್ಟು ಮಾಡುತ್ತಿದ್ದುದರಿಂದ ಹಾಡುವುದಕ್ಕೆ ಬರುತ್ತದೆ."

ಅವರು ಒಂದೆರಡು ಹಾಡುಗಳನ್ನು ಅನಿಲನಿಂದ ಹಾಡಿಸಿ ಕೇಳಿದರು.

ಅನಂತರ " ಈಗ ಕಲಿತಿರುವುದನ್ನು ಮರೆತು ಮೊದಲಿನಿಂದಲೂ ಕಲಿಯಬೇಕಪ್ಪ" ಎಂದು ಹೇಳಿದರು.

ಅನಿಲನು ವಿನಯದಿಂದ ಒಪ್ಪಿಕೊಂಡನು.

ಕಡೆಯದಾಗಿ ಅಯ್ಯರ್ "ಎಲ್ಲಾ ಸರಿ. ಆದರೆ ನಿನಗೆ ವಯಸ್ಸಾಗಿದೆ. ಈ ವಯಸ್ಸಿನಲ್ಲಿ ವಿದ್ಯೆ ಹೊಸದಾಗಿ ಹತ್ತುವುದು ಕಷ್ಟ. ಆದರೂ ನಾನೊಂದು ಮಾತು ಹೇಳುತ್ತೇನೆ, ಕೇಳು. ಆಸಕ್ತಿ, ಶ್ರದ್ಧೆಗಳಿದ್ದರೆ ಯಾವ ವಯಸ್ಸಿನಲ್ಲಿಯಾದರೂ ತಾಯಿಯು ಕರುಣಿಸುತ್ತಾಳೆ" ಎಂದರು.

ಪುನಃ ಏನೋ ಜ್ಞಾಪಿಸಿಕೊಂಡವರಂತೆ " ನಿನ್ನ ಹೆಸರು ಕೇಳುವುದನ್ನೇ ಮರೆತು ಬಿಟ್ಟಿದ್ದೆ " ಎಂದರು.

ಶೇಖರನು ಹೇಳುವುದರಲ್ಲಿ ನಡುವೆ ತಲೆ ಹಾಕಿ, ಅನಿಲನು " ನನ್ನ ಹೆಸರು ಅನಿಲ ಕುಮಾರ್ " ಎಂದನು.

ಗೆಳೆಯನನ್ನು ಶೇಖರನು ವಿಸ್ಮಯದಿಂದ ನೋಡಿದನು.

ಅಯ್ಯರು " ನಾಡಿದ್ದು ಬಿದಿಗೆ. ಒಳ್ಳೆಯ ದಿನ. ಅಂದಿನಿಂದ ಬಾ. ಪಾಠ ಮೊದಲು ಮಾಡೋಣ " ಎಂದು ಹೇಳಿದರು.

ಅನಿಲನು ಅವರಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದು ಹೊರಗೆ ಬಂದನು.

ಅವನನ್ನು ಕಳಿಸಿ ಹೋಗಲು ಬಂದ ಶೇಖರನು " ಏನೋ ! ನಿನ್ನ ಹೆಸರೂ ಬದಲಾಯಿಸಿ ಬಿಟ್ಟೆಯೇನೋ ?" ಎಂದು ಕೇಳಿದ.

ಆ ಪ್ರಶ್ನೆಯನ್ನು ಕೇಳಲು ಬಲು ಕಷ್ಟದಿಂದ ಹೊರಗೆ ಬರುವವರೆವಿಗೆ ಶೇಖರನು ಕಾದಿದ್ದನೆಂದು ಕಂಡು ಬರುತ್ತಿತ್ತು.

" ಅದು ಹೊಸ ಹೆಸರೇನೂ ಅಲ್ಲವಯ್ಯಾ! ನನ್ನ ಹೆಸರು ಹನುಮಂತು ವಾದರೂ ನಾಟಕದಲ್ಲಿ ಅನಿಲ ಕುಮಾರನೆಂದೇ ನನ್ನನ್ನು ಕರೆಯುತ್ತಿದ್ದರು."

# 2

ಬೊಂಬಾಯಿಗೆ ಹೋಗಿದ್ದ ಅರಸುರತ್ನೆಯು ಊರಿಗೆ ಹಿಂತಿರುಗುವುದಕ್ಕೆ ಎರಡು ವಾರಗಳಾದವು. ಅವಳು ಬಂದ ಕೂಡಲೇ ಅನಿಲಕುಮಾರನು ತಾನು ಸಂಗೀತ ಕಲಿಯಲು ಆರಂಭ ಮಾಡಿರುವ ವಿಷಯವನ್ನು ಸಾಂಗೋಪಾಂಗವಾಗಿ ಹೇಳಿದನು.

ಆದರೆ ಅವಳಿಗೆ ಅದರಲ್ಲಿ ಹೆಚ್ಚು ಆಸಕ್ತಿಯಿರಲಿಲ್ಲ. ಅವಳು ಬೊಂಬಾಯಿನಿಂದ ಬರುತ್ತಾ ಅನಿಲನ ಹೆಸರಿನಲ್ಲಿ ಹಿಂದೂಸ್ಥಾನ ಕಾರನ್ನು ಕೊಂಡುಕೊಂಡು ಬಂದಿದ್ದಳು. ಅದನ್ನು ಅನಿಲನಿಗೆ ತೋರಿಸುವುದರಲ್ಲಿಯೂ, ಅವನಿಗೆ ಕಾರು ಡ್ರೈವ್ ಮಾಡಲು ಕಲಿಸುವುದರಲ್ಲಿಯೂ ಆತುರಳಾಗಿದ್ದಳು.

ಅರಸುರತ್ನೆಗೆ ಚೆನ್ನಾಗಿ ಕಾರು ಡ್ರೈವ್ ಮಾಡುವುದಕ್ಕೆ ಬರುತ್ತಿತ್ತು. ಅವಳೇ ಖುದ್ದಾಗಿ ಅನಿಲನಿಗೆ ಕಾರು ನಡೆಸುವುದನ್ನು ಹೇಳಿಕೊಡಲು ತೊಡಗಿದಳು. ಹೀಗೆ ಹೇಳಿಕೊಡುವುದರಲ್ಲಿ ಅವಳಿಗೆ ಬಹಳ ಉತ್ಸಾಹವಿದ್ದಿತು. ಅವನಿಗಂತೂ ಕಾರು ಬಂದುದೂ, ತಾನು ಅದನ್ನು ಕಲಿತುಕೊಳ್ಳುವುದೂ, ಇವುಗಳು ಸ್ವರ್ಗವೇ ಭೂಮಿಗಿಳಿದು ಬಂದ ಹಾಗಾಯಿತು.

ಎಂಟು ಹತ್ತು ದಿನಗಳಲ್ಲಿ ಅನಿಲನು ಕಾರ್ ಡ್ರೈವಿಂಗ್ ಕಲಿತುಕೊಂಡನು.

ಆದರೆ ಅರಸುರತ್ನೆಯು ಆ ಕಾರನ್ನು ಹೆಚ್ಚಾಗಿ ಉಪಯೋಗಿಸುತ್ತಿರಲಿಲ್ಲ. ಮೊದಲಿನಂತೆಯೇ ಟ್ಯಾಕ್ಸಿಯನ್ನು ಮಾಡಿಕೊಂಡು ಸುತ್ತಿ ಬರುತ್ತಿದ್ದಳು. ಯಾವಾಗಲಾದರೊಮ್ಮೆ ಅನಿಲನನ್ನು ಕರೆದುಕೊಂಡು ಹೋದಾಗ ಮನೆಯ ಕಾ ರ ನ್ನು ಉಪಯೋಗಿಸುತ್ತಿದ್ದಳು. ಆಗ ಅನಿಲನೇ ಕಾರು ನಡೆಸುತ್ತಿದ್ದನು.

ಎರಡು ಮೂರು ಬಾರಿ ಅನಿಲನು ಮನೆಯಲ್ಲಿ ಕಾರಿದ್ದರೂ ಟಾಕ್ಸಿಗಳಿಗೆ ದುಡ್ಡು ಕೊಡುವ ಅರಸುರತ್ನೆಯ ವಿಚಿತ್ರ ವರ್ತನೆಯನ್ನು ಕುರಿತು ಪ್ರಶ್ನೆಮಾಡಿದನು.

ಆಗೆಲ್ಲಾ ಅವಳು "ಆ ಕಾರು ತಂದಿರುವುದು ನಿನಗಾಗಿ. ನನಗಾಗಿ ಅಲ್ಲ. ಆದರಿಂದ ನನ್ನ ಕೆಲಸಗಳಿಗೆ ನಿನ್ನ ಕಾರನ್ನು ನಾನು ಯಾಕೆ ಉಪಯೋಗಿಸಲಿ ?'' ಎಂದು ಹೇಳುತ್ತಿದ್ದಳು.

ಒಂದು ಬಾರಿ "ನಿಮ್ಮ ಕೆಲಸವೆಂದರೇನು?'' ಎಂದು ಕೇಳಿದನು.

"ಏನು ಕೆಲಸವೋ, ಬೇಜಾರು ಕೆಲಸ."

''ಯಾಕೆ, ಕೆಲಸವೇನೆಂಬುದು ನನಗೆ ತಿಳಿಯಬಾರದೇ ?"

''ಯಾರಿಗೆ ಬೇಕಾದರೂ ತಿಳಿಯಬಹುದು. ನನ್ನಲ್ಲಿ ಗುಟ್ಟೆಂಬುದೇ ಇಲ್ಲ. ಈಗ ಪುರಸತ್ತಿಲ್ಲ. ಇನ್ನಾವಾಗಲಾದರೂ ಹೇಳುತ್ತೇನೆ."

ಹಾಗೆ ಹೇಳಿದರೂ ವಿಷಯವನ್ನು ತಿಳಿಸಲು ಅವಳಿಗೆ ಇಷ್ಟವಿಲ್ಲವೆಂದು ಅನಿಲನು ಸುಮ್ಮನಾದನು.

ಒಂದು ದಿನ ಅನಿಲನು ಮನೆಗೆ ಬಂದವನೇ ಅರಸುರತ್ನೆಯೊಂದಿಗೆ "ನಾಳೆಯಿಂದ ನಾನು ಡ್ರಾಮಾ ಪ್ರಾಕ್ಟೀಸಿಗೆ ಹೋಗುತ್ತೇನೆ" ಎಂದು ಉತ್ಸಾಹದಿಂದ ಹೇಳಿದನು.

"ಅದೇನು ಹೊಸ ಏರ್ಪಾಟು?"

"ಈ ದಿನ ನಮ್ಮ ಸಂಗೀತ ಶಾಲೆಗೆ ರಾಮಾನುಜ ಅಯ್ಯಂಗಾರ್ಯರೆಂಬುವರು ಬಂದಿದ್ದರು. ಅವರು ನಮ್ಮ ಸಂಗೀತ ಮೇಸ್ಟರ ಸ್ನೇಹಿತರಂತೆ. ಅವರಿಗೆ ನಾಟಕಗಳೆಂದರೆ ಎಷ್ಟೋ ಮಮತೆ. ಸಿನಿಮಾಗಳು ಬಂದು ನಾಟಕಗಳು ಹಾಳಾದುವೆಂದೂ, ತರುಣರು ಮುಂದೆ ಬಂದು ರಂಗಭೂಮಿಯ ಉದ್ಧಾರವನ್ನು ಮಾಡಬೇಕೆಂದೂ ಅವರು ಹೇಳುತ್ತಾರೆ. ಇದಕ್ಕಾ

ಗಿಯೇ ಅವರು ಇಂಡಿಯನ್ ಅಮೆಚೂರ್ಸ್ ಎಂದು ಒಂದು ಸಂಘವನ್ನು ಮಾಡಿದ್ದಾರೆ. ನನ್ನನ್ನು ನಾಳೆಯಿಂದ ಅಲ್ಲಿಗೆ ಬರುವುದಕ್ಕೆ ಹೇಳಿದರು."

"ಆದರೆ ಈ ನಾಟಕ, ಸಂಗೀತಗಳಿಂದ ನೀನು ಸಿನಿಮಾ ನಟನಾಗಲು ಏನಾಗುತ್ತದೆ?" ಎಂದು ಸಂದೇಹದಿಂದ ಅರಸುರತ್ನೆಯು ಕೇಳಿದಳು.

"ನೀವೇ ಅವು ಬೇಕೆಂದು ಮೊದಲು ಹೇಳಲಿಲ್ಲವೇ?"

"ಹೇಳಿದೆ. ಆದರೆ ಸರಿಯಾಗಿ ಯೋಚನೆ ಮಾಡಿದನಂತರ ಇದೊಂದೂ ಉಪಯೋಗವಿಲ್ಲವೆಂದು ತೋರಲಾರಂಭವಾಗಿದೆ."

"ಯಾಕೆ? ಸಿನಿಮಾದಲ್ಲಿ ಹಾಡಬೇಕಾಗುವುದಿಲ್ಲವೇ? ಇಂಡಿಯನ್ ಅಮೆಚೂರ್ಸ್‌ಗೆ ಹೋಗಿ ಬರುವುದರಿಂದ ಅಭಿನಯಿಸುವ ರೀತಿಯು ಗೊತ್ತಾಗುವುದಿಲ್ಲವೇ? ನಮ್ಮ ಸಂಗೀತದ ಮೇಸ್ಟರು ರಾಮಾನುಜಯ್ಯಂಗಾರ್ಯರು ಬಹಳ ದೊಡ್ಡವರು. ಅವರೇ ಖುದ್ದಾಗಿ ರಂಗಭೂಮಿಯ ಮೇಲೆ ನಟಿಸದಿದ್ದರೂ ಅಭಿನಯ ಚತುರರಂತೆ"

"ಹಾಗಲ್ಲ, ಅನಿಲ. ನಿನಗೆ ಸಂಗೀತ ಬಂದರೆ ಸಿನಿಮಾದಲ್ಲಿ ಹಾಡಿಬಿಡಲಾಗುವುದಿಲ್ಲ. ನನ್ನ ದೃಷ್ಟಿಯಲ್ಲಿ ಇಲ್ಲಿ ನೀನು ಕಲಿಯುತ್ತಿರುವ ಸಂಗೀತವು ಬೇರೆ ಸಿನಿಮಾಗೆ ಬೇಕಾದ ಸಂಗೀತವೇ ಬೇರೆ. ಅಷ್ಟಕ್ಕೂ ನಿನ್ನ ಧ್ವನಿ ಮೈಕ್‌ಗೆ ಸರಿಹೋಗುತ್ತದೆಯೋ ಇಲ್ಲವೋ ಎಂಬುದನ್ನು ಗಮನಿಸಬೇಕಾಗಿದೆ. ಇದರ ಮೇಲೆ ಸಿನಿಮಾದ ಅಭಿನಯಕ್ಕೂ ನಾಟಕದ ಸಂಗೀತಕ್ಕೂ ಸಂಬಧವೇ ಇಲ್ಲ."

"ಇವೊಂದೂ ಇಲ್ಲದೇ ಸಿನಿಮಾ ನಟನಾಗಲು ಆಗುತ್ತದೆಯೆ ?"

"ಆಗುತ್ತದೆ. ನಿನ್ನ ಧ್ವನಿಯು ಆಗುತ್ತದೆಯೋ ಇಲ್ಲವೋ ನೋಡುವುದು. ಆಗದಿದ್ದರೆ ಪ್ಲೇ ಬ್ಯಾಕ್ ಹಾಡಿಸುವುದು. ಆದರೆ ಅದಕ್ಕೆಷ್ಟು ಬೇಕೋ ಅಷ್ಟು ಕಲಿಯುವುದು. ಹೇಗೆ ಅಭಿನಯ ಮಾಡಬೇಕೆಂಬುದನ್ನು ಡೈರೆಕ್ಟರೇ ಹೇಳಿಕೊಡುತ್ತಾನೆ. ಸಿನಿಮಾ ನಟನಾಗಲು ಆರಂಭದಲ್ಲಿ ಬೇಕಾದುದು ಇನ್ಫ್ಲ್ಯುಯನ್ಸ್ ಒಂದೇ. ಇನ್ನೇನೂ ಬೇಡ."

ಅವಳ ಮಾತುಗಳಿಗೆಲ್ಲಾ ಉತ್ತರ ಕೊಡಲು ಅನಿಲನಿಗೆ ಶಕ್ತಿಯಿರಲಿಲ್ಲ. ಅವನು ಮೌನವಾಗಿದ್ದನು.

ಅರಸುರತ್ನೆಯು ಸ್ವಲ್ಪ ತಡೆದು "ಫಿಲಿಂ ಪ್ರೊಡ್ಯೂಸರೊಬ್ಬನು ನನ್ನ

ಬಳಿ ಬಂದು ಫಿಲಿಂ ತಯಾರು ಮಾಡಲು ಹಣಬೇಕೆಂದು ಕೇಳುತ್ತಿದ್ದಾನೆ. ನಾನೂ ನೋಡುತ್ತಿದ್ದೇನೆ. ಅದೇನಾದರೂ ಸರಿಹೋದರೆ ಅವನಿಗೆ ಹೇಳಿ ನಿನ್ನನ್ನು ಹೀರೋ ಮಾಡಿಸುತ್ತೇನೆ" ಎಂದಳು.

"ಅವರು ಒಪ್ಪಿಕೊಳ್ಳದಿದ್ದರೆ ?"

"ಒಪ್ಪಿಕೊಳ್ಳದೇ ಏನು ಮಾಡುತ್ತಾನೆ ? ಸಾಲ ಕೊಡುತ್ತೇನೆ. ನಮ್ಮ ಹುಡುಗನನ್ನು ಹೀರೋ ಮಾಡಬೇಕು–ಎಂದು ಹೇಳಿದರೆ, ನಾನು ತಾನೆಂದು ನೂರು ಜನ ಪ್ರೊಡ್ಯೂಸರುಗಳು ನಾಳೆಯ ದಿನ ಬೆಳಗಾಗ ನಮ್ಮ ಮನೆಯ ಮುಂದೆ ಬಂದು ನಿಲ್ಲುತ್ತಾರೆ."

ಒಂದು ವಿಧವಾಗಿ ಅವಳು ಹೇಳುವುದು ಸರಿ ಎಂದು ಅನಿಲನಿಗೆ ಕಂಡಿತು. ಅವಳು ತಾನು ಹೇಳುವುದನ್ನು ಸಾಧಿಸಬಲ್ಲಳೆಂದೂ ತೋರಿತು. ಆದರೂ ಬಂದಿರುವ ಅವಕಾಶವನ್ನು ಕಳೆದುಕೊಳ್ಳಲು ಅವನಿಗೆ ಇಷ್ಟವಿರಲಿಲ್ಲ.

"ನೀವು ತಪ್ಪು ತಿಳಿದುಕೊಳ್ಳದಿದ್ದರೆ ಒಂದು ಮಾತು ಹೇಳುತ್ತೇನೆ." ಎಂದು ಸಂಕೋಚವಾಗಿ ಹೇಳಿದನು.

"ಹೇಳು, ಅದಕ್ಕೇನು ?"

"ನೀವು ಹೇಳುವುದೆಲ್ಲಾ ನನಗೆ ಸರಿಯಾಗಿಯೇ ಕಂಡು ಬರುತ್ತದೆ. ಆದರೆ ಮನೆಯಲ್ಲಿ ಸುಮ್ಮನೆ ಕುಳಿತಿರುವುದಕ್ಕೆ ಬೇಜಾರಾಗುತ್ತದೆ. ನೀವು ಒಪ್ಪಿಕೊಳ್ಳುವುದಾದರೆ ಸದ್ಯದಲ್ಲಿ ಹೋಗಿ ಬರುತ್ತೇನೆ."

"ಹೋಗಿ ಬಾ. ಹೋಗಿ ಬರುವುದಕ್ಕೆ ನನ್ನ ಆಕ್ಷೇಪಣೆ ಏನೂ ಇಲ್ಲ. ಆದರೆ ಅದರಿಂದಲೇ ಎಲ್ಲವೂ ಆಗುತ್ತದೆಂದು ಕೊಳ್ಳಬೇಡ" ಎಂದು ಅರಸು ರತ್ನಿಯು ಹೇಳಿದಳು.

೮

ಅನಿಲಕುಮಾರನು ಬೆಳಗಿನ ಹೊತ್ತು ಸಂಗೀತವನ್ನು ಕಲಿಯಲು ಹೋಗುತ್ತಿದ್ದಂತೆಯೇ ಸಾಯಂಕಾಲದ ಹೊತ್ತು ರಾಮಾನುಜಯ್ಯಂಗಾರ್ಯರ ಇಂಡಿಯನ್ ಅಮೆಚೂರ್ಸ್ ನಾಟಕ ಸಂಘಕ್ಕೆ ಹೋಗಿ ಬರುತ್ತಿದ್ದನು.

ಗುಂಡೋಪಂತರ ಬೀದಿಯಲ್ಲಿ ದೊಡ್ಡ ಮನೆಯೊಂದರ ವಿಶಾಲವಾದ ಮಹಡಿಯ ಮೇಲೆ ಇಂಡಿಯನ್ ಅಮೆಚೂರ್ಸ್ ನಾಟಕಸಂಘ ನಡೆಯುತ್ತಿತ್ತು. ಊರಿನ ಶ್ರೀಮಂತರಲ್ಲಿ ಒಬ್ಬರಾದ ರಾಮಾನುಜಯ್ಯಂಗಾರ್ಯರು ತಮ್ಮ ಸ್ವಂತದ್ದೇ ಆದ ಆ ಸ್ಥಳವನ್ನು ಸಂಘದ ಉಪಯೋಗಕ್ಕೆ ಕೊಟ್ಟಿದ್ದರು. ನಾಟಕದ ಅಭ್ಯಾಸಕ್ಕೂ ಪ್ರದರ್ಶನಕ್ಕೂ ಧಾರಾಳವಾಗಿ ಹಣವನ್ನು ಖರ್ಚು ಮಾಡುತ್ತಿದ್ದರು.

ನಾಟಕವನ್ನು ವೃತ್ತಿಯಾಗಿಯೇ ಇಟ್ಟುಕೊಳ್ಳದಿರುವಂತಹ ರಂಗಭೂಮಿಯ ಪ್ರೇಮಿಗಳಿಗೆ ಈ ಸ್ಥಳವು ಮನೆಯಾಗಿತ್ತು.

ಅನಿಲನು ಅತ್ಯಲ್ಪ ಕಾಲದಲ್ಲಿಯೇ ಸಂಗೀತ ಶಾಲೆಯಲ್ಲಿಯೂ ನಾಟಕ ಸಂಘದಲ್ಲಿಯೂ ಪ್ರಭಾವಶಾಲಿಯಾದನು ಸಹಜ ಸುಂದರನೂ ಮಿತ ಭಾಷೆಯೂ ಆದ ಅವನನ್ನು ಸಾಧಾರಣವಾಗಿ ಎಲ್ಲರೂ ವಿಶ್ವಾಸ ಮಾಡುತ್ತಿದ್ದರು. ಎರಡು ಕಡೆಗಳಲ್ಲಿಯೂ ವಯಸ್ಸಾದ ಹೆಂಗಸರೂ, ಯೌವನದಲ್ಲಿ ಕಾಲಿಡು

ತ್ತಿದ್ದ ಹುಡುಗಿಯರೂ ಬರುತ್ತಿದ್ದರು. ಕೆಲವರು ಅವನನ್ನು ಅದೊಂದು ಬಗೆಯ ದೃಷ್ಟಿಯಿಂದ ನೋಡುತ್ತಿದ್ದರು. ಒಬ್ಬ ಹುಡುಗಿಯಂತೂ ಅವನನ್ನು ಬಲವಾಗಿ ಹಿಡಿದು ಬಿಟ್ಟಿದ್ದಳು.

ಅನಿಲನು ಎಲ್ಲರೊಂದಿಗೂ ಸ್ನೇಹದಿಂದಲೇ ನಡೆದುಕೊಳ್ಳುತ್ತಿದ್ದನು. ಯಾರೊಂದಿಗೂ ಹೆಚ್ಚು ಬಳಕೆ ಮಾಡಿಕೊಂಡಿರಲಿಲ್ಲ.

ಅಯ್ಯಂಗಾರ್ ಸ್ವಾಮಿಗಳೂ ಅಷ್ಟೆ. ಅನಿಲನನ್ನು ಬರುವುದಕ್ಕೆ ಪ್ರೋತ್ಸಾಹಿಸಿದ್ದರೂ ಅವನ ವಿಷಯದಲ್ಲಿ ಹೆಚ್ಚು ಆಸಕ್ತಿಯನ್ನು ತೆಗೆದು ಕೊಳ್ಳುತ್ತಿರಲಿಲ್ಲ. ಅವರು ಯಾರ ವಿಷಯವನ್ನೂ ಅತಿಯಾಗಿ ಹಚ್ಚಿಕೊಳ್ಳುತ್ತಿರಲಿಲ್ಲ.

ಅನಿಲನೊಂದಿಗೆ ಬಹಳ ಬಳಕೆಯಿಂದ ಓಡಿಯಾಡುತ್ತಿದ್ದ ಹುಡುಗಿಯ ಹೆಸರು ಮೀನಾಕ್ಷಿ. ಆದರೆ ಅವಳನ್ನು ಮೀನಾ ಎಂದು ಕರೆಯುತ್ತಿದ್ದರು.

ಅನಿಲನು ಹೋಗುವ ವೇಳೆಗಾಗಲೇ ಇಂಡಿಯನ್ ಅಮೆಚೂರ್ಸ್ನಲ್ಲಿ ಶಾಕುಂತಲ ನಾಟಕದ ಅಭ್ಯಾಸವು ನಡೆಯುತ್ತಿದ್ದಿತು. ಮೀನಾಗೆ ಶಾಕುಂತಲೆಯ ಪಾತ್ರವನ್ನು ಕೊಡಲಾಗಿತ್ತು. ಹೊಸದಾಗಿ ಹೋದ ಅನಿಲನಿಗೆ ಕಣ್ವ ಋಷಿಯ ಶಿಷ್ಯನಾದ ಗೌತಮನ ಪಾತ್ರವನ್ನು ಕೊಡಲಾಗಿದ್ದಿತು.

ದುಷ್ಯಂತನಿಗೆ ಒಪ್ಪಿಸಲು ಗೌತಮನು ಶಕುಂತಲೆಯನ್ನು ಕರೆದು ಕೊಂಡು ಹೋಗುತ್ತಾನೆ. ಶಾಪಗ್ರಸ್ತನಾದ ದೊರೆಯು ಶಕುಂತಲೆಯು ತನಗೆ ಗೊತ್ತಿಲ್ಲದಂತೆ ಸ್ವಲ್ಪ ದೂರ್ತತೆಯಿಂದ ಮಾತನಾಡುತ್ತಾನೆ.

ಆಗ ಖತಿಗೊಂಡ ಗೌತಮನು " ರಾಜನೇ ! ವನವಾಸಿಗಳಾದ ನಾವು ನಿರ್ಗತಿಕರೆಂದುಕೊಳ್ಳಬೇಡ. ನಾವು ತಪೋಧನರು " ಎಂದು ಹೇಳುತ್ತಾನೆ.

ಈ ಮಾತನ್ನು ಹೇಳುತ್ತಾ ಅನಿಲ ಕುಮಾರನು ದುಷ್ಯಂತನ ಕಡೆಗೆ ತಿರುಗಿಕೊಂಡು ಕೋಪದಿಂದ ಹೇಳಿದನು.

ಆ ಸಮಯದಲ್ಲಿ ಅಲ್ಲಿಯೇ ಇದ್ದ ರಾಮಾನುಜ ಅಯ್ಯಂಗಾರ್ಯರು " ಅನಿಲಕುಮಾರ್ ! ನೀವು ಆ ಮಾತುಗಳನ್ನು ಹೇಳುವ ರೀತಿಯು ಸರಿಯಾಗಿದೆ. ಆದರೆ ಅದನ್ನು ಹೇಳುವಾಗ ದುಷ್ಯಂತನ ಕಡೆಗೆ ತಿರುಗಿ ಕೊಂಡು ಹೇಳುತ್ತಿದ್ದೀರಿ. ರಂಗಭೂಮಿಯ ಮೇಲೆ ನೀವು ಇದೇ ರೀತಿ ಯಾಗಿ ನಿಂತು ಹೇಳಿದರೆ ಪ್ರೇಕ್ಷಕರಿಗೆ ಬೆನ್ನು ತೋರಿದಂತಾಗುತ್ತದೆ.

ಯಾವಾಗಲಾದರೊವ್ಮೆ ಪ್ರೇಕ್ಷಕರ ಕಡೆಗೆ ಬೆನ್ನು ತೋರಿಸುವುದು ಸರಿಯೇ ಹೊರತು ಸತತವಾಗಿ ಹಾಗೆ ಮಾಡಬಾರದು '' ಎಂದು ಹೇಳಿದರು.

ಎಲ್ಲರೆದುರಿಗೂ ಅವರು ಹಾಗೆ ಹೇಳಿದುದು ಅನಿಲನಿಗೆ ಅಪಮಾನ ವಾದಂತೆ ಆಯಿತು.

ಅವನು ಕೂಡಲೇ " ತಾವು ಹೇಳುವುದು ಸರಿ. ಆದರೆ ಅಭಿನಯದಲ್ಲಿ ಸಹಜತೆ ಇರಬೇಡವೇ ? ಗೌತಮನು ಮಾತನಾಡುವಾಗ ದುಷ್ಯಂತನಿಗೆ ಅಭಿಮುಖವಾಗಿರಬೇಕೆಂದು ನನಗೆ ತೋರುತ್ತದೆ. ನಟನು ರಂಗಭೂಮಿ, ಪ್ರೇಕ್ಷಕರನ್ನು ಮರೆತು ಪಾತ್ರದಲ್ಲಿಯೇ ಲೀನನಾಗಬೇಕಲ್ಲವೇ ?'' ಎಂದು ಕೇಳಿದನು.

ಅನಿಲನ ಉತ್ತರದಿಂದ ಮಿನಾನೆಗೆ ಖುಷಿಯಾಯಿತು. ಅವಳು ಮುಗುಳು ನಗೆಯನ್ನು ನಗುತ್ತಾ, ಅನಿಲನ ಕಡೆಗೆ ನೋಡಿದಳು.

ದೊಡ್ಡವರಾದರೂ ಸಹ ರಾಮಾನುಜಯ್ಯಂಗಾರ್ಯರು ಆ ಉತ್ತರ ದಿಂದ ತಬ್ಬಿಬ್ಬಾದರು. ಇದ್ದುದರಲ್ಲಿಯೇ ಚೇತರಿಸಿಕೊಂಡು " ಹೌದು. ಅದೂ ಯೋಚನೆ ಮಾಡಬೇಕಾದ ವಿಷಯವೇ !" ಎಂದು ಹೇಳಿದರು.

ಆ ದಿನ ಅನಿಲನು ಮನೆಗೆ ಹೋಗುವ ಮೊದಲು ಅಯ್ಯಂಗಾರ್ ಸ್ವಾಮಿಗಳು ಪ್ರತ್ಯೇಕವಾಗಿ ಕರೆದು ಅವನೊಡನೆ ಮಾತನಾಡಿದರು.

''ನೋಡಿ, ಅನಿಲಕುಮಾರ್ ! ನೀವು ಹೇಳಿದ ವಿಷಯವನ್ನು ಬಹಳ ಹೊತ್ತು ಆಲೋಚನೆ ಮಾಡಿದೆ. ಒಂದು ವಿಧವಾಗಿ ನೋಡಿದರೆ ನೀವು ಹೇಳುವುದು ಸರಿ. ನಟನು ಎಲ್ಲವನ್ನೂ ಮರೆತು ತಾನು ಅಭಿನಯಿಸುವ ಪಾತ್ರದಲ್ಲಿಯೇ ಲೀನವಾಗಬೇಕು."

ಆ ಮಾತು ಕೇಳಿ ಅನಿಲನಿಗೆ ಬಹಳ ಹೆಮ್ಮೆಯುಂಟಾಯಿತು.

''ಆದರೆ ಮತ್ತೊಂದು ವಿಷಯವಿದೆ. ನಟನು ನಾಟಕದ ಒಂದು ಭಾಗ. ಸಮಗ್ರ ನಾಟಕದ ಉದ್ದೇಶವು ವಿಭಿನ್ನ ರುಚಿಗಳಿಂದ ಕೂಡಿರುವ ಪ್ರೇಕ್ಷಕರ ಕಣ್ಮನಗಳಿಗೆ ವಾಸ್ತವವಾದ ಆನಂದವನ್ನು ಸಲ್ಲಿಸುವುದಾಗಿದೆ. ನಟನು ತಾನು ಅಭಿನಯಿಸುವ ಪಾತ್ರದಲ್ಲಿ ಎಷ್ಟೇ ಸಾರೂಪ್ಯವನ್ನು ಪಡೆ ದರೂ ಸಹ ಮೇಲ್ಕಂಡ ವಿಷಯವನ್ನು ಗಮನದಲ್ಲಿಟ್ಟುಕೊಳ್ಳಬೇಕು."

ಅನಿಲನ ಮುಖವು ಸಪ್ಪಗಾದುದನ್ನು ಗಮನಿಸಿ "ಇದರಿಂದ ನೀನು ಖಿನ್ನನಾಗಬೇಡ. ನೀನು ಹೇಳಿದುದು ಒಂದು ಭಾಗ. ನಾನು ಹೇಳಿದುದು ಮತ್ತೊಂದು ಭಾಗ. ಎರಡೂ ಮುಖ್ಯ'' ಎಂದು ಸಮಾಧಾನವನ್ನು ಹೇಳಿದರು.

ಅವನು ಇದೆಲ್ಲವನ್ನೂ ಅರಸುರತ್ನೆಯೊಡನೆ ಹೇಳಿದನು. ಅವಳಿಗೆ ಅದೊಂದರಲ್ಲಿಯೂ ಆಸಕ್ತಿ ಇರಲಿಲ್ಲ. ಅವಳಿಗಿದ್ದ ಆಸಕ್ತಿಯು ಅವನಲ್ಲಿ ಮಾತ್ರ.

ಎರಡು ತಿಂಗಳಲ್ಲಿ ಶಕುಂತಲ ನಾಟಕದ ಅಭ್ಯಾಸವು ಮುಗಿದು ಪ್ರದರ್ಶನಕ್ಕೆ ಸಿದ್ಧವಾಯಿತು. ಟರ್ನ ಹಾಲಿನಲ್ಲಿ ನಾಟಕವೂ ನಡೆಯಿತು. ಪುರಜನರೂ, ಪತ್ರಿಕೆಗಳವರೂ ಪ್ರದರ್ಶನವನ್ನು ಕೊಂಡಾಡಿದರು. ಪತ್ರಿಗಳವರು ಗೌತಮನ ಪಾತ್ರ ವಹಿಸಿದ್ದ ಅನಿಲ ಕುಮಾರನಲ್ಲಿ ದೊಡ್ಡ ನಟನಾಗುವ ಲಕ್ಷಣಗಳು ಕಂಡು ಬರುತ್ತಿವೆ–ಎಂದು ಬರೆದರು. ಮೈಸೂರಿನಲ್ಲಿ ಇಂತಹ ನಾಟಕವಾಗಿ ಎಷ್ಟೋ ವರ್ಷಗಳಾಗಿದ್ದುವು.

ಆದರೆ ಅನಿಲನಿಗೆ ಮಾತ್ರ ಮನಸ್ಸಿನಲ್ಲಿಯೇ ಸ್ವಲ್ಪ ಅತೃಪ್ತಿ ಇದ್ದಿತು. ನಾಟಕ ಸಂಘಕ್ಕೆ ಹೋದಾಗ ಮುಂದಿನ ನಾಟಕದಲ್ಲಿ ಒಂದು ಪಾತ್ರವು ಸಿಕ್ಕಿದ್ದು ಬಹಳ ಸಂತೋಷವಾಗಿತ್ತು. ಆದರೆ ಒಂದು ಒಂದೂವರೆ ತಿಂಗಳಲ್ಲಿ ತನಗೇನೋ ಅನ್ಯಾಯವಾಯಿತೆಂದು ಯೋಚಿಸತೊಡಗಿದನು. ತನಗೆ ದುಷ್ಯಂತನ ಪಾತ್ರವನ್ನು ಕೊಟ್ಟಿದ್ದರೆ ನಾಟಕವು ಇನ್ನೂ ಚೆನ್ನಾಗುತ್ತಿದ್ದಿತೆಂದು ಭಾವಿಸುತ್ತಿದ್ದನು. ಮಿನೆಯ ಸ್ನೇಹವು ಹೆಚ್ಚಾಗುತ್ತಿದ್ದುದು ಇದಕ್ಕೊಂದು ಕಾರಣವಾಗಿದ್ದಿತು.

ನಾಟಕಕ್ಕೆ ಅರಸುರತ್ನೆಯೂ ಬಂದಿದ್ದಳು. ವಾಪಸ್ಸು ಕಾರಿನಲ್ಲಿ ಬರುವಾಗ "ನಾನು ಏನೋ ಎಂದುಕೊಂಡಿದ್ದೆ. ನೀನು ಬಹಳ ಚೆನ್ನಾಗಿ ಅಭಿನಯಿಸುತ್ತೀಯೆ. ನಿನ್ನ ಅಭಿನಯವನ್ನು ನೋಡಿ ನನಗೆ ಎಷ್ಟೋ ಸಂತೋಷವಾಯಿತು" ಎಂದಳು.

[೨]

ಅನಿಲನು ತನಗೆ ಸಣ್ಣ ಪಾತ್ರವನ್ನು ಕೊಟ್ಟು ಅನ್ಯಾಯ ಮಾಡಿದ ರೆಂದು ಮನಸ್ಸಿನಲ್ಲಿದ್ದ ಅಸಮಾಧಾನವನ್ನು ವ್ಯಕ್ತಪಡಿಸಿದನು.

"ಎಷ್ಟಾದರೂ ನೀನು ಹುಡುಗ, ಅನಿಲ. ಅಭಿನಯದ ವಿಷಯವನ್ನು ಗಮನಿಸುವವರಿಗೆ ದೊಡ್ಡ ಪಾತ್ರ, ಸಣ್ಣ ಪಾತ್ರಗಳೆಂಬುದಿಲ್ಲ. ಯಾವುದೇ ಪಾತ್ರವಾಗಲಿ, ಹೇಗೆ ಅಭಿನಯಿಸುತ್ತಾನೆಂಬುದು ಮುಖ್ಯ. ಹಾಗೆ ನೋಡಿ ದರೆ ನಿನ್ನ ಅಭಿನಯವು ಸಮರ್ಪಕವಾಗಿದ್ದಿತು."

ಅನಿಲನಿಗೆ ಆ ಮಾತು ಸರಿ ಎನಿಸಿತು.

ಅರಸುರತ್ನೆಯು "ಶಕುಂತಲೆಯ ಪಾತ್ರವನ್ನು ವಹಿಸಿದ್ದ ಹುಡುಗಿಗೂ ನಿನಗೂ ಬಹಳ ಸ್ನೇಹವಿರುವಂತಿದೆ'' ಎಂದಳು.

"ಹಾಗೇನಿಲ್ಲವಲ್ಲ. ಅವಳೂ ನಾನೂ ಇಬ್ಬರೂ ಅಮೆಚೂರ್ಸ್‌ಗೆ ಹೋಗಿ ಬರುವುದರಿಂದ ಪರಿಚಯವಿದೆ, ಅಷ್ಟೇ''

"ಅಷ್ಟೇ ಅಲ್ಲ, ಅನಿಲ. ಅವಳು ನಿನ್ನನ್ನೇ ದುಷ್ಯಂತನೆಂದು ಕೊಂಡಿರುವಂತೆ ಇದ್ದಿತು."

ಅನಿಲ ಆ ಮಾತನ್ನು ಅಲ್ಲಿಗೇ ಬಿಟ್ಟನು. ಆದರೆ ''ಈ ಮುದುಕಿ ಯವರಿಗೆಷ್ಟು ಅಸೂಯೆ" ಎಂದು ಮನಸ್ಸಿನಲ್ಲಿಯೇ ಎಂದುಕೊಂಡನು.

೬

ಯಾವುದೋ ಮಾತಿನ ಮಧ್ಯೆ ವಿನಾನಾ " ಅನಿಲ್ ! ಮುಂದಿನ ವಾರ ವಿಶ್ವನಾಥಂ ಬರುತ್ತಾರೆ " ಎಂದು ಹೇಳಿದಳು.

ಅನಿಲನು ಅತ್ಯಾಸಕ್ತಿಯಿಂದ " ಆದೇನು ಅವರು ಬರುವುದು ?" ಎಂದು ಕೇಳಿದನು.

" ಅವರು ಪ್ರತಿ ಬೇಸಿಗೆಗೂ ಬೆಂಗಳೂರಿಗೆ ಬಂದೇ ಬರುತ್ತಾರೆ. ಇಲ್ಲಿಂದ ಹೋಗುವಾಗ ಒಂದೆರಡು ತೆಲಗು ನಾಟಕಗಳನ್ನೂ, ಒಂದು ಕನ್ನಡ ನಾಟಕವನ್ನೂ ಆಡಿ ಹೋಗುತ್ತಾರೆ. ಈ ಬಾರಿ ಅವರು ವಾಸವದತ್ತಾ ಆಡಬಹುದು. ಹೋದ ಸಲವೇ ಆಡಬೇಕೆಂದು ವರದಮ್ಮ ಹಟ ಹಿಡಿದಿದ್ದರು "

ಇಂಡಿಯನ್ ಅಮೆಚೂರ್ಸ್‌ಗೆ ಬಂದ ಕೆಲವು ದಿನಗಳಲ್ಲಿಯೇ ಅನಿಲನು ವಿಶ್ವನಾಥಂರವರ ವಿಷಯವನ್ನು ಕೇಳಿ ತಿಳಿದುಕೊಂಡಿದ್ದನು.

ವಿಶ್ವನಾಥಂರವರು ಬೆಜವಾಡದವರು. ಬೇಕಾದ ಹಾಗೆ ಹಣವಿರುವ ಪ್ರಭುಗಳು. ಮೊದಲಿನಿಂದಲೂ ಅವರಿಗೆ ಸಾಹಿತ್ಯ, ನಾಟಕ ಮುಂತಾವುಗಳಲ್ಲಿ ಬಹಳ ಅಭಿಮಾನ. ವರದೆಗೂ ಅವರಿಗೂ ಪರಿಚಯವಾದ ಮೇಲಂತೂ ನಾಟಕದ ಮೇಲಿನ ಅಭಿಮಾನವು ಬಹಳವಾಯಿತು. ಇಷ್ಟು

ದರೂ ಅವರಾಗಲೀ, ವರದೆಯಾಗಲೀ ವೃತ್ತಿಶಃ ನಾಟಕದವರಲ್ಲ. ಆದರೆ ನಾಟಕದವರಿಗಿಂತಲೂ ಹೆಚ್ಚಾಗಿ ರಂಗಭೂಮಿಯಲ್ಲಿ ಆಸಕ್ತಿಯುಳ್ಳವರು.

ಆದರಿಂದಲೇ ಅವರಿಗೂ ರಾಮಾನುಜಯ್ಯಂಗಾರ್ಯರಿಗೂ ವಿಶೇಷ ಸ್ನೇಹವೇರ್ಪಟ್ಟಿದ್ದಿತು. ವಿಶ್ವನಾಥಂ ಅವರು ಪ್ರತಿ ಬೇಸಿಗೆಯಲ್ಲೂ ಬಂದು ಇರುತ್ತಿದ್ದರು. ಯಾರಾದರೂ ಆಹ್ವಾನಿಸಿದರೆ ಸಭೆಗಳಿಗೆ ಹೋಗಿ ತೆಲಗು ಸಾಹಿತ್ಯವನ್ನು ಕುರಿತು ಮಾತನಾಡುತ್ತಿದ್ದರು. ಅದಿಲ್ಲದಿದ್ದರೆ ಇಂಡಿಯನ್ ಅಮೆಚೂರ್ಸ್‌ಗೆ ಬಂದು ಕಾಲ ಕಳೆಯುವರು. ಅವರಿಗೆ ಕನ್ನಡವೂ ಬರುತ್ತಿತ್ತು. ಇಲ್ಲಿದ್ದಾಗ ಯಾವುದಾದರೂ ಹೊಸ ಕನ್ನಡ ನಾಟಕವನ್ನು ಅಭ್ಯಾಸ ಮಾಡಿ ಆಡುವರು.

ಸ್ನೇಹಿತರು ಬಲಾತ್ಕಾರ ಮಾಡಿದರೆ ತಮ್ಮ ಕಡೆಯಿಂದ ಯಾರನ್ನಾದರೂ ಕರೆಸಿ ಒಂದೆರಡು ತೆಲಗು ನಾಟಕಗಳನ್ನೂ ಏರ್ಪಡಿಸುವರು.

ವರದಾ ದೇವಿಯು ವಿಶ್ವನಾಥಂರವರಿಗಿಂತ ವಯಸ್ಸಿನಲ್ಲಿ ಅತ್ಯಂತ ಸಣ್ಣವಳಾದರೂ ಹೇಗೋ ಅವರಿಗೆ ಜೊತೆಯಾಗಿದ್ದಿತು. ಅವರದು ದೈವಿಕ ಪ್ರೇಮವೆಂದು ಅವರ ಮಿತ್ರವೃಂದವು ಹೇಳುತ್ತಿದ್ದಿತು. ಅಂತೂ ಇಬ್ಬರೂ ಕಲಾಪ್ರೇಮಿಗಳು. ದಕ್ಷಿಣ ದೇಶದಲ್ಲೆಲ್ಲಾ ಅವರು ಪ್ರಸಿದ್ಧರಾಗಿದ್ದರು.

ಮಾನೆಯು ಹೇಳಿದಂತೆ ಅವರು ವಾರದಲ್ಲಿಯೇ ಬೆಂಗಳೂರಿಗೆ ಬಂದರು. ನಾಟಕ ಸಂಘಕ್ಕೂ ಬಂದಿದ್ದರು. ಹಳಬರನ್ನೆಲ್ಲಾ ವಿಶ್ವಾಸದಿಂದ ಮಾತನಾಡಿಸಿದರು. ಹೊಸಬರನ್ನು ವಿಚಾರಿಸಿ, ಪರಿಚಯ ಮಾಡಿಕೊಂಡರು.

ಮಾನೆಯು ಬಂದು ಅನಿಲನೊಡನೆ " ವಿಶ್ವನಾಥಂ ಅವರನ್ನು ನೋಡಿದೆಯಾ ? ಅನಿಲ. ಈ ಬಾರಿ ವಾಸವದತ್ತ ನಾಟಕವನ್ನೇ ಆಡುವುದಾಗಿ ವರದ ಹೇಳಿದರು. ಈ ಊರಿನ ಯಾರೋ ಶಾಸ್ತ್ರಿಗಳು ಈಗಾಗಲೇ ನಾಟಕವನ್ನು ಬರೆದಿದ್ದಾರಂತೆ " ಎಂದಳು.

" ಅದರಲ್ಲಿ ವಿಶ್ವನಾಥಂ ಯಾವ ಪಾತ್ರ ಧರಿಸುತ್ತಾರೆ, ಗೊತ್ತೇನು ?"

" ಓಹೋ ! ನಾನು ಎಲ್ಲವನ್ನೂ ವಿಚಾರಿಸಿಬಿಟ್ಟೆ. ಅವರು ಯೌಗಂಧರಾಯಣನ ಪಾತ್ರವನ್ನು ಧರಿಸುತ್ತಾರಂತೆ "

" ವರದಾದೇವಿ ?"

" ಗೊತ್ತೇ ಇದೆ. ಅವರು ವಾಸವದತ್ತೆ "

" ಉದಯನ ?"

" ಅದೇ ಈಗ ಬಂದಿರುವ ಸಮಸ್ಯೆ ! ಯಾರನ್ನು ಆ ಪಾತ್ರಕ್ಕೆ ಆರಿಸು ವರೋ ನೋಡಬೇಕು "

" ಯಾರನ್ನು ಆರಿಸಬಹುದು, ಎನ್ನುತ್ತೀಯಾ ?"

"ಗೊತ್ತಾಗಲಿಲ್ಲ. ನಿನ್ನನ್ನೇ ಆರಿಸಿದರೆ ಚೆನ್ನಾಗಿರುತ್ತದೆಯಲ್ಲವೇ?"

ಅವನು ಮಾತನಾಡಲಿಲ್ಲ.

" ಯಾಕೆ, ನಿನಗೆ ಇಷ್ಟವಿಲ್ಲವೇ ?"

" ಇಷ್ಟವಿಲ್ಲದೇ ಏನು, ಮೀನಾ. ನನಗೆ ಆ ಪಾತ್ರ ಸಿಕ್ಕಿದರೆ ಪುಣ್ಯ. ನನ್ನಂತಹವನಿಗೆ ಯಾರು ಕೊಡುತ್ತಾರೆ ?"

" ನಾನು ಕೊಡಿಸುತ್ತೇನೆ. ವರದಮ್ಮನಿಗೆ ನೀನು ಎಂತಹ ಉತ್ತಮ ನಟನೆಂಬುದನ್ನು ಹೇಳುತ್ತೇನೆ. ನಿನಗೇ ಕೊಡಬೇಕೆಂದು ಹಟ ಹಿಡಿ ಯುತ್ತೇನೆ. "

" ನಿನಗೆ ವರದಾದೇವಿ ಗೊತ್ತೇ ?"

ಮೀನೆಯು " ಚೆನ್ನಾಗಿ ಗೊತ್ತು. ನಾಳೆಯೇ ನಾನು ಹೋಗಿ ಮಾತನಾಡಿಕೊಂಡು ಬರುತ್ತೇನೆ '' ಎಂದು ಹೇಳಿದಳು.

ಎರಡು ದಿನಗಳಲ್ಲಿಯೇ ಮೀನಾ ತಾನು ಹೇಳಿದಂತೆ ಮಾತನಾಡಿ ಕೊಂಡು ಬಂದಳು.

" ನಾನು ವಿಶ್ವನಾಥಂರವರಿಗೂ ವರದಾದೇವಿಯವರಿಗೂ ಹೇಳಿದೆ. ಅವರಿಗೇನೂ ಆಕ್ಷೇಪಣೆ ಇರಲಿಲ್ಲ. ನೋಡುತ್ತೇವೆ. ಮನಸ್ಸಿಗೆ ಒಪ್ಪಿದರೆ ಖಂಡಿತ ಆಗಬಹುದು " ಎಂದರು.

ಅದೇ ದಿನ ಸಾಯಂಕಾಲ ಐದು ಗಂಟೆಯ ಹೊತ್ತಿಗೆ ಮೀನಾಕ್ಷಿಯು ಅನಿಲನನ್ನು ಜೊತೆಯಲ್ಲಿ ಕರೆದುಕೊಂಡು ವಿಶ್ವನಾಥಂರ ಮನೆಗೆ ಹೋದಳು. ಹಜಾರದಲ್ಲಿ ವಿಶ್ವನಾಥಂ ಈಸೀ ಚೇರಿನ ಮೇಲೆ ಕುಳಿತು ಯಾವುದೋ ಪುಸ್ತಕವನ್ನು ಓದುತ್ತಿದ್ದರು. ವರದೆಯು ಒಳಗೆ ಹೋಗು ತ್ತಿದ್ದಳು. ಅವಳ ತಲೆಯು ಕೆದರಿದ್ದಿತು. ಮುಡಿದಿದ್ದ ಮಲ್ಲಿಗೆಯ

ದಂಡೆಯೂ ಬಿಚ್ಚಿಕೊಂಡು ನಾಲ್ಕು ಬೆರಳಗಲದ ಅವಳ ಅಳಕವಾದ ಕರಿಯ ಜಡೆಯೊಂದಿಗೆ ಆಡುತ್ತಿದ್ದಿತು.

ವಿಶ್ವನಾಥಂ ಅವರು ಮೀನೆಯನ್ನೂ ಅನಿಲನನ್ನೂ ವಿಶ್ವಾಸದಿಂದ ಕರೆದು ಕೂರಿಸಿದರು. ಆಗತಾನೇ ವರದಾ ಒಳಗೆ ಹೊರಟದ್ದಿದ್ದುದು ಅವರಿಗೆ ಗೊತ್ತಿದ್ದಿತೆಂದು ಕಂಡುಬರುತ್ತದೆ.

ಅವರು ತೆಲುಗು ಭಾಷೆಯಲ್ಲಿ "ವರದಾ. ಮೀನಾ ಬಂದಿದ್ದಾಳೆ. ಎರಡು ಕಪ್ಪು ಚಹಾ ಕಳಿಸು" ಎಂದು ಹೇಳಿದರು.

ಸ್ವಲ್ಪ ಹೊತ್ತಿನಲ್ಲಿಯೇ ಪರಿಚಾರಕನು ಚಹಾ ತಂದಿಟ್ಟನು. ಚಹಾ ತೆಗೆದುಕೊಂಡ ನಂತರ ಅವರು ಹುಡುಗರೊಡನೆ ಮಾತನಾಡುತ್ತಾ ಕುಳಿತುಕೊಂಡರು.

ವರದೆಯು ಹೊರಗೆ ಬರುವ ವೇಳೆಗೆ ಅರ್ಧ ಗಂಟೆಯಾಯಿತು. ಅವಳು ಬಾಗಿಲಿನ ಬಳಿ ಬರುತ್ತಿದ್ದಂತೆಯೆ ನೆರಿಗೆಯ ಶಬ್ದವಾಯಿತು. ಅವಳು ಆಕಾಶ ವರ್ಣದ ಸೀರೆಯುಟ್ಟಿದ್ದಳು. ಮೈನ ಕಾದ ಕೆನೆಹಾಲು ಬಣ್ಣಕ್ಕೆ ಅದು ಬಹು ಚೆನ್ನಾಗಿ ಒಪ್ಪುತ್ತಿತ್ತು. ಅಗಲವಾದ ಮೊಗ. ಜೊಂಪಲು ಜೊಂಪಲಾಗಿ ಹಾರುವ ಮುಂಗೂದಲು.

ಬರುತ್ತಲೇ ಎದ್ದು ನಿಂತ ಮೀನೆಯನ್ನು ಬೆನ್ನು ತಟ್ಟಿ ಮಾತನಾಡಿಸಿದಳು. ಅನಿಲನ ಪರಿಚಯ ಮಾಡಿಕೊಂಡು, ಕೋಮಲವಾದ ಕೈಗಳನ್ನು ಜೋಡಿಸಿ ನಮಸ್ಕರಿಸಿದಳು. ಅನಂತರ ಮೀನೆಯನ್ನು ಕೂರಿಸಿಕೊಂಡು ಕುಳಿತುಕೊಂಡಳು.

ವಿಶ್ವನಾಥಂ ಕೊರಳು ಸರಿಮಾಡಿಕೊಳ್ಳುತ್ತಾ, ಪುಸ್ತಕವನ್ನು ಪಕ್ಕದಲ್ಲಿದ್ದ ಸ್ಟೂಲಿನ ಮೇಲೆ ಇಟ್ಟು, ಕನ್ನಡಕವನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು "ಮೀನಾ ಎಲ್ಲವನ್ನು ಹೇಳಿದಳು. ಉದಯನನ ಪಾತ್ರಕ್ಕೆ ಬೇಕಾದ ವಯಸ್ಸು ಆಗಿರುವಂತೆ ಕಂಡು ಬರುವುದಿಲ್ಲ. ನಿಮ್ಮ ವಯಸ್ಸೆಷ್ಟು ?" ಎಂದರು.

"ನನಗೀಗ ಇಪ್ಪತ್ತೆರಡು ವಯಸ್ಸು. ರಂಗಭೂಮಿಯ ಮೇಲೆ ವಯಸ್ಸಾದವನಂತೆಯೇ ಕಂಡು ಬರುತ್ತೇನೆ. ಆದರೆ ರಾಜಕುಮಾರ ಉದಯ

ನನಿಗೆ ಇಪ್ಪತ್ತೆರಡು-ಇಪ್ಪತ್ತನಾಲ್ಕಕ್ಕಿಂತಲೂ ಹೆಚ್ಚು ವಯಸ್ಸಾಗಿದ್ದಿತೆಂದು ಹೇಳುವುದು ಹೇಗೆ ? "

ಅಂದಗಾತಿಯಾದ ವರದೆಯು ಅವನ ಕಡೆಗೆ ನೋಡಿದಳು. ಅಂದಗಾರನಾದ ಅನಿಲನು ಅವಳ ಕಡೆಗೆ ನೋಡಿದನು. ಅವರ ದೃಷ್ಟಿಯು ಕ್ಷಣ ಕಾಲ ಕೂಡಿದ್ದಿತು.

ಅನಂತರ ಮುಗುಳು ನಗೆಯನ್ನು ನಕ್ಕು "ಅನಿಲಕುಮಾರರು ಬಹಳ ಬುದ್ಧಿವಂತರೆಂದು ಕಂಡು ಬರುತ್ತದೆ" ಎಂದು ಹೇಳಿ, ವಿಶ್ವನಾಥಂ ಅವರ ಕಡೆಗೆ ನೋಡಿದಳು.

ಅವರು "ನೀನು ಹೇಳುವುದನ್ನು ತೆಗೆದು ಹಾಕುವುದಕ್ಕೆ ಆಗುವುದಿಲ್ಲ, ಅನಿಲ್ ! ಆದರೆ ಒಂದು ವಿಷಯ. ಈ ನಾಟಕದಲ್ಲಿ ವರದಾ ವಾಸವದತ್ತೆಯ ಪಾತ್ರವನ್ನು ಅಭಿನಯಿಸಬೇಕೆಂದಿದ್ದಾಳೆ. ಅವಳೊಡನೆ ನಿಂತುಕೊಂಡರೆ ನೀನು ಸಣ್ಣವನಾಗಿ ಕಂಡು ಬರುತ್ತೀಯೋನೋ ಎಂಬುದನ್ನು ಮೊದಲು ಪರಿಶೀಲಿಸಬೇಕಾಗಿದೆ" ಎಂದರು.

" ತಿಳಿದಂತಹ ತಮಗೆ ನಾನು ಹೇಳಬೇಕಾದುದೇನೂ ಇಲ್ಲ. ಮೇಕಪ್‌ನಲ್ಲಿ ವಯಸ್ಸು ಕಂಡುಬರದಂತೆ ಮಾಡುವುದು ಸಾಧ್ಯ. ಈಗ ಬೇಕಾದುದು ತಮ್ಮ ಕೃಪೆ "

ವಿಶ್ವನಾಥಂರವರು ಏನೂ ಹೇಳಲಿಲ್ಲ. ವರದೆಯ ಕಡೆಗೆ ನೋಡಿದರು.

ಕಡೆಯದಾಗಿ ಇತ್ಯರ್ಥ ಮಾಡುವವಳು ವರದೆ ಎಂದು ಅನಿಲನಿಗೆ ಗೊತ್ತಾಯಿತು. ಅವನು ದೈನ್ಯದಿಂದ ಅವಳ ಕಡೆಗೆ ನೋಡಿದನು. ಅವಳು ಅವನನ್ನು ನೋಡಿ ಸಣ್ಣದಾಗಿ ನಕ್ಕಳು.

ಅನಂತರ " ನಾವು ಈ ದಿನವೋ ನಾಳೆಯೋ ಸಾಯಂಕಾಲ ಅವೆನ್ಯೂ ಚೂರ್ಸ್‌ಗೆ ಬರುತ್ತೇವೆ. ಅಲ್ಲಿ ರಿಹರ್ಸಲ್ ನೋಡಿ ಯಾವುದನ್ನೂ ನಿರ್ಧರಿಸುತ್ತೇವೆ. ಸರಿಯಲ್ಲವೇ ? ಮೀನಾ " ಎಂದಳು.

ಮೀನೆಯು " ವರದಕ್ಕಾ ! ನೀವು ಬಂದು ನೋಡಿ. ಖಂಡಿತವಾಗಿ ಒಪ್ಪಿಕೊಳ್ಳುತ್ತೀರಿ. ಉದಯನನ ಪಾತ್ರಕ್ಕೆ ಅನಿಲನಂತಹವನು ನಿಮಗೆ ಸಿಗುವುದಿಲ್ಲ " ಎಂದಳು.

ವರದೆಯು ಮೀನಾಕ್ಷಿಯ ಕೆನ್ನೆಯನ್ನು ಚಿಗುಟಿ ನಗುತ್ತಾ

" ಒಳ್ಳೆಯ ಶಿಫಾರಸು ತಂದಿದ್ದೀರಿ " ಎಂದು ಹೇಳಿ, ಅನಿಲನ ಕಡೆಗೆ ಕುಡಿ ನೋಟವನ್ನು ಬೀರಿದಳು.

ಸ್ವಲ್ಪ ಹೊತ್ತು ಮಾತನಾಡುತ್ತಿದ್ದು ಅನಿಲನೂ ಮೀನಾಕ್ಷಿಯೂ ಅಲ್ಲಿಂದ ಬೀಳ್ಕೊಂಡು ಹೊರಟು ಬಂದರು.

ಅನಿಲ ಕುಮಾರನಿಗೆ ಖುಷಿಯಾಗಿತ್ತು. ತನಗೆ ಉದಯನನ ಪಾತ್ರವನ್ನು ಕೊಡಿಸಲು ಏನೇನು ಮಾಡಬೇಕೋ ಅದೆಲ್ಲವನ್ನೂ ವರದೆಯು ಮಾಡಬಹುದೆಂದು ಅವನ ಮನಸ್ಸಿಗೆ ಬಂದಿತ್ತು. ಅವಳ ಹುಸಿ ನೋಟ ಮತ್ತು ಕುಡಿ ನೋಟಗಳು ಆಸೆಯನ್ನು ಉಂಟುಮಾಡುವಂತಿದ್ದುವು.

# ೧೦

ಮೀನಾಕ್ಷಿಯ ಪ್ರಯತ್ನವು ಫಲಿಸಿತು.

ವಿಶ್ವನಾಥಂ ಅವರು ಮಿಕ್ಕ ಪಾತ್ರಗಳೆಲ್ಲಕ್ಕೂ ಜನಗಳನ್ನು ಗೊತ್ತು ಮಾಡಿ, ರಿಹರ್ಸಲ್ ಆರಂಭಿಸುವುದಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾಡಿದರು. ರಾಮಾನುಜಯ್ಯಂಗಾರ್ಯರು ಈ ಕೆಲಸದಲ್ಲೆಲ್ಲಾ ವಿಶ್ವನಾಥಂರವರೊಡನೆ ಬಹಳವಾಗಿ ಸಹಕರಿಸಿದರು.

ಅನಿಲಕುಮಾರನಿಗೆ ಇದ್ದಕ್ಕಿದ್ದಂತೆಯೇ ಇಷ್ಟೊಂದು ಪ್ರಾಶಸ್ತ್ಯವು ಬಂದುದು ಅನೇಕರಿಗೆ ಅಸಮಾಧಾನವಾಯಿತು.

ಆದರೆ ಅತ್ಯಂತ ಪ್ರಭಾವಶಾಲಿಗಳಾದ ವಿಶ್ವನಾಥಂ "ಉದಯನನ ಪಾತ್ರಕ್ಕೆ ಹೊಸಬನನ್ನೇ ಹಾಕಬೇಕೆಂದು ನಾನು ಮೊದಲಿನಿಂದಲೂ ತೀರ್ಮಾನ ಮಾಡಿದ್ದೆ" ಎಂದು ಖಚಿತವಾಗಿ ಹೇಳಿದುದರಿಂದ ಯಾರು ಏನು ಮಾತನಾಡುವುದಕ್ಕೂ ಆಗಲಿಲ್ಲ.

ವಾಸವದತ್ತಾದ ರಿಹರ್ಸಲ್ಸ್ ಭರದಿಂದ ನಡೆಯಲಾರಂಭವಾಯಿತು. ಇಂಡಿಯನ್ ಅಮೆಚೂರ್ಸ್‌ನ ಹಳೆಯ ನಟರೆಲ್ಲಾ ಅದರಲ್ಲಿ ಭಾಗವಹಿಸಿದರು. ಮೊದಮೊದಲು ಅವರುಗಳೆಲ್ಲರೂ ಅನಿಲನೊಡನೆ ಅಸೂಯೆಯಿಂದ

ನಡೆದುಕೊಳ್ಳುತ್ತಿದ್ದರು. ಅನಿಲಕುಮಾರನು ಬಹಳ ಬುದ್ಧಿವಂತ. ಉದಯನನ ಪಾತ್ರವನ್ನು ಸಂಪಾದನೆ ಮಾಡಬೇಕೆಂದಿದ್ದ. ಅದಾಯಿತು. ಇನ್ನು ಅದನ್ನಾರೂ ಕಿತ್ತುಕೊಳ್ಳುವಂತೆ ಇರಲಿಲ್ಲ. ಅದರಿಂದ ಅವನು ಯಾವಾಗಲೂ ಸಮಾಧಾನದಿಂದ ಇರುತ್ತಿದ್ದನು. ಯಾರಾದರೂ ಮಾತನಾಡಿಸಿದರೆ ಮಾತನಾಡುತ್ತಿದ್ದನು. ಇಲ್ಲದಿದ್ದರೆ ಒಂದು ಕಡೆ ಸುಮ್ಮನೆ ಕುಳಿತಿರುತ್ತಿದ್ದನು.

ಇಂಡಿಯನ್ ಅಮೆಚೂರ್ಸ್‌ನ ಹಳೆಯ ಸದಸ್ಯರಾದ ರಾಜಣ್ಣನವರು ರಿಹರ್ಸಲ್ಸ್ ಮಾಡಿಸುತ್ತಿದ್ದರು. ವಿಶ್ವನಾಥಂ ಅವರೊಡನೆ ಇದ್ದುಕೊಂಡು ಎಲ್ಲವನ್ನೂ ಗಮನಿಸುತ್ತಿದ್ದರು. ಅನಿಲನನ್ನು ಆರಿಸಿದುದರಲ್ಲಿ ಅವರಿಗೆ ನಿರಾಶೆಯಾಗಲಿಲ್ಲ. ತಾವು ಮಾಡಿದ್ದು ಬಹಳ ಸರಿ ಎಂದು ಅವರಿಗೆ ತೋರಲಾರಂಭಿಸಿತು. ಅವನು ಹಾಡುವುದರಲ್ಲಿ, ಮಾತನಾಡುವುದರಲ್ಲಿ, ನಟನೆಯಲ್ಲಿ, ಅವರು ನಿರೀಕ್ಷೆ ಮಾಡಿದ್ದುದಕ್ಕಿಂತಲೂ ಬಹಳ ಮಟ್ಟಿಗೆ ಮೆಚ್ಚಿಗೆಯನ್ನು ಪಡೆದನು.

ರಾಜಣ್ಣನವರಂತೂ "ಅನಿಲ ಇಷ್ಟು ಗಟ್ಟಿಗನೆಂದು ನನಗೆ ಗೊತ್ತೇ ಇರಲಿಲ್ಲ. ಸ್ಟೇಜಿನ ಮೇಲೆಯೂ ಇದೇ ಎಫೆಕ್ಟ್ ಬಂದರೆ ನಮ್ಮನ್ನು ಹಿಡಿಯುವವರೇ ಇಲ್ಲ" ಎಂದರು.

ವರದೆಯು ಹತ್ತಾರು ನಾಟಕಗಳಲ್ಲಿ ಪ್ರಧಾನವಾಗಿ ನಟಿಸಿದ್ದಳು. ನೂರಾರು ನಾಟಕಗಳಲ್ಲಿ ಪಾಲುಗೊಂಡಿದ್ದಳು. ಆದರೂ ಅವಳಲ್ಲಿ ಜಂಭವು ಕಂಡುಬರುತ್ತಿರಲಿಲ್ಲ. ರಾಜಣ್ಣನವರಾಗಲೀ, ಮತ್ತಾರಾದರೂ ತಿಳಿದವರಾಗಲೀ ಏನಾದರೂ ಹೇಳಿದರೆ ಸಮಾಧಾನದಿಂದ ಕೇಳುತ್ತಿದ್ದಳು. ಮತ್ತಾರಾದರೂ ಸಲಹೆ ಮಾಡಿದರೆ ಸಹನೆಯಿಂದ ಅದನ್ನು ಪರಿಶೀಲಿಸುತ್ತಿದ್ದಳು. ಅವಳು ತನ್ನ ಮನಸ್ಸಿನಲ್ಲಿ ವಾಸವದತ್ತೆಯನ್ನು ಒಂದು ಬಗೆಯಾಗಿ ಚಿತ್ರಿಸಿಕೊಂಡಿದ್ದಳು. ವಾಸವ ದತ್ತೆಯು ಇದೇ ರೀತಿಯಾಗಿ ಮಾತನಾಡಬೇಕು, ನೋಡಬೇಕು, ನಡೆಯ ಬೇಕು ಎಂದೆಲ್ಲಾ ಅವಳ ಮನಸ್ಸಿನಲ್ಲಿ ರೂಪುಗೊಂಡಿದ್ದಿತು. ಆ ಪರಿಣಾಮ ಉಂಟಾಗಲು ಅವಳೆಷ್ಟೋ ಪರಿಶ್ರಮ ಪಡುತ್ತಿದ್ದಳು. ತನ್ನೊಂದಿಗೆ ಇತರ ನಟರು ಅಭಿನಯಿಸುವಾಗ ಸಾಮರಸ್ಯ

ಕ್ಕಾಗಿ ಬಲುಮಟ್ಟಿಗೆ ಗಮನವನ್ನು ಕೊಡುತ್ತಿದ್ದಳು. ವರದೆಗೆ ಮೂವತ್ತೈದು ವರ್ಷಗಳ ಮೇಲೆ ವಯಸ್ಸಾಗಿದ್ದಿತು.

ವರದೆಗಿಂತಲೂ ಅನಿಲನು ವಯಸ್ಸಿನಲ್ಲಿ ಬಹಳ ಸಣ್ಣವನು. ಹಾಗೆಯೇ ಅವಳು ಅವನನ್ನು ಹುಡುಗನಂತೆ ಭಾವಿಸಿ ವ್ಯವಹರಿಸುತ್ತಿದ್ದಳು. ಅವನ ಮೇಲೆ ಅಧಿಕಾರ ಮಾಡುತ್ತಿದ್ದಳು.

ರಂಗಭೂಮಿಯ ಮೇಲೆ ತಾನು ಅತ್ಯಂತ ಪ್ರಭಾವದಿಂದ ನಟಿಸಿದರೆ ಅನಿಲನ ಪಾತ್ರವು ಪೆಚ್ಚಾಗುವುದೆಂದು ಅವಳು ತಿಳಿದುಕೊಂಡಿದ್ದಳು. ನಾಟಕವು ಯಶಸ್ವಿಯಾಗಲು ಎಲ್ಲರೂ ಸಹಕರಿಸಬೇಕೆಂದೂ, ಎಲ್ಲರಿಗೂ ಅಭಿನಯಾವಕಾಶವು ಬೇಕೆಂದೂ ಅವಳ ಅನುಭವವು ಹೇಳುತ್ತಿತ್ತು. ಅದರಲ್ಲಿಯೂ ತನ್ನೊಂದಿಗೆ ಅಭಿನಯಿಸುವಂತಹ ಪ್ರಧಾನ ಪಾತ್ರಗಳು ಕಳೆಗಟ್ಟಿದರೆ ತನ್ನ ಪಾತ್ರಕ್ಕೂ ಜೀವಕಳೆ ಬರುವುದೆಂದು ಅವಳಿಗೆ ಗೊತ್ತಿತ್ತು. ಆದರಿಂದ ಉದಯನನ ಪಾತ್ರವನ್ನು ಅವಳು ವಿಶೇಷವಾಗಿ ಗಮನಿಸುತ್ತಿದ್ದಳು. ಅನಿಲನಿಗೆ ಆವಶ್ಯಕವಾದ ಅವಕಾಶವನ್ನು ಕೊಡುತ್ತಿದ್ದಳು. ಆಗಾಗ ರಿಹರ್ಸಲ್‌ನಲ್ಲಿಯೂ, ಹೊರಗಡೆ ಅವನೊಂದಿಗೆ ಇರುವಾಗಲೂ, ತನಗೆ ತೋರಿದ ಸಲಹೆಗಳನ್ನಿತ್ತು ಸಹಕರಿಸುತ್ತಿದ್ದಳು.

ಈ ನಡುವೆ ವಿದ್ವಾನ್ ಸುಬ್ರಮಣ್ಯಯ್ಯರ್‌ಗೆ ಮೈಸೂರಿನ ಆಕಾಶವಾಣಿಯಲ್ಲಿ ಹಾಡಲು ಆಹ್ವಾನವು ಬಂದಿತು. ಅದೇ ಸಮಯದಲ್ಲಿ ಮೈಸೂರಿನಲ್ಲಿ ರಾಮನವಮಿಯ ಸಂಗೀತ ಕಚೇರಿಯೂ ಸಂಘಟಿಸಿತು. ಅವರು ತಮ್ಮ ಶಾಲೆಗೆ ಮೂರು ದಿನ ರಜಾ ಕೊಟ್ಟು ಮೈಸೂರಿಗೆ ಹೊರಟು ಹೋದರು.

ಮೊದಲನೆಯ ದಿನ ಪ್ರಾತಃಕಾಲ ಅನಿಲನು ಮನೆಯಲ್ಲಿಯೇ ಕಳೆದನು. ಅದು ಬಹಳ ಬೇಜಾರಾಯಿತು. ಮಾರನೆಯ ದಿನ ಬೆಳಿಗ್ಗೆ ವಿಶ್ವನಾಥರ ಮನೆಗೆ ಹೋಗಿಬರಬೇಕೆಂದುಕೊಂಡು ಅಲ್ಲಿಗೆ ಹೋದನು.

ಅವನು ಹೋದಾಗ ಬೆಳಗಾಗ ಏಳು ಗಂಟೆಯಿರಬಹುದು.

ಬಂದು ನೋಡಿದ ಪರಿಚಾರಕನನ್ನು ಕುರಿತು "ಗುರುಗಳೆಲ್ಲಿ ?" ಎಂದು ಕೇಳಿದನು.

"ಅವರು ಹೊರಗೆ ಹೋಗಿದ್ದಾರೆ. ಬರುವುದು ಎಂಟೂವರೆ ಒಂಬತ್ತು ಗಂಟೆಯಾಗುತ್ತದೆ."

ವಿಶ್ವನಾಥಂರಿಗೆ ಅರವತ್ತರ ಮೇಲೆ ವಯಸ್ಸಾಗಿತ್ತು. ಬೆಳಗಾಗ ಬೇಗ ಅವರಿಗೆ ಎಚ್ಚರವಾಗಿ ಹೋಗುತ್ತಿತ್ತು. ಪ್ರಾತಃರ್ವಿಧಿಗಳನ್ನು ತೀರಿಸಿ ಕೊಂಡು, ಒಂದು ಕಪ್ಪು ಕಾಫೀ ಕುಡಿದು, ಅವರು ಮಾರ್ನಿಂಗ್ ವಾಕ್ ಹೋಗುತ್ತಿದ್ದರು. ಹಾಗೆಯೇ ಯಾರಾದರೂ ಸ್ನೇಹಿತರ ಮನೆಗೆ ಹೋಗಿ ಸ್ವಲ್ಪ ಹೊತ್ತು ಮಾತನಾಡುತ್ತಿದ್ದು ಮನೆಗೆ ಬರುತ್ತಿದ್ದರು. ಆರೂವರೆಯ ಹೊತ್ತಿಗೆ ಮನೆಯಿಂದ ಹೊರಟರೆ ಅವರು ವಾಪ್ಸು ಬರುವುದು ಎಂಟೂವರೆ ಒಂಬತ್ತು ಗಂಟೆಯಾಗುತ್ತಿತ್ತು.

"ವರದಮ್ಮನವರಿದ್ದಾರೆಯೆ ?"

"ಕುಳಿತುಕೊಳ್ಳಿ. ಅವರು ಎದ್ದಿದ್ದಾರೆಯೋ ಇಲ್ಲವೋ ನೋಡಿಕೊಂಡು ಬರುತ್ತೇನೆ."

ಪರಿಚಾರಕನು ನೋಡಿಕೊಂಡು ಬರಲು ಹೋದವನು ವಾಪ್ಸು ಬಂದು "ಅಮ್ಮಾವರು ಕರೆಯುತ್ತಾರೆ" ಎಂದನು.

ಅವರಿದ್ದ ಕೋಣೆಯನ್ನು ತೋರಿಸಿ ಹೊರಟು ಹೋದನು.

ವರದೆಯು ಹಾಸಿಗೆಯ ಮೇಲೆ ಮಲಗಿದ್ದಳು. ಅನಿಲನು ಹೋಗುತ್ತಲೂ ಅವಳು ಎದ್ದಂತೆ ಮಾಡಿ, ದಿಂಬನ್ನು ಒರಗಿಕೊಂಡು, ಅರ್ಧ ಅರ್ಧವಾಗಿ ಕುಳಿತುಕೊಂಡಳು. ದಪ್ಪನಾದ ಸಿಲ್ಕ್ ಶಾಲನ್ನು ಕೊರಳಿನವರೆವಿಗೆ ಎಳೆದುಕೊಂಡು, ಹಾಸಿಗೆಯ ಮೇಲೆ ಕೈತಟ್ಟಿ, ಅನಿಲನನ್ನು ಕುಳಿತುಕೊಳ್ಳುವಂತೆ ನಿರ್ದೇಶ ಮಾಡಿದಳು.

ಅನಂತರ "ವೆಂಕಪ್ಪಾ. ಕಾಫೀ ತೆಗೆದುಕೊಂಡು ಬಾ" ಎಂದು ತೆಲುಗಿನಲ್ಲಿ ಕೂಗಿದಳು.

ಅವನು ದೊಡ್ಡ ವೆರಡು ಬೆಳ್ಳಿಯ ಲೋಟಾಗಳಲ್ಲಿ ಕಾಫೀ ತಂದಿಟ್ಟು ಹೋದನು.

ವರದೆಯು ಟೀಪಾಯಿಯ ಮೇಲಿದ್ದ ಲೋಟಾಗಳನ್ನು ಒಮ್ಮೆ ನೋಡಿ, ಅನಿಲನನ್ನು ಕುರಿತು "ತೆಗೆದುಕೊಳ್ಳಿರಿ" ಎಂದಳು.

"ನಾನು ಕಾಫೀ ತೆಗೆದುಕೊಂಡಿದ್ದೇನೆ."

"ನೀವು ಕಾಫೀ ತೆಗೆದುಕೊಂಡೇ ಬಂದಿದ್ದೀರೆಂದು ಗೊತ್ತು. ತೆಗೆದು ಕೊಳ್ಳಿರಿ, ಪರವಾಯಿಲ್ಲ."

ಅವನು ತೆಗೆದುಕೊಂಡನು.

ಇಬ್ಬರೂ ಬಿಸಿಯ ಕಾಫಿಯನ್ನು ಸ್ವಲ್ಪ ಸ್ವಲ್ಪವಾಗಿ ಕುಡಿಯತೊಡಗಿದರು.

ಕಾಫಿಯನ್ನು ಕುಡಿಯುತ್ತಾ ಕುಡಿಯುತ್ತಾ ಕೊರಳಿನವರೆಗೆ ಮುಚ್ಚಿಕೊಂಡಿದ್ದ ಸಿಲ್ಕ್ ಶಾಲುವು ಸ್ವಲ್ಪಸ್ವಲ್ಪವಾಗಿ ಕೆಳಗೆ ಸರಿಯಲಾರಂಭಿಸಿತು. ವರದೆಯು ಕಾಫಿಯನ್ನು ಕುಡಿಯಲು ಹಾಸಿಗೆಯ ಮೇಲೆ ಸರಿಯಾಗಿ ಕುಳಿತುಕೊಂಡಳು. ಆಗ ಶಾಲುವು ಅವಳ ತೊಡೆಗಳ ಮೇಲೆ ಬಿದ್ದುಹೋಯಿತು. ಕಾಫಿಯನ್ನು ಕುಡಿಯುವುದರಲ್ಲಿಯೇ ಆಸಕ್ತಳಾಗಿದ್ದ ವರದೆಯು ಅದನ್ನು ಗಮನಿಸದಂತೆ ಕಂಡುಬರಲಿಲ್ಲ.

ಆದರೆ ಅನಿಲನು ಅದನ್ನು ಗಮನಿಸಿದನು. ಕಾಫಿಯನ್ನು ಮುಗಿಸಿ ಬಟ್ಟಲನ್ನು ಕೆಳಗಿಟ್ಟಳು. ಅನಂತರವೂ ಅದನ್ನು ಸರಿಪಡಿಸಿಕೊಳ್ಳಲಿಲ್ಲ. ಅದರಿಂದ ಅನಿಲನ ಮನಸಿಗೊಂದು ಸಂದೇಹವು ಬಂದಿತು.

ತನ್ನನ್ನು ಪ್ರೀತಿಸುವವರೆಲ್ಲರೂ ನುಡುಕಿಯರೇ ಆಗುತ್ತಿದೆಯಲ್ಲ—ಎಂದು ಅವನ ಮನಸ್ಸಿಗೆ ತೋರಿತು.

ಆದರೆ ಅದೇ ಯೋಚನೆಯಲ್ಲಿ ಅವನು ಇರಲಾಗಲಿಲ್ಲ.

ವರದೆಯು ಅವನ ಎದುರಿಗೆ ಕುಳಿತಿದ್ದಳು. ಅವಳ ಕಂಚುಕದ ಮೇಲೆರಡು ಗುಂಡಿಗಳು ಬಿಚ್ಚಿಕೊಂಡಿದ್ದವು. ಸರಿದ ಕಂಚುಕದಿಂದ ವೃದ್ಧಿಪಾದ, ಬೆಚ್ಚನೆಯ, ಹಾಲು ಬಣ್ಣದ ಗುಂಡು ಕುಚಗಳು ಕಂಡು ಬರುತ್ತಿದ್ದವು.

ಆಗಲೂ ಅವಳು ಶಾಲನ್ನು ಮೇಲೆ ಎಳೆದುಕೊಳ್ಳಲಿಲ್ಲ.

ಹಸಿದಂತೆ ಅನಿಲನು ಅವಳ ಕಡೆಗೆ ನೋಡಿದನು. ಅವಳೂ ನೋಡಿದಳು. ನಾಲ್ಕು ಕಣ್ಣುಗಳೂ ಸೇರಿದುವು.

ಅವಳು ತನ್ನ ಬಾಹುಗಳೆರಡನ್ನೂ ಮುಂದೆ ಚಾಚಿದಳು. ಅನಿಲ ಮುಂದೆ ಸರಿದು ಆ ಬಾಹುದ್ವಯಗಳೊಳಗೆ ಪ್ರವೇಶ ಮಾಡಿ ಆಲಂಗಿಸಿದನು.

ಆ ಸ್ಪರ್ಶದಿಂದ ಅವನ ದೇಹದಲ್ಲಿ ವಿದ್ಯುತ್ ಸಂಚಾರವಾದಂತೆ

ಆಯಿತು. ರತಿಯಲ್ಲಿ ಅನುಭವವಾಗಿದ್ದರೂ ಅಂತಹ ಶರೀರದ ಸ್ಪರ್ಶವನ್ನು ಅವನೆಂದೂ ಮಾಡಿರಲಿಲ್ಲ. ಅವನು ಸ್ಪರ್ಶಮಾಡಿದ್ದ ಇತರ ಹೆಂಗಸರ ಮೈಯೂ ಈ ಅಂದಗಾತಿಯ ಮೈಯೂ ವಿಭಿನ್ನವಾಗಿ ಕಂಡು ಬಂದಿತು. ಅವರ ತುಟಿಗಳು ಕೂಡಿದವು. ಎರಡು ನಿಮಿಷಗಳ ಕಾಲ ಅವು ಹಾಗೆಯೇ ಸೇರಿದ್ದುವು. ಅವರು ಪರಸ್ಪರ ಆಲಂಗಿಸುತ್ತಲೂ, ಆಲಿಂಗನವನ್ನು ಸಡಲಿಸುತ್ತಲೂ, ಎಷ್ಟೋ ಹೊತ್ತನ್ನು ಕಳೆದರು.

ಅವರು ಆಲಿಂಗನದಿಂದ ತುಸ ವಿಶ್ರಮಿಸಿದಾಗ ಅವಳು ಅವನ ಜುಬ್ಬಾದ ಗುಂಡಿಗಳನ್ನು ಬಿಚ್ಚಿ, ತನ್ನ ಕೈ ಹಾಕಿ, ಅವನ ವಕ್ಷಸ್ಥಳವನ್ನು ಸವರತೊಡಗಿದಳು. ಎದೆಯ ಮೇಲಿನ ತುಂಡು ಕೂದಲು ಹಿಡಿದು ಎಳೆದು ನೋಯಿಸಿದಳು. ಅವನು ಅವಳ ಕಡೆಗೆ ನೋಡಿದನು.

ವರದೆಯು ಮೆಲ್ಲನೆಯ ದನಿಯಲ್ಲಿ "ನೀನು ಮೊದಲನೆಯ ದಿನ ಇಲ್ಲಿಗೆ ಬಂದೆಯಲ್ಲ, ಆ ದಿನ ನಿನ್ನನ್ನು ನೋಡಿದಾಗಲೇ ಹೀಗೆ ಮಾಡಬೇಕೆನಿಸಿತು, ಅನಿಲ" ಎಂದಳು.

"ವರದಾ————————"

ಅವರು ಪುನಃ ಎಂದೂ ರತಿಯನ್ನು ಕಾಣದ ಯುವಕ ಯುವತಿಯರಂತೆ ಆಲಂಗಿಸಿದರು. ಆತುರದಲ್ಲಿ ಕೆಳಗೆ ಬಿದ್ದಿದ್ದ ರೇಷ್ಮೆಯ ಶಾಲುವನ್ನು ಮೇಲೆಳೆದುಕೊಂಡರು.

ಸುಮಾರು ಎಂಟು ಗಂಟೆಯ ಸಮಯದಲ್ಲಿ ವರದೆಯು "ಅನಿಲಾ. ಒಂದು ಮಾತು ಕೇಳುತ್ತೇನೆ. ನಿಜ ಹೇಳುತ್ತೀಯಾ?" ಎಂದು ಕೇಳಿದಳು.

ಒಂದೇ ದಿಂಬಿನ ಮೇಲೆ ಅವಳ ಮುಖದ ಬಳಿ ಮುಖವಿಟ್ಟುಕೊಂಡು ಮಲಗಿದ್ದ ಅನಿಲನು "ಏನು ಹೇಳು! ನಾನು ನಿನ್ನೊಂದಿಗೆ ನಿಜವನ್ನು ಹೇಳುವುದಿಲ್ಲವೆಂದು ನಿನಗೆ ತೋರಿದುದಾದರೂ ಹೇಗೆ?" ಎಂದನು.

"ಮಾನೆಗೂ ನಿನಗೂ ಹೇಗಿದೆ?"

"ಹೇಗಿರುವುದೇನು? ಇಬ್ಬರೂ ಸ್ನೇಹದಿಂದ ಇದ್ದೇವೆ"

"ನಾನು ಕೇಳಿದುದು ಅದನ್ನಲ್ಲ"

"ಇನ್ನೇನು?

" ನೀವು ಒಬ್ಬರನ್ನೊಬ್ಬರು ಪ್ರೀತಿಸುತ್ತೀರೇನು ?"

" ಪ್ರೀತಿಸುತ್ತೇನೆ. ಅವಳಲ್ಲಿ ನನಗೆ ಎಂದೂ ಪ್ರಣಯಾಕಾಂಕ್ಷೆ ಯುಂಟಾಗಲಿಲ್ಲ "

" ಅವಳ ದೃಷ್ಟಿಯಲ್ಲಿ ನೀನೆಂದೂ ಹಸಿವು ನೋಡಲಿಲ್ಲವೇ ?"

" ನೋಡಿದ್ದೇನೆ. ನೋಡಿದಾಗ ನಕ್ಕುಬಿಡುತ್ತೇನೆ. ಆ ನೋಟಗಳಿಂದೆಂದೂ ನನ್ನ ಮನಸ್ಸು ಚಲಿಸುವುದಿಲ್ಲ "

" ಅದೇನು ಹಾಗೆ ಹೇಳುತ್ತೀ ?"

ಅನಿಲನು ವರದೆಯ ತುಟಿಗಳ ಮೃದುತ್ವವನ್ನು ಕೈ ಬೆರಳಿನಿಂದ ಅನುಭವ ಮಾಡುತ್ತಾ " ಹೀಚು ಕಾಯಿಗಳೂ ರುಚಿಯಾಗಿರುತ್ತವೆ. ಆದರೆ ಹಣ್ಣು ತಿಂದ ನಂತರ ಯಾರೂ ಹೀಚುಗಳಿಗಾಗಿ ಆಸೆ ಮಾಡುವುದಿಲ್ಲ " ಎಂದನು.

"ಹೋಗಲಿ. ಇನ್ನು ಮೇಲಾದರೂ ನೀನು ಹೀಚು ಕಾಯಿ ತಿನ್ನುವುದಿಲ್ಲ, ಅಲ್ಲವೇ?"

ಅನಿಲನು ದೈನ್ಯದಿಂದ ನೋಡಿದನು.

ವರದೆಯು ಅವನನ್ನು ಪುನಃ ಆಲಂಗಿಸಿ, ಅವನ ಮೇಲೆ ಮುತ್ತುಗಳ ಮಳೆಗರೆದು, " ಅನಿಲಾ. ನೀನು ಹೊರಗಡೆ ಕುಳಿತಿರು. ನಾನು ಸ್ನಾನ ಮಾಡಿಕೊಂಡು ಬಂದುಬಿಡುತ್ತೇನೆ " ಎಂದಳು.

## ೧೧

ಆ ದಿನ ವಾಸವದತ್ತ ನಾಟಕದ ಪ್ರಾರಂಭೋತ್ಸವ.

ವಾರದಿಂದ ಬೇಕಾದಷ್ಟು ಪ್ರಚಾರವು ನಡೆದಿದ್ದಿತು. ಸಹಸ್ರಾರು ಹಸ್ತಪತ್ರಗಳು ಊರಿನಲ್ಲೆಲ್ಲಾ ಹಂಚಲ್ಪಟ್ಟಿದ್ದವು. ನೂರಾರು ಭಿತ್ತಿ ಪತ್ರಗಳು ನಗರದಲ್ಲಿ ಎಲ್ಲಾ ಕಂಡುಬರುತ್ತಿದ್ದವು. ಬೆಳಗಿನಿಂದ ಊರಿನಲ್ಲೆಲ್ಲಾ ಕಾರು ಸುತ್ತಿ "ವಾಸವದತ್ತ ನಾಟಕವಿದೆ" ಎಂದು ಮೈಕ್‌ನಲ್ಲಿ ಕೂಗಿ ಹೇಳಲಾಗಿತ್ತು.

ಇತ್ತ ಥಿಯೇಟರಿನ ಬಳಿ ನಾಟಕಪ್ರಿಯರು ಬೇಕುಬೇಕಾದ ಏರ್ಪಾಟುಗಳೆಲ್ಲವನ್ನೂ ಮಾಡಿದ್ದರು. ಥಿಯೇಟರಿನ ಮುಂದೆ ಹಸಿರುವಾಣಿ ಚಪ್ಪರವನ್ನು ಹಾಕಿ, ಬಗೆಬಗೆಯ ಪತ್ರಮಾಲೆಗಳನ್ನು ಜೊಂತೆಜೊಂತೆಯಾಗಿ ಕಟ್ಟಿದ್ದರು. ರಂಗಭೂಮಿಯೊಳಗೆ ಆವಶ್ಯಕವಾದ ಪದಾರ್ಥಗಳನ್ನು ಅಣಿ ಮಾಡಿಡಲಾಗಿತ್ತು. ಹೊರಗಡೆ ಮೈಕ್ ಹಿಂದಿಯಲ್ಲಿ ಯಾವುದೋ ಪ್ರೇಮಾಲಾಪವನ್ನು ಮಾಡುತ್ತಿದ್ದಿತು.

ಸಾಧಾರಣವಾಗಿ ಇಂಡಿಯನ್ ಅಮೆಚೂರ್ಸ್‌ನವರ ನಾಟಕಗಳೆಂದರೆ ಚೆನ್ನಾಗಿಯೇ ಇರುತ್ತಿದ್ದವು. ಅದರಿಂದ ಅವರ ನಾಟಕಗಳಿಗೆ ಜನಸಂದಣಿ ಇರುತ್ತಲೇ ಇದ್ದಿತು. ಈ ನಾಟಕಕ್ಕೆ ವಿಶೇಷ ಪ್ರಚಾರ ಮಾಡುತ್ತಿದ್ದುದರಿಂದಲೂ, ತೆಲುಗು ದೇಶದ ಸುಪ್ರಸಿದ್ಧ ನಟರಾದ ವಿಶ್ವನಾಥಂ ಮತ್ತು

ವರದಾದೇವಿಯರು ಅಭಿನಯಿಸುತ್ತಾರಾದುದರಿಂದಲೂ ಬೇಕಾದ ಹಾಗೆ ಜನಗಳು ಬಂದು ತುಂಬಿದ್ದರು.

ಹೊರಗಡೆ ಅಮೆಚೂರ್ಸ್‌ನ ಪ್ರಧಾನ ಕಾರ್ಯಕರ್ತರುಗಳು ಆ ದಿನದ ನಾಟಕಕ್ಕೆ ಅಧ್ಯಕ್ಷತೆ ವಹಿಸಲು ಒಪ್ಪಿಕೊಂಡಿದ್ದ ಮಂತ್ರಿಗಳಿಗಾಗಿ ಕಾಯುತ್ತಾ ನಿಂತಿದ್ದರು.

ಸ್ವಲ್ಪ ಹೊತ್ತಿನಲ್ಲಿಯೇ ಮಂತ್ರಿಗಳು ಬಂದರು. ಎರಡು ಬಾರಿ ಗಂಟೆಗಳು ಹೊಡೆಯಲ್ಪಟ್ಟವು.

ಸೂತ್ರಧಾರನು ರಂಗಭೂಮಿಯನ್ನು ಪ್ರವೇಶ ಮಾಡಿದನು.

ಹೊರಗಡೆಯ ಜನರವವು ಒಮ್ಮೆಗೇ ನಿಂತು ಹೋಯಿತು. ಆದರೆ ಒಳಗಡೆಯ ಗಡಿಬಿಡಿಗಳು ಆರಂಭವಾದುವು.

ಒಂದೆರಡು ಪ್ರವೇಶಗಳಾದವು.

ಉದಯನನು ರಂಗಭೂಮಿಯನ್ನು ಪ್ರವೇಶಿಸುವಂತಹ ಸಂದರ್ಭವು ಸನ್ನಿಹಿತವಾಗುತ್ತಿದ್ದಿತು. ಅವನು ಕಾಯುತ್ತಾ ತೆರೆಯ ಮರೆಯಲ್ಲಿ ನಿಂತಿದ್ದನು.

ಅಷ್ಟು ಹೊತ್ತಿಗೆ ರಾಜಕುಮಾರಿ ವಾಸವದತ್ತೆಯ ವೇಷವನ್ನು ಧರಿಸಿದ ವರದೆಯು ಸ್ತ್ರೀಯರ ಮೇಕಪ್ ರೂಮಿನಿಂದ ಹೊರಗೆ ಬಂದಳು.

ಅವಳನ್ನು ನೋಡಿ ಅನಿಲನು ದಿಗ್ಭ್ರಾಂತನಾದನು. ಮೂವತ್ತೈದು ವರ್ಷದ ವರದೆಯು ಹದಿನಾರು ವರ್ಷದ ಹರೆಯದ ಹುಡುಗಿಯಂತೆ ಕಂಡು ಬರುತ್ತಿದ್ದಳು.

ಅವಳು ಹತ್ತಿರಕ್ಕೆ ಬಂದು, ಅನಿಲನನ್ನು ಕುರಿತು "ಮುಂದಿನ ಪ್ರವೇಶವು ನಿನ್ನದೆಂದು ಕಂಡು ಬರುತ್ತದೆ" ಎಂದಳು.

"ಹೌದು, ಸನ್ನದೇ. ನಾನು ಎಷ್ಟೋ ಬಾರಿ ರಂಗಭೂಮಿಯನ್ನು ಪ್ರವೇಶ ಮಾಡಿದ್ದೇನೆ. ಆದರೆ ಈ ದಿನ ಒಂದು ಬಗೆಯಾಗಿ ಹೆದರಿಕೆಯಾಗುತ್ತದೆ"

"ಹೆದರಿಕೆಯೇನು ಬಂದಿತು? ಅನಿಲ. ಈಜುವವನಿಗೆ ವಿಪುಲವಾದ

ಜಲರಾಶಿ ಇದ್ದಂತೆ ನಟನಿಗೆ ಕಿಕ್ಕಿರಿದು ಜನಗಳು ತುಂಬಿರಬೇಕು. ಜನರಿದ್ದಷ್ಟೂ ನಾಟಕವು ಕಳೆಕಟ್ಟುತ್ತದೆ.”

ಇಬ್ಬರೂ ಮಾತನಾಡುತ್ತ ನಿಂತಿದ್ದರು.

ಅತ್ತಕಡೆ ಬಂದ ಮಾನೆಯು ಅವರನ್ನು ನೋಡಿ “ ಏನು, ಈಗಾಗಲೇ ವಾಸವದತ್ತ ಉದಯನರು ಹೊಂಚು ಹಾಕುತ್ತಿರುವಂತಿದೆ ” ಎಂದು ನಗುತ್ತಾ ಕೇಳಿದಳು.

ತೆರೆಯು ಬಿದ್ದಿತು. ಇನ್ನು ಅನಿಲನು ರಂಗಭೂಮಿಯ ಮೇಲೆ ಹೋಗಬೇಕಾಗಿದ್ದಿತು.

ಅನಿಲನು ವರದೆಯ ಕಡೆಗೆ ತಿರುಗಿ “ಈಗ ರಂಗಭೂಮಿಗೆ ಪ್ರವೇಶಿಸುತ್ತಿದ್ದೇನೆ. ನನ್ನ ಅಭಿನಯವು ಸರಿಹೋದರಂತೂ ಸರಿಯೇ. ಒಂದು ವೇಳೆ ಸರಿಹೋಗದಿದ್ದರೆ ನನ್ನನ್ನು ನೀನು ಕ್ಷಮಿಸಬೇಕು. ನನ್ನನ್ನು ಆರಿಸಿ, ಪ್ರೋತ್ಸಾಹ ಕೊಟ್ಟು, ಇಲ್ಲಿಯವರೆವಿಗೆ ತಂದವಳು ನೀನು” ಎಂದು ದೈನ್ಯದಿಂದ ಹೇಳಿದನು.

ವರದೆಯು ಅನಿಲನ ಬೆನ್ನು ತಟ್ಟಿ “ಹೆದರಬೇಡ, ಅನಿಲ. ಎಲ್ಲವೂ ಸರಿಯಾಗಿಯೇ ಆಗುತ್ತದೆ. ನನ್ನ ಉದಯನನಿಗೆ ಅಪಜಯವೆಂದರೇನು” ಎಂದಳು.

ಅನಿಲನು ರಂಗಭೂಮಿಯನ್ನು ಪ್ರವೇಶಿಸಿದನು.

ರಾಜಕುಮಾರ ಉದಯನನಿಗೆ ಆನೆಗಳ ಬೇಟೆಯೆಂದರೆ ಬಹಳ ಇಷ್ಟ. ಕಾಡಿಗೆ ಬೇಟೆಯಾಡಲು ಬರುತ್ತಾನೆ. ಆನೆಗಳನ್ನು ಆಕರ್ಷಿಸಲು ವೀಣಾನಾದವನ್ನು ಮಾಡುತ್ತಾನೆ. ಅದರಿಂದ ನಾದತರಂಗಗಳೆದ್ದು ಸಭಾಮಂಟಪವೆಲ್ಲವನ್ನೂ ತುಂಬಿಕೊಳ್ಳುತ್ತದೆ. ಹಾಗೆಯೇ ರಾಜಕುಮಾರನು ಮುಂದುವರಿಯುತ್ತಿರುವಾಗ ಕೆಲವು ಮಂದಿ . ರಾಜಭಟರು ಬಂದು ಮುತ್ತಿಕೊಳ್ಳುತ್ತಾರೆ. ಉದಯನನು ಎದುರಿಸುವುದರಲ್ಲಿ ಅವನನ್ನು ಅವರುಗಳು ಹಿಡಿದುಕೊಂಡು ಹೋಗುತ್ತಾರೆ.

ಅನಿಲನು ಈ ಪಾತ್ರವನ್ನು ಅಭಿನಯಿಸಿ ರಂಗಭೂಮಿಯಿಂದ ನಿರ್ಗ

ಶಿಸುವಾಗ ನೆರೆದಿದ್ದ ಜನಸಮೂಹದ ಕರತಾಡನಗಳಿಂದ ಕಿವಿಗಳು ಮುಚ್ಚಿ ಹೋಗುವಂತಾಯಿತು.

ಅವನು ಒಳಗೆ ಬರುತ್ತಲೂ ವಿಶ್ವನಾಥಂರವರು ಬಂದು ವಿಶ್ವಾಸದಿಂದ ಬೆನ್ನು ತಟ್ಟಿದರು. ರಾಮಾನುಜ ಅಯ್ಯಂಗಾರ್ಯರೂ ರಾಜಣ್ಣನವರೂ ಆದರದ ಮಾತುಗಳನ್ನು ಆಡಿದರು.

ಮಾನೆಯೂ ಬಂದು ಅವನ ಗಲ್ಲವನ್ನು ಹಿಡಿದು ಅಲ್ಲಾಡಿಸುತ್ತಾ " ಗೆದ್ದುಬಿಟ್ಟೆ " ಎಂದಳು.

ವರದೆಯೂ ನೇಪಥ್ಯದಲ್ಲಿ ಅನಿಲನನ್ನು ಆಲಂಗಿಸಿಕೊಳ್ಳಲಿಲ್ಲವೇ ಹೊರತು ಅವನ ಎರಡು ಭುಜಗಳ ಮೇಲೆಯೂ ಕೈ ಹಾಕಿದುದು ಆಲಿಂಗಿಸಿ ದಂತೆಯೇ ಆ ಪ್ರೇಮಿಗಳಿಬ್ಬರಿಗೂ ಭಾಸವಾಯಿತು.

ಮುಂದಿನ ದೃಶ್ಯಗಳಲ್ಲಿ ಅನಿಲನಿಗೆ ಕಷ್ಟವಾಗಲಿಲ್ಲ. ಮುಂದಿನ ಪ್ರವೇಶಗಳು ಈ ಮೊದಲಿಗಿಂಗಲೂ ಸರಳವಾಗಿ ಕಂಡು ಬಂದುವು. ಜೊತೆ ಯಲ್ಲಿ ವಾಸವದತ್ತೆ ಇರುತ್ತಿದ್ದಳು.

ಉದಯನನು ವಾಸವದತ್ತೆಗೆ ವೀಣಾವಾದನವನ್ನು ಕಲಿಸುವ ದೃಶ್ಯ ವನ್ನು ನೋಡಿದಾಗಲಂತೂ ಪ್ರೇಕ್ಷಕರು ಮಾರುಹೋದರು.

ಮಂತ್ರಿಗಳು ನಾಟಕವನ್ನು ನೋಡಿ ಕೊಂಡಾಡಿ, ತಾವು ಇರುವವರೆ ವಿಗೆ ಇಂತಹ ನಾಟಕವನ್ನೇ ನೋಡಿದ್ದಿಲ್ಲವೆಂದು ಹೇಳಿದರು. ಜನಗ ಳಂತೂ ಮುಕ್ತಕಂಠದಿಂದ ಕೊಂಡಾಡಿದರು.

ಆ ದಿನ ರಾತ್ರಿ ಕಾರಿನಲ್ಲಿ ಅನಿಲನನ್ನು ಮನೆಗೆ ಕರೆದುಕೊಂಡು ಹೋ ಗುತ್ತಾ ಅರಸುರತ್ನೆಯು "ಅನಿಲಾ. ದಿನ ದಿನಕ್ಕೆ ನೀನು ಬಹಳ ದೂರವಾ ಗುತ್ತಿದ್ದೀಯೆ" ಎಂದು ಹೇಳಿದಳು.

ಆ ಮಾತಿನ ಅರ್ಥವು ಅನಿಲನಿಗಾಗಿತ್ತು.

ಆದರೂ "ಅದೇನು ಹಾಗೆ ಹೇಳುತ್ತೀರಿ ? ಈ ಜಗತ್ತಿನಲ್ಲಿ ನಮ್ಮನ್ನು ದೂರಮಾಡುವಂತಹದು ಯಾವುದೂ ಇಲ್ಲವೆಂದು ನನಗೆ ತೋರುತ್ತದೆ", ಎಂದನು.

"ನೀನು ದೊಡವನಾಗಿದ್ದೀಯೆ!"

"ಇನ್ನೂ ನೀವು ಹೇಳಿದ್ದು ಆಗಿದ್ದೇನೆಯೋ ಇಲ್ಲವೋ ನನಗೆ ಗೊತ್ತಿಲ್ಲ. ಆದರೆ ಏನಾಗಿದ್ದೇನೆಯೋ ಅದು ನಿಮ್ಮ ದಯದಿಂದಲೇ ಆಗಿರುವುದು."

ಅರಸುರತ್ನೆಯು ನಗುತ್ತಾ "ಹೌದು. ನಾನೇ ನಿನ್ನನ್ನು ಕೈಯಾರ ಕೊರಳು ಹಿಡಿದು ತಳ್ಳಿದಂತಾಯಿತು" ಎಂದಳು.

ಮಾರನೆಯ ದಿನ ಎಲ್ಲ ಪತ್ರಿಕೆಗಳಲ್ಲಿಯೂ ವಾಸವದತ್ತೆಯ ವಿಮರ್ಶೆಯು ಪ್ರಕಟವಾಯಿತು. ಸುಪ್ತ ರಂಗಭೂಮಿಯಲ್ಲಿ ವಾಸವದತ್ತ ನಾಟಕವು ನವಚೇತನವನ್ನು ತರುತ್ತದೆಂದು ಬರೆದರು.

ಸುಪ್ರಸಿದ್ಧ ವಿಮರ್ಶಕರಾದ ಶ್ರೀ ಸ್ವಾಮಿಯವರು "ಇಂಡಿಯನ್ ಅಮೆಚೂರ್ಸ್‌ನವರು ರಂಗಭೂಮಿಯ ಮೇಲೆ ತಂದ ವಾಸವದತ್ತ ನಾಟಕವು ಬಹಳ ಚೆನ್ನಾಗಿದೆ. ಆಂಧ್ರ ಕಲೆಗಾರರಾದ ವಿಶ್ವನಾಥಂ ಅವರೂ, ಕರ್ನಾಟಕ ಕಲೆಗಾರರಾದ ರಾಮಾನುಜಯ್ಯಂಗಾರ್ಯರೂ ಒಟ್ಟಿಗೆ ಈ ಮಹಾ ಕಾರ್ಯವನ್ನು ನೆರವೇರಿಸಿದ್ದಾರೆ. ಸೇವಕನಿಂದ ಹಿಡಿದು ಯೌಗಂಧರಾಯಣನವರೆವಿಗೆ ಎಲ್ಲರೂ ತಮ್ಮ ತಮ್ಮ ಪಾತ್ರಗಳನ್ನು ಸರಿಯಾಗಿ ಅಭಿನಯಿಸಿದ್ದಾರೆ. ಲೋಪದೋಷಗಳೇ ಇಲ್ಲದ ಇಂತಹ ಪ್ರದರ್ಶನವನ್ನು ನೋಡಿ ಈಗಾಗಲೇ ಮೂರು ದಶಕಗಳ ಮೇಲಾಗುತ್ತ ಬಂದುವು.

"ಇಷ್ಟು ದಿನ ಬರಡಾಗಿದ್ದ ರಂಗಭೂಮಿಯಲ್ಲಿ ಈಗೊಂದು ಚಿಗುರು ಚಿಗುರಿದೆ. ಅದು ರಂಗಭೂಮಿಗೆ ಅನಿಲಕುಮಾರರ ಪ್ರವೇಶ. ಇಂಡಿಯನ್ ಅಮೆಚೂರ್ಸ್‌ನವರು ಕೊಟ್ಟಿರುವ ಈ ಹೊಸ ನಟನನ್ನು ಕನ್ನಡನಾಡು ಕಾಣಿಕೆಯಾಗಿ ಪರಿಗ್ರಹ ಮಾಡಿದೆ.

"ಒಂದು ಕಾಲದಲ್ಲಿ ನಾಟಕ ಶಿರೋಮಣಿ ವರದಾಚಾರ್ಯರು ದಕ್ಷಿಣ ಭಾರತದ ರಂಗಭೂಮಿಯಲ್ಲಿ ದೇದೀಪ್ಯಮಾನವಾಗಿ ಬೆಳಗಿದರು. ಅನಂತರ ಮೂರು ದಶಕಗಳ ಕಾಲ ಅಂಧಕಾರವು ತುಂಬಿಕೊಂಡಿದ್ದಿತು. ಇಂದು ಅದೇ ಆಚಾರ್ಯರಿದ್ದಿದ್ದರೆ ಏನಾಗುತ್ತಿದ್ದಿತೋ ಹೇಳಲಾಗುವುದಿಲ್ಲ. ಅವರ ಅಂದಿನ ಅಭಿನಯವು ಇಂದಿನ ಈ ಆಧುನಿಕ ಕಾಲಕ್ಕೆ ಸರಿ ಹೊಂದಿ ಬರುತ್ತಿದ್ದಿತೋ ಇಲ್ಲವೋ ಹೇಳಲಾಗುವುದಿಲ್ಲ. ಆದರೆ ಇಂದಿನ ರಂಗಭೂಮಿಗೆ

ಅನಿಲಕುಮಾರರು ಮಾಡಿಟ್ಟ ಮುಕಟದಂತೆ ಕಂಗೊಳಿಸುತ್ತಿದ್ದಾರೆ. ಈ ನಟನು ರಂಗಭೂಮಿಯಲ್ಲಿಯೇ ಇದ್ದರೆ ಸಿನಿಮಾಗಳ ಹಾವಳಿಯಿಂದ ಲುಪ್ತ ಚೇತನವಾಗಿರುವ ನಾಟಕದಲ್ಲಿ ನವಜೀವನದ ಅವಿರ್ಭಾವವಾಗುತ್ತದೆ. ಈತನು ದಕ್ಷಿಣಭಾರತದ ಮಹಾ ನಟನಾಗುತ್ತಾನೆ. ನಾನು ಈ ಲೇಖನ ವನ್ನು ಮುಗಿಸುವ ಮೊದಲು ಕಟ್ಟ ಕಡೆಯದಾಗಿ ಈ ನಟನು ಯಶಸ್ವಿ ಯಾಗಲೆಂದು ಹರಸುತ್ತೇನೆ" ಎಂದು ಬರೆದರು.

ಮಾರನೆಯ ದಿನ ಸಂಜೆ ಅನಿಲನು ವಿಶ್ವನಾಥಂ ಅವರ ಮನೆಗೆ ಹೋಗಿ ಅವರನ್ನೂ ವರದಾದೇವಿಯನ್ನೂ ಕಂಡನು. ವಿಶ್ವನಾಥಂ ಅವರು ಎಂದಿಗಿಂತಲೂ ಬಹಳ ಆದರದಿಂದ ಕಂಡು ಮಾತನಾಡಿದರು. ವರದೆಯು ಮುಗುಳು ನಗೆಯಿಂದಲೇ ಅನಿಲನನ್ನು ಸ್ವಾಗತಿಸಿದಳು.

ಬಹುಹೊತ್ತು ಮೂರು ಮಂದಿಯೂ ಲೋಕಾಭಿರಾಮವಾಗಿ ಮಾತ ನಾಡುತ್ತಾ ಕುಳಿತ್ತಿದ್ದರು. ಏಳು ಗಂಟೆಯ ಹೊತ್ತಿಗೆ ರಾಮಾನುಜ ಅಯ್ಯಂಗಾರ್ಯರೂ ಬಂದು ಕೂಡಿಕೊಂಡರು.

ಒಳಗಡೆ ಕುಳಿತು ಮಾತನಾಡುತ್ತಿದ್ದ ವರದಾ ಅನಿಲರಿಗೆ ಬೇಜಾ ರಾಗಿ ವರಾಂಡದಲ್ಲಿ ಹಾಕಿದ್ದ ಕುರ್ಚಿಗಳ ಮೇಲೆ ಕುಳಿತುಕೊಂಡರು.

ಎರಡು ಗಳಿಗೆ ಕುಳಿತಿದ್ದ ನಂತರ ವರದೆಯು "ಇಲ್ಲಿ ಕುಳಿತೇನು ಮಾಡುವುದು ? ಎಲ್ಲಿಯಾದರೂ ತಿರುಗಿಕೊಂಡು ಬರೋಣ" ಎಂದಳು.

ಅನಿಲನು ಅವಳೊಡನೆ ನಡೆದುಕೊಂಡು ಬಂದವನು ಕಾರಿನ ಬಳಿ ನಡಿಗೆಯನ್ನು ನಿದಾನ ಮಾಡಿದನು.

ವರದೆಯು "ಕಾರು ಬೇಡ, ಅನಿಲ. ನಡೆದು ಕೊಂಡೇ ಹೋಗೋಣ" ಎಂದಳು.

ಬಸವನಗುಡಿಯ ಕತ್ತಲೆಯ ಬೀದಿಗಳಲ್ಲಿ ಅವರಿಬ್ಬರೂ ಕೈಹಿಡಿದು ಕೊಂಡು ಹೊರಟರು.

ಏನೋ ಮಾತನಾಡುತ್ತಿದ್ದು ನಡುವೆ " ಅನಿಲ. ನಿನಗೆ ಮೊದಲಿ ನಿಂದಲೂ ರಂಗಭೂಮಿಯ ಮೇಲೆ ಬಹಳ ಆಸಕ್ತಿ-ಎಂದು ಹೇಳುತ್ತೀಯಲ್ಲಾ, ಸಿನಿಮಾಗಳ ವಿಷಯದಲ್ಲಿ ಹೇಗೆ ?'' ಎಂದು ವರದೆಯು ಕೇಳಿದಳು.

ಅನಿಲನು ತಾನಾಗಲೇ ತಾರಾಲೋಕದ ಮೆಟ್ಟಿಲುಗಳನ್ನು ಹತ್ತುತ್ತಿರುವುದಾಗಿ ಕಲ್ಪನೆ ಮಾಡಿಕೊಳ್ಳುತ್ತಾ ಮನಸ್ಸಿನಲ್ಲಿಯೇ ಆನಂದಪಡುತ್ತಿದ್ದನು.

ಅವಳ ಪ್ರಶ್ನೆಯಿಂದ ಪ್ರೋತ್ಸಾಹಗೊಂಡವನಂತೆ "ನನಗೆ ರಂಗಭೂಮಿ ಮತ್ತು ಸಿನಿಮಾಗಳೆರಡರಲ್ಲಿಯೂ ಬಹಳ ಆಸಕ್ತಿ" ಎಂದನು.

ಆ ಮಾತಿನಿಂದ ವರದೆಗೆ ಸಂತೋಷವಾಗುತ್ತದೆಂದು ಭಾವಿಸಿದನು. ಆದರೆ ಹಾಗಲಿಲ್ಲ.

"ನಿನ್ನ ವಿಷಯದಲ್ಲಿ ನನಗೆ ಮೊದಲಿನಿಂದಲೂ ಆ ಸಂದೇಹವಿದ್ದೇ ಇದ್ದಿತು."

ಅನಿಲನು ಉಳುಕಿಬಿದ್ದು "ಹಾಗೆಂದರೇನು? ನೀನು ಮಾತನಾಡುವುದು ನನಗೆ ಅರ್ಥವಾಗಲಿಲ್ಲ" ಎಂದನು.

"ಅದರಲ್ಲಿ ಅರ್ಥ ಮಾಡಿಕೊಳ್ಳಬೇಕಾದ್ದು ಏನೂ ಇಲ್ಲ, ಅನಿಲ. ಸಿನಿಮಾಗಳ ಆಕರ್ಷಣೆಯು ಬಹಳ ಪ್ರಬಲವಾದುದು. ಪತಂಗಗಳನ್ನು ಎಳೆಯುವ ದೀಪದಂತೆ ಸಿನಿಮಾಗಳು ಎಷ್ಟೋ ನಟನಟಿಯರನ್ನು ರಂಗಭೂಮಿಯಿಂದ ಎಳೆದುಬಿಟ್ಟಿವೆ. ಕ್ಷಣಕಾಲದಲ್ಲಿ ಉರಿದು ಕೆಳಗೆ ಬೀಳುವ ಪತಂಗಗಳಂತೆ ಅವರೂ ಪತನ ಹೊಂದಿದ್ದಾರೆ. ಆ ಜಾಡ್ಯವು ನಿನಗೂ ಹಿಡಿಯಿತೇನೋ ಎಂದುಕೊಂಡೆ."

ಕ್ಷಣಾರ್ಧದಲ್ಲಿ ಅನಿಲನು ಚೇತರಿಸಿಕೊಂಡು "ವರದಾ. ನೀನು ತಪ್ಪು ತಿಳಿದುಕೊಂಡೆ. ನನಗೆ ಸಿನಿಮಾಗಳಲ್ಲಿ ಆಸಕ್ತಿ ಇದೆ ಎಂದರೆ ಸಿನಿಮಾ ನಟನಾಗಲು ಹಾರೈಸುತ್ತಿದ್ದೇನೆ–ಎಂದು ಅರ್ಥವೇನು?" ಎಂದನು.

ವರದಳು ನಿರಾಶೆಯ ನಗುವನ್ನು ನಗುತ್ತಾ "ನೀನು ಮಾತು ತಿರುಗಿಸಿ ಜಾರಿಕೊಳ್ಳುತ್ತಿದ್ದೀ" ಎಂದಳು.

"ಅದನ್ನು ಮುಂದೆ ನೋಡುವಿಯಂತೆ. ಆದರೆ ನನಗೆ ಸಿನಿಮಾಗಳ ಆಕರ್ಷಣೆ ಇದೆ ಎಂದೂ, ನಾನು ಅದಕ್ಕೆ ಹೊರಟುಹೋಗಬಹುದೆಂದೂ ನಿನಗೆ ಸಂದೇಹವು ಬಂದುದು ಹೇಗೆ? ನನಗೆ ಅಂತಹ ಆಸೆ ಇದ್ದಿದ್ದರೆ ಸಿನಿಮಾಗಳಲ್ಲಿಯೇ ಹೋಗಿ ತೊಳಲುತ್ತಿದ್ದೆ."

"ನಾಟಕಗಳಲ್ಲಿಯಾಗಲೀ ಸಿನಿಮಾಗಳಲ್ಲಿಯಾಗಲೀ ಆಶಿಸಪಡುವ ಸ್ಥಾನವು ಸುಲಭವಾಗಿ ಸಿಗುವುದಿಲ್ಲ. ಶಕ್ತಿಸಾಮರ್ಥ್ಯಗಳೂ, ಯೋಗ್ಯತೆಯೂ ಇರುವ ವಿಷಯವೇ ಬೇರೆ. ಅದನ್ನು ಉಪಯೋಗಿಸಿಕೊಳ್ಳುವಂತಹ ಅವಕಾಶವು ಸಿಗುವುದೇ ಬೇರೇ. ಅವಕಾಶವು ಸಿಕ್ಕಿ ಅದು ಸಾರ್ಥಕವಾದರೆ ಆಗ ಎಲ್ಲರೂ ದೊಡ್ಡದು ಮಾಡುತ್ತಾರೆ. ಈಗ ನೀನು ರಂಗಭೂಮಿಯ ಪ್ರಧಾನ ನಟನಾಗಿದ್ದೀಯೆ. ಮೂರು ದಿನಗಳ ಮೊದಲಾಗಿದ್ದರೆ ಈ ಸಿನಿಮಾ ನಿರ್ಮಾತೃಗಳು ನಿನ್ನನ್ನು ಲಕ್ಷ್ಯಮಾಡುತ್ತಿದ್ದರೋ ಇಲ್ಲವೋ ಹೇಳಲಾಗುವುದಿಲ್ಲ. ಆದರೆ ಈಗವರು ನಿನ್ನನ್ನು ತೆಗೆದುಕೊಳ್ಳುವುದಕ್ಕೆ ನಾನು ತಾನೆಂದು ಮುಂದೆ ಬರುತ್ತಾರೆ"

"ನೀನು ನನಗಿಂತಲೂ ದೊಡ್ಡ ನಟಿ. ನೀನು ರಂಗಭೂಮಿಯ ಮೇಲೆ ಪ್ರಕಾಶಿಸಿ ಎಷ್ಟೋ ದಿನಗಳಾದುವು. ನಿನಗೆ ಸಿನಿಮಾದವರಿಂದ ಆಹ್ವಾನವು ಬರಲಿಲ್ಲವೇಕೆ ?"

ಅಷ್ಟು ಹೊತ್ತಿಗೆ ಅವರು ಲಾಲಬಾಗಿಗೆ ಬಂದಿದ್ದರು. ಹುಲ್ಲಿನ ಮೇಲೆ ಹಾಕಿದ್ದ ಬಿಳಿಯ ಕಲ್ಲಿನ ಬೆಂಚು ಬೆಳದಿಂಗಳಿನಲ್ಲಿ ಚಂದ್ರಕಾಂತ ಶಿಲೆಯಂತೆ ಕಂಗೊಳಿಸುತ್ತಿತ್ತು.

ವರದೆಯು ಆ ಶಿಲಾಸನದಲ್ಲಿ ಕುಳಿತುಕೊಳ್ಳುತ್ತಾ "ನನಗೆ ಆಹ್ವಾನಗಳು ಬರಲಿಲ್ಲವೆಂದವರಾರು ? ಎಷ್ಟೋ ಬಂದಿವೆ. ಈಗಲೂ ಬರುತ್ತಿವೆ. ನಾನು ಒಪ್ಪಿಕೊಳ್ಳುವುದಾದರೆ ನೂರಾರು ಆಹ್ವಾನಗಳು ಇಂದೂ ಬರುತ್ತವೆ. ನಾನು ಅವುಗಳನ್ನು ಕಾಲಿನಿಂದ ಒದ್ದು ದೂರವಾಗಿಟ್ಟದ್ದೇನೆ" ಎಂದಳು.

ಅನಿಲನು ಅವಳ ಉಜ್ವಲ ಮೂರ್ತಿಯನ್ನು ನೋಡುತ್ತಾ ಕುಳಿತುಕೊಂಡಿದ್ದನು.

ಅವಳು ಭಾವೋದ್ರೇಕದಿಂದ "ಹಣ ಬರುವುದೂ ಅದರಿಂದ ಮನುಷ್ಯರಿಗೆ ಸುಖವಾಗುವುದೂ ಅದೃಷ್ಟ. ಇನ್ನು ಸಿನಿಮಾಗಳಲ್ಲಿರುವುದೇನು ? ಕೀರ್ತಿಯು ಬರುತ್ತದೆಂದು ಹೇಳುತ್ತೀಯೇನು ? ಅದರಲ್ಲಿ ಬರುವ ಕೀರ್ತಿಯು ಕ್ಷಣಿಕವಾದುದು. ನಿನಗಿನ್ನೂ ಸಣ್ಣ ವಯಸ್ಸು. ನನಗೆ ಈ ಇಪ್ಪತ್ತು ವರ್ಷಗಳಿಂದ ನಡೆದಿರುವುದೆಲ್ಲವೂ ಚೆನ್ನಾಗಿ ಜ್ಞಾಪಕವಿದೆ. ಹತ್ತಾರು ಮಂದಿ ಸಿನಿಮಾ ನಟರು ಹುಟ್ಟಿ ಅಳಿದು ಹೋದುದನ್ನು ನಾನು ಇದೇ

ಕಣ್ಣುಗಳಲ್ಲಿ ನೋಡಿದ್ದೇನೆ. ಆದರೆ ರಂಗಭೂಮಿಯ ವಿಷಯವು ಹಾಗಲ್ಲ. ಆ ಸ್ವಾಮಿ ನಿನ್ನನ್ನು ವರದಾಚಾರ್ಯರಿಗೆ ಹೋಲಿಸಿ ಬರೆದಿದ್ದಾನೆಂದು ಜಂಭ ಮಾಡಬೇಡ. ನೀನು ರಂಗಭೂಮಿಯಲ್ಲಿ ಈಗತಾನೇ ಹತ್ತಿರುವ ಪುಟ್ಟ ಹಣತೆ. ವರದಾಚಾರ್ಯರು ರಂಗಭೂಮಿಯನ್ನು ದೇದೀಪ್ಯ ಮಾನವಾಗಿ ಬೆಳಗಿದಂತಹ ದೈವೀ ಪ್ರಕಾಶ. ಅವರ ದೇಹದಲ್ಲಿ ಕಡೆಯ ಉಸಿರಿರುವವರೆವಿಗೂ ಅವರ ಪತನವಾಗಲಿಲ್ಲ. ಅನಂತರ ಅವರು ಅಮರರಾದರು. ಇಂದೂ ನಾಳೆಯೂ ಅವರ ನೆನಪು ಅಳಿಯದೇ ಉಳಿದಿರುತ್ತದೆ. ಆ ನೆನಪು ಈ ದೇಶದಲ್ಲಿ ಅಸಂಖ್ಯಾತರಾದ ನಟರನ್ನು ನಿರ್ಮಾಣ ಮಾಡುತ್ತದೆ" ಎಂದಳು.

ಮಂತ್ರ ಮುಗ್ಧವಾದ ಸರ್ಪದಂತೆ ಅವನಾ ಮಾತುಗಳನ್ನು ಕೇಳುತ್ತಾ ಕುಳಿತಿದ್ದನು. ಅವು ಪೂರ್ಣವಾಗಿ ಅವನಿಗೆ ಅರ್ಥವಾಯಿತೋ ಇಲ್ಲವೋ ಅಂತೂ ಅವುಗಳಿಂದ ಪ್ರಭಾವಿತನಾದನು.

ಅನಿಲನು ವರದೆಯ ಭುಜದ ಮೇಲೆ ಮುಖವನ್ನಿರಿಸಿ "ವರದಾ. ರಜತ ಪರದೆ, ರಂಗಭೂಮಿಗಳಿಗಿಂತ ನನಗೆ ನೀನು ದೊಡ್ಡವಳಾಗಿ ಕಂಡು ಬರುತ್ತೀಯೆ. ನೀನು ಎಲ್ಲಿರುತ್ತೀಯೋ ನಾನೂ ಅಲ್ಲಿಯೇ ಇರುತ್ತೇನೆ" ಎಂದು ಹೇಳಿದನು.

# ೧೨

ವರದೆಯು ಹೇಳಿದಂತಹ ಪರಿಸ್ಥಿತಿಯು ಬರಲು ಬಹಳ ಕಾಲವಾಗಲಿಲ್ಲ.

ವಾಸವದತ್ತಾ ನಾಟಕವು ಮನೆಮಾತಾಯಿತು. ಒಂದೆರಡು ಪ್ರದರ್ಶನಗಳಲ್ಲಿಯೇ ಅದು ನಿಲ್ಲಲಿಲ್ಲ. ನಾಟಕ ಕಂಪನಿಗಳವರಂತೆ ಮೇಲಿಂದ ಮೇಲೆ ದಿನವೂ ಪ್ರದರ್ಶನಗಳನ್ನು ಏರ್ಪಡಿಸುವುದಕ್ಕೆ ವಿಶ್ವನಾಥಂರವರಾಗಲೀ ವರದೆಯಾಗಲೀ, ಒಪ್ಪಿಕೊಳ್ಳಲಿಲ್ಲ. ಹಣದಾಸೆಯು ಹುಟ್ಟಿದ ಕಡೆ ಕಲೆಯು ಸರ್ವನಾಶವಾಗುತ್ತದೆಂದು ಅವರು ಹೇಳುತ್ತಿದ್ದರು. ಇದರ ಮೇಲೆ ಅವರುಗಳು ಬೆಜವಾಡಕ್ಕೆ ಹೊರಟು ಹೋಗಬೇಕಾದ ಕಾಲವೂ ಸಮೀಪಿಸುತ್ತಿತ್ತು. ರಾಮಾನುಜಯ್ಯಂಗಾರ್ಯರೂ ಮತ್ತು ರಾಜಣ್ಣನವರೂ ವಿಶ್ವನಾಥಂರನ್ನು ಬಹಳ ಬಲಾತ್ಕಾರ ಮಾಡಿದರು. ಅದಕ್ಕಾಗಿ ವಾರಕ್ಕೆರಡು ದಿನ ಮಾತ್ರ ಪ್ರದರ್ಶನವೇರ್ಪಡಿಸಲು ಅವರು ಒಪ್ಪಿಕೊಂಡರು.

ಎಂಟು ಹತ್ತು ಪ್ರದರ್ಶನಗಳು ನಡೆದುವು. ಪ್ರತಿ ಪ್ರದರ್ಶನಕ್ಕೂ ಜನರು ಗುಂಪು ಗುಂಪಾಗಿ ಬಂದು ನಾಟಕ ಮಂದಿರವು ತುಂಬಿಹೋಗುತ್ತಿತ್ತು. ಮೈಸೂರಿನ ಪತ್ರಿಕೆಗಳೆಲ್ಲವೂ ಪುನಃ ಈ ನಾಟಕವನ್ನು ಕೊಂಡಾಡಿ ಬರೆದುವು. ಈ ಬಿಸಿಯು ಮದರಾಸು, ಬೊಂಬಾಯಿಗಳಿಗೂ ಹತ್ತಿತು.

ಅಲ್ಲಿನ ಪತ್ರಿಕೆಗಳೂ ವಿಶ್ವನಾಥಂ, ವರದಾದೇವಿ, ಅನಿಲ ಕುಮಾರರ ಭಾವ ಚಿತ್ರಗಳನ್ನು ಪ್ರಕಟಿಸಿ, ಪುಟಗಳಗಟ್ಟಲೆ ಬರೆದುವು.

ಈ ನಡುವೆ ಕಲಾವಿದರಿಗೆ ಮನ್ನಣೆಮನ್ನು ಮಾಡಲು ಮಹಾ ಜನಗಳು ಮರೆಯಲಿಲ್ಲ. ಸಂಘಗಳೂ, ಸಂಸ್ಥೆಗಳೂ ಇವರನ್ನು ಆಹ್ವಾನಿಸಿ ಸತ್ಕರಿಸಿದವು. ಮಾನಪತ್ರಗಳನ್ನು ಸಮರ್ಪಿಸಿದುವು.

ಇವುಗಳೆಲ್ಲವೂ ಅನಿಲಕುಮಾರನ ಮೇಲೆ ಪ್ರಭಾವವನ್ನು ಉಂಟು ಮಾಡದೇ ಇರಲಿಲ್ಲ. ರಂಗಭೂಮಿಯು ಅವನಿಗೆ ಕರತಲಾಮಲಕವಾದಂತಾಯಿತು. ಜನರ ಮೆಚ್ಚಿಗೆಯು ಮಧುವಿನಂತೆ ಅವನನ್ನು ಮತ್ತನನ್ನಾಗಿ ಮಾಡಿತು. ಜನದೊಂದಿಗೂ, ಜನಸಮೂಹದೊಂದಿಗೂ ಮಿಳನವಾಗುವುರಲ್ಲಿ ಆ ಮತ್ತತೆಯು ವ್ಯಕ್ತವಾಗುತ್ತಿತು.

ಸಮಾರಂಭಗಳಿಗೆ ಆ ಹ್ವಾ ನ ವು ಬಂದಾಗ ತನ್ನ ವ್ಯಕ್ತಿತ್ವವನ್ನು ದೊಡ್ಡದು ಮಾಡಿಕೊಳ್ಳಲು ಸ್ವಲ್ಪ ತಡವಾಗಿ ಹೋಗುತ್ತಿದ್ದನು. ನಡೆಯುವಾಗ ನಿದಾನವಾಗಿಯೂ, ಗಂಭೀರವಾಗಿಯೂ ಹೆಜ್ಜೆಯನ್ನು ಹಾಕುತ್ತಿದ್ದನು. ಯಾರು ಯಾರು ಇದ್ದಾರೆಂಬುದು ಗೊತ್ತಿದ್ದರೂ ಅವರನ್ನು ನೋಡದವನಂತೆ ಮುಂದುವರಿದು-ಅವರೇ ತನ್ನ ಬಳಿಗೆ ಬಂದು ಮಾತನಾಡುವಂತೆ ಮಾಡುತ್ತಿದ್ದನು. ಹಾಗೆ ಯಾರಾದರೂ ಮುಂದೆ ಬರದಿದ್ದರೆ ಅಕಸ್ಮಾತ್ ಅವರನ್ನು ನೋಡಿದಂತೆ ಮಾಡಿ, ಅವರು ಬಂದು ಮಾತನಾಡಿಸುವಂತೆ ಮಾಡುತ್ತಿದ್ದನು.

ತನಗಿಂತ ದೊಡ್ಡವರ ವಿಷಯದಲ್ಲಿ ಅವನು ನಡೆದುಕೊಳ್ಳುತ್ತಿದ್ದ ರೀತಿಯು ಭಿನ್ನವಾಗಿದ್ದಿತು. ತಾನೇ ಅವರ ಬಳಿಗೆ ಹೋಗಿ ವಿನಯದಿಂದ ಮಾತನಾಡಿಸುತ್ತಿದ್ದನು. ಅವರ ಮನೋಭಾವವನ್ನು ಅರಿತುಕೊಂಡು ಎಷ್ಟು ಅವಶ್ಯಕವೋ ಅಷ್ಟು ಮಾತನಾಡುತ್ತಿದ್ದನು.

ಹೀಗೆ ಅನಿಲಕುಮಾರನು ಅಸಹಜವಾದ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುತ್ತಿದ್ದನು. ಇದನ್ನು ನೋಡಿದಾಗಲೆಲ್ಲಾ ವರದೆಯು "ಅನುಭವವಿಲ್ಲದ ಹುಡುಗ" ಎಂದು ನಿರ್ಲಕ್ಷ್ಯದಿಂದ ನಕ್ಕು ಬಿಡುತ್ತಿದ್ದಳು.

ಈ ನಡುವೆ ಮದರಾಸಿನ ಚಿತ್ರಪ್ರಿಯ ಎಂಬ ತೆಲಗು ಪತ್ರಿಕೆಯು

ಸಂಪಾದಕರಾದ ವೆಂಕಪ್ಪಯ್ಯನವರು ಬೆಂಗಳೂರಿಗೆ ಬಂದರು. ಅವರು ವಾಸವದತ್ತಾ ಪ್ರದರ್ಶನವನ್ನು ನೋಡಿ ಸಂತೋಷಪಟ್ಟರು. ನಾಟಕದ ನಿರ್ಮಾತರುಗಳನ್ನೂ, ನಟನಟಿಯರನ್ನೂ ಪರಿಚಯ ಮಾಡಿಕೊಂಡು ಅಭಿನಂದಿಸಿದರು.

ಅವಕಾಶವನ್ನು ಕಲ್ಪಿಸಿಕೊಂಡು ರಹಸ್ಯವಾಗಿ ಹೋಗಿ ಅನಿಲಕುಮಾರನನ್ನು ಭೇಟಿ ಮಾಡಿದರು. ಮದರಾಸಿನ ಸುಪ್ರಸಿದ್ಧ ಫಿಲಂ ಕಂಪನಿಯವರು ವಾಸವದತ್ತಾವನ್ನು ಚಲನ ಚಿತ್ರವಾಗಿ ಮಾಡಬೇಕೆಂದಿದ್ದಾರೆಂದು ಹೇಳಿದರು. ತೆಲುಗು, ತಮಿಳು ಮತ್ತು ಕನ್ನಡ ಭಾಷೆಗಳಲ್ಲಿ ಏಕ ಕಾಲದಲ್ಲಿ ನಿರ್ಮಿಸಲಿದ್ದಾರೆಂದು ತಿಳಿಸಿದರು.

ಅನಂತರ " ಅನಿಲ ಕುಮಾರ್ ! ಮೂರು ಭಾಷೆಯ ಚಿತ್ರಗಳಲ್ಲಿಯೂ ನಿಮಗೇ ಉದಯನನ ಪಾತ್ರ ಕೊಡಿಸಲು ಏರ್ಪಾಟು ಮಾಡುತ್ತೇನೆ. ಚಿತ್ರ ತಯಾರಾಗಲು ಮೂರು ನಾಲ್ಕು ತಿಂಗಳುಗಳಾಗಬಹುದು. ನಿಮಗೆ ಖರ್ಚು ಕೊಟ್ಟು ಇಪ್ಪತ್ತು ಸಾವಿರ ರೂಪಾಯಿಗಳನ್ನು ಕೊಡಿಸುತ್ತೇನೆ" ಎಂದರು.

ಕೂಡಲೇ ಅವನೇನೂ ಉತ್ತರವನ್ನು ಕೊಡಲಿಲ್ಲ.

ಪತ್ರಕರ್ತರು "ಸರಿಯಾಗಿ ಆಲೋಚನೆ ಮಾಡಿರಿ, ಅನಿಲಕುಮಾರ್. ತ್ರಿಭಾಷಾ ಚಿತ್ರದಲ್ಲಿ ಒಮ್ಮೆಗೇ ನಟಿಸುವ ಅವಕಾಶವು ಸಿಕ್ಕುವುದೆಂದರೆ ಸಾಮಾನ್ಯವಲ್ಲ. ಅದೃಷ್ಟ ದೇ ವ ತೆ ಯು ಒಮ್ಮೆ ಬಂದು ಬಾಗಲು ತಟ್ಟುತ್ತಾಳೆಯಂತೆ. ಆಗ ನಿರ್ಲಕ್ಷಿಸಿದರೆ ಪುನಃ ಆಕೆಯು ಬರುವುದಿಲ್ಲ" ಎಂದು ಹೇಳಿದರು.

ಅನಿಲನು "ಆಗಲಿ. ಆಲೋಚಿಸಿ ತಮಗೆ ಕಾಗದ ಬರೆಯುತ್ತೇನೆ" ಎಂದನು.

ವೆಂಕಪ್ಪಯ್ಯನವರು ಅವನಿಂದ ಬೀಳ್ಕೊಂಡರೂ ಆ ಪ್ರಯತ್ನವನ್ನು ಅಷ್ಟಕ್ಕೆ ಬಿಡಲಿಲ್ಲ. ಹೇಗೋ ಅವನಿಗೂ ಅರಸುರತ್ನೆಗೂ ಇರುವ ಸಂಬಂಧವನ್ನು ತಿಳಿದುಕೊಂಡರು, ಅವಳನ್ನು ನೋಡಿ, ಅನಿಲಕುಮಾರನಿಗೆ ಒದಗಿ ಬಂದಿರುವ ಅವಕಾಶವನ್ನು ಸೂಕ್ಷ್ಮವಾಗಿ ಹೇಳಿ ಹೊರಟು ಹೋದರು.

ನಾಟಕ ಪ್ರದರ್ಶನಗಳು ನಿಂತುಹೋದುವು. ವಿಶ್ವನಾಥಂರವರಿಗೆ.

ಬಹಳ ಆಯಾಸವಾಗಿದ್ದುದರಿಂದ ಒಂದು ತಿಂಗಳು ಪೂರ್ಣ ವಿಶ್ರಾಂತಿಯನ್ನು ಪಡೆದು ಅನಂತರ ತಮ್ಮೂರಿಗೆ ಪ್ರಯಾಣಮಾಡುವುದಾಗಿ ನಿರ್ಧರಿಸಿದರು.

ಇತ್ತ ವೆಂಕಪ್ಪಯ್ಯನವರು ತಮ್ಮ ಪ್ರಯತ್ನವನ್ನು ನಿಲ್ಲಿಸಲಿಲ್ಲ. ಎರಡು ಮೂರು ದಿನಗಳಲ್ಲಿಯೇ ಮೂವತ್ತು ಸಹಸ್ರ ರೂಪಾಯಿ ಕೊಡಿಸುವುದಾಗಿ ಬರೆದರು. ಅನಿಲನು ನಿರಾಸಕ್ತಿಯನ್ನು ತೋರಿದಂತೆಲ್ಲಾ ಹಣದ ಮೊತ್ತವು ಏರುತ್ತಾ ಹೋಯಿತು. ನಲವತ್ತು, ಐವತ್ತು ಸಾವಿರ ರೂಪಾಯಿಗಳಿಗೆ ಏರಿತು.

ಅದನ್ನು ನೆನೆಸಿಕೊಂಡಾಗ ಅನಿಲನಿಗೆ ಉಸಿರುಕಟ್ಟಿ ಬರುವಂತೆ ಆಗುತ್ತಿತ್ತು.

ಆ ಸಮಯಗಳಲ್ಲೆಲ್ಲಾ ಅವನು ವಠಿಯನ್ನು ನೆನೆಸಿಕೊಳ್ಳುವನು. ಅವನ ಮೇಲೆ ವಠಿಯ ಪ್ರಭಾವವು ಬಹಳವಾಗಿದ್ದಿತು. ಅವಳ ಮಾತನ್ನು ಉಲ್ಲಂಘಿಸಿ ಅವಳನ್ನು ತಳ್ಳಿ ಹೊರಟು ಹೋಗಲು ಅವನಿಗೆ ಧೈರ್ಯವಿರಲಿಲ್ಲ. ಆದರಿಂದ ತಾರಾಲೋಕವನ್ನೂ, ಅಲ್ಲಿಂದ ತನಗೆ ಬರುತ್ತಿರುವ ಆಹ್ವಾನಗಳನ್ನೂ ಮರೆಯಲು ಪ್ರಯತ್ನಿಸಿದನು. ಆದರೆ ಅದೂ ಸಾಧ್ಯವಾಗಲಿಲ್ಲ.

ಒಂದೊಂದು ಬಾರಿ ಅವನು ಹಗಲುಗನಸು ಕಾಣುವನು. ಆಗ ತಾನೊಬ್ಬ ಮಿರುಗುವ ತಾರೆಯಂತೆ ಭಾಸವಾಗುತ್ತದೆ. ಮಂಜುಳೆಯು ಪುಟ್ಟ ಹಕ್ಕಿಯಾಗಿ ಯಾವುದೋ ಬಲೆಯಲ್ಲಿ ಸಿಕ್ಕಿ ತೊಳಲುತ್ತಿರುವಂತೆಯೂ, ಅವಳು ತನ್ನ ಬಳಿಗೆ ಬರಲು ಪ್ರಯತ್ನ ಮಾಡುತ್ತಿದ್ದರೂ ವಿಫಲವಾಗುವಂತೆಯೂ ಭಾಸವಾಗುತ್ತದೆ. ಆಗವನಿಗೆ ವೆಂಕಪ್ಪಯ್ಯನವರ ಆಹ್ವಾನವನ್ನು ಒಪ್ಪಿಕೊಂಡು ಮದರಾಸಿಗೆ ಹೊರಟು ಹೋಗೋಣವೆನ್ನಿಸುತ್ತದೆ. ಅಲ್ಲಿ ತಾನು ದೊಡ್ಡ ನಟನಾಗಿ ಬೇಕಾದಷ್ಟು ಹಣವನ್ನು ಸಂಪಾದನೆ ಮಾಡಬೇಕೆನ್ನಿಸುತ್ತದೆ. ಅಷ್ಟು ಮಾಡಿ ಮಂಜುಳೆಯನ್ನು ಮದುವೆಮಾಡಿಕೊಂಡು ಸುಖವಾಗಿ ಬಾಳಬೇಕೆನ್ನಿಸ್ಸುತ್ತದೆ.

ಸಿನಿಮಾದಲ್ಲಿ ನಟಿಸಬೇಕು–ಎಂದು ಕೊಂಡಾಗಲೆಲ್ಲಾ "ನನಗಾಗಿ ಅದು ಬೇಡ. ಮಾಡಿದರೆ ಮಂಜುಳೆಗಾಗಿ ಮಾಡಬೇಕಾಗುತ್ತದೆ" ಎಂದು ಮನಸ್ಸಿಗೆ ಸಮಾಧಾನವನ್ನು ತಂದುಕೊಳ್ಳುತ್ತಾನೆ.

ಹೀಗೆ ಅನಿಲಕುಮಾರನು ಆಶಾ ಸಾಗರದಲ್ಲಿ ಬೀಳುತ್ತಾ ಏಳುತ್ತಾ ತೊಳಲುತ್ತಿರುವಾಗ ಹಠಾತ್ತನೆ ವೆಂಕಪ್ಪಯ್ಯನವರು ಬಂದರು.

ಅವರು ಅನಿಲನನ್ನು ನೋಡಿ "ನೀವು ಕೂಡಲೇ ಒಪ್ಪಿಕೊಳ್ಳುವುದಾದರೆ ಅರವತ್ತು ಸಾವಿರ ರೂಪಾಯಿ ಕೊಡಿಸುತ್ತೇನೆ. ಇನ್ನು ನಿಮ್ಮ ಜನ್ಮದಲ್ಲಿಯೇ ಇಂತಹ ಅವಕಾಶವು ಸಿಗುವುದಿಲ್ಲ" ಎಂದು ಹೇಳಿದರು.

ಅನಿಲಕುಮಾರನ ಉತ್ತರವನ್ನು ನಿರೀಕ್ಷಿಸದೆಯೇ ಪುನಃ ಬರುವುದಾಗಿ ಹೇಳಿ ಹೊರಟುಹೋದರು.

ಅವನಿಗೆ ತಿಳಿಯದಂತೆಯೇ ಅವರು ಅರಸುರತ್ನೆಯನ್ನು ಭೇಟಿ ಮಾಡಿ ಮಾತನಾಡುತ್ತಾ "ಇಷ್ಟು ಬಾರಿ ನಿರಾಕರಿಸಿದರೂ ಪುನಃ ಕರೆಯು ಬಂದಿರುವುದು ಅದೃಷ್ಟವೆಂದೇ ಹೇಳಬೇಕು. ರಾಜರತ್ನಂಚೆಟ್ಟಿಯಾರು ಯಾರನ್ನೇ ಆಗಲೀ ನೀನು ಬಂದು ಅಭಿನಯಿಸಬೇಕು–ಎಂದು ಕರೆದುದೇ ಇಲ್ಲ. ಅವರ ಆಫೀಸಿನ ಬಳಿ ನಟನಟಿಯರು ತಾವು ಮುಂದೆ ತಾವು ಮುಂದೆಂದು ಕಾದಿರುತ್ತಾರೆ. ಅಂತಹವರಲ್ಲಿ ನಾನು ಏನೇನೋ ಮಾಡಿ ಒಪ್ಪಿಸುತ್ತಿದ್ದರೂ ಈ ನಿಮ್ಮ ಹುಡುಗ ಬೇಡವೆಂದು ಹಟ ಹಿಡಿಯುತ್ತಿರುವುದು ಆಶ್ಚರ್ಯಕರವಾಗಿದೆ" ಎಂದರು.

ಅರಸುರತ್ನೆಯು "ಅವೇಕೆ ಅನಿಲನು ನಿರಾಕರಿಸುತ್ತಿದ್ದಾನೆಂದು ಊಹೆ ಮಾಡುತ್ತೀರಿ?" ಎಂದಳು.

"ನೀವು ಒಡೆದು ಹೇಳಿ ಎಂದರೆ ಹೇಳಿಬಿಡುತ್ತೇನೆ."

"ಹೇಳಿ ಅದಕ್ಕೇನು? ಇರುವ ವಿಷಯವನ್ನು ಹೇಳಲು ನೀವೇಕೆ ಹಿಂಜರಿಯಬೇಕು?"

"ಅದು ಇಷ್ಟೆ. ಪರಿಮಾ ಅಂತ ಒಬ್ಬಳು ತೆಲುಗು ದೇಶದ ಹುಡುಗಿ ಇದ್ದಾಳೆ. ಅವಳು ಬಹಳ ದಿನಗಳಿಂದಲೂ ಸಿನಿಮಾದಲ್ಲಿ ಅಭಿನಯಿಸಬೇಕು ಎಂದು ಪ್ರಯತ್ನ ಮಾಡುತ್ತಿದ್ದಾಳೆ. ಕ್ಯಾಮರಾಗೆ ಅವಳ ಮುಖವು ಸ್ವಲ್ಪವೂ ಸರಿಹೋಗದೇ ಇರುವುದರಿಂದ ಅವಳಿಗೆ ಅವಕಾಶವು ಸಿಕ್ಕಲಿಲ್ಲ. ಈ ನಾಟಕದಲ್ಲಿ ಅವಳು ವಾಸವದತ್ತೆಯ ಪಾರ್ಟು ಮಾಡಿದ್ದಾಳೆ. ಹಾಗೆಯೇ ಅವಳು ಈ ಹುಡುಗನನ್ನು ವಶಪಡಿಸಿಕೊಂಡಿದ್ದಾಳೆ. ಈ ಸಮಯದಲ್ಲಿ ತಾನೂ ಸಿನಿಮಾದಲ್ಲಿ ವಾಸವದತ್ತೆಯ ಪಾರ್ಟು ಮಾಡುವ ಅವಕಾಶವನ್ನು

ಪಡೆಯಬೇಕೆಂದಿದ್ದಾಳೆ. ಆದರಿಂದ ಅನಿಲಕುಮಾರನನ್ನು ತಡೆಯುತ್ತಿದ್ದಾಳೆ. ಅವಳಿಗೆ ನಾವು ಅವಕಾಶ ಕೊಡುವವರೆವಿಗೂ ಅನಿಲನನ್ನು ಅವಳು ಬಿಟ್ಟುಕೊಡುವಂತಿಲ್ಲ."

ಅರಸುರತ್ನೆಯು ಕೋಪದಿಂದ ತಲೆಯಾಡಿಸುತ್ತಾ ವೆಂಕಪ್ಪಯ್ಯನು ಹೇಳಿದ ಮಾತುಗಳೆಲ್ಲವನ್ನೂ ಕೇಳಿದಳು.

ಅನಂತರ "ನಾನು ವರದೆಯೊಂದಿಗೆ ಮಾತನಾಡಿ ಇತ್ಯರ್ಥ ಮಾಡುತ್ತೇನೆ. ನೀವು ಹೊರಡಿ" ಎಂದು ಹೇಳಿದಳು.

ಮಾರನೆಯ ದಿನ ಸಂಜೆ ಅನಿಲಕುಮಾರನು ವರದೆಯನ್ನು ನೋಡಲು ಹೋದನು.

ಹೊರಗಡೆ ವರಾಂಡದಲ್ಲಿ ಅವಳು ಯಾವುದೋ ಪುಸ್ತಕವನ್ನು ಓದುತ್ತಾ ಕುಳಿತಿದ್ದಳು.

ಅನಿಲನು ಅವಳ ಬಳಿಗೆ ಹೋದನು. ಅವಳು ತಿರುಗಿ ನೋಡಲಿಲ್ಲ. ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಹೋಗಿ ಕುಳಿತುಕೊಂಡನು. ಆಗಲೂ ವರದೆಯು ತಿರುಗಿ ನೋಡಲಿಲ್ಲ.

ಅನಿಲನಿಗೆ ಬಹಳ ಆಶ್ಚರ್ಯವಾಯಿತು.

ಅವನು ನಿದಾನವಾಗಿ " ವರದಾ———— " ಎಂದನು.

ವರದೆಯು ತಿರುಗಿ ನೋಡಿ ತಿರಸ್ಕಾರದಿಂದ " ಹಾಗೆ ನೀನು ಸಿನಿಮಾ ನಟನಾಗ ಬೇಕೆಂದಿದ್ದರೆ ನಾನು ಹಿಡಿದುಕೊಳ್ಳುತ್ತಿದ್ದೇನೇ ? ಏನೋ ನನಗೆ ತೋರಿದ ಹಿತವಚನಗಳನ್ನು ಹೇಳಿದೆ. ಕೇಳಿದರೆ ಕೇಳಬಹುದಾಗಿದ್ದಿತು. ಬಿಟ್ಟರೆ ಬಿಡಬಹುದಾಗಿದ್ದಿತು. ಅದು ಬಿಟ್ಟು ಅರಸುರತ್ನೆಯನ್ನು ಯಾಕೆ ಕಳಿಸಬೇಕಾಗಿದ್ದಿತು ?" ಎಂದಳು.

" ಅರಸು ರತ್ನೆ ನಿಮ್ಮ ಹತ್ತಿರ ಬಂದು———"

" ಎಂತಹ ಮನುಷ್ಯ ನೀನು ? ನನಗೆ ಹೇಗೆ ತಾನೇ ಬಂದು ಮುಖ ತೋರಿಸುತ್ತೀಯೆ ? ಏನು ಮಾಡುತ್ತಿದ್ದೇನೆಂಬುದನ್ನೇ ತಿಳಿದುಕೊಳ್ಳಲಾರದಂತಹವನು. ಏನು ಬೇಕೋ ಮಾಡಿಕೋ. ನನಗೇನು ?"

" ನೀನು ಸಿನಿಮಾದಲ್ಲಿ ದೊಡ್ಡ ನಟನಾಗುತ್ತೀಯೆಂದುಕೊಂಡಿ

ದ್ದೀಯೆ. ಆಗು. ಆದರೂ ಅದು ವ್ಯರ್ಥ. ನೀರಿನ ಗುಳ್ಳೆಯಂತೆ ಕ್ಷಣ ಭಂಗುರ. ನಿನ್ನಂತಹ ನೀಚರೂ, ಸ್ವಾರ್ಥಿಗಳೂ ಹೊರಟು ಹೋಗುವುದೇ ರಂಗಭೂಮಿಗೆ ಕಲ್ಯಾಣಕರ. ಹೋಗು. ದಯವಿಟ್ಟು ಹೊರಟು ಹೋಗು" ಎಂದು ಹೇಳುತ್ತಾ, ಕಣ್ಣುಗಳಲ್ಲಿ ಬಂದ ವಾರಿಧಾರೆಗಳನ್ನು ಒರಸಿಕೊಳ್ಳುತ್ತಾ ಒಳಗೆ ಹೊರಟು ಹೋದಳು.

ವರದೆಯ ಮನೆಯಿಂದ ಅನಿಲನು ಅರಸು ರತ್ನಿಯನ್ನು ನುಂಗಿ ಹಾಕಿ ಬಿಡುವವನಂತೆ ಬಂದನು. ಆದರೆ ಅವಳ ಎದುರಿಗೆ ಹೋಗುತ್ತಲೇ ಅವನ ಮನಸ್ಸು ಅಳುಕಿತು. ಅವನು ಕುಗ್ಗಿ ಹೋದನು.

ಆದರೂ ಇದ್ದುದರಲ್ಲಿ ಧೈರ್ಯವನ್ನು ತಂದುಕೊಂಡು "ವರದಾದೇವಿಯವರು———" ಎಂದು ಮಾತು ಆರಂಭಿಸುವುದಕ್ಕೆ ಹೋದನು.

"ಹೌದು. ನಾನು ನಿನ್ನೆಯ ದಿನ ಹೋಗಿ ವರದೆಯೊಡನೆ ಮಾತನಾಡಿದೆ. ನಿನಗೆ ಒಳ್ಳೆಯ ಅವಕಾಶ ಬಂದಿರುವಾಗ ಅದಕ್ಕೆ ಅಡಚಣೆಗಳನ್ನು ತಂದೊಡ್ಡಲು ಅವಳಾರು ?"

"ಅವರಾವ ಅಡಚಣೆಗಳನ್ನೂ ತರಲಿಲ್ಲ"

"ಹಾಗಾದರೆ ಅರವತ್ತು ಸಾವಿರ ರೂಪಾಯಿ ಕೊಡುತ್ತೇವೆಂದು ಬಂದರೂ ನೀನೇಕೆ ಒಪ್ಪಿಕೊಳ್ಳಲಿಲ್ಲ ? ಒಂದು ಕಾಲದಲ್ಲಿ ಸಿನಿಮಾ ನಟನಾಗಬೇಕೆಂದು ನೀನು ಹಾತೊರೆಯುತ್ತಲಿರಲಿಲ್ಲವೇ ?"

"ಹೌದು. ಆದರೆ ಸಿನಿಮಾದಿಂದ ಕಲಾಸೇವೆ ಮಾಡಲಾಗುವುದಿಲ್ಲ. ಕಬ್ಬಿನ ರಸವನ್ನು ಹೀರಿ ಸಿಪ್ಪೆಯನ್ನು ಎಸೆಯುವಂತೆ ಸಿನಿಮಾ ಕಲಾವಂತರನ್ನು ನಿರ್ವೀರ್ಯರನ್ನಾಗಿ ಮಾಡುತ್ತದೆ"

"ಇವೆಲ್ಲಾ ಕೆಲಸಕ್ಕೆ ಬಾರದ ಮಾತುಗಳು. ವಿಷಯವನ್ನು ನಾನು ಹೇಳುತ್ತೇನೆ, ಕೇಳು. ಆ ವರದೆಗೂ ಸಿನಿಮಾದಲ್ಲಿ ಪಾರ್ಟು ಮಾಡಬೇಕೆಂಬ ಆಸೆಯಿದೆ. ಅವಳಿಗೆ ಯಾರೂ ಅವಕಾಶ ಕೊಡುವುದಿಲ್ಲ ನಿನ್ನ ಮೂಲಕ ತಾನೊಂದು ಅವಕಾಶವನ್ನು ಹೊಡೆಯಲು ನಿನಗೆ ಈ ಮಂತ್ರವನ್ನು ಹಾಕಿದ್ದಾಳೆ"

ಹುಳುಗಳಿಗೂ ಒಮ್ಮೊಮ್ಮೆ ಚೇತನ ಉಂಟಾಗಿ ಅವು ತಿರುಗಿ ಬೀಳು ತ್ತಾವೆಯಂತೆ.

ಹಾಗೆ ಅನಿಲನು "ವರದಾದೇವಿಯವರು ಬಹಳ ದೊಡ್ಡವರು. ಅವರು ಎಂದೆಂದಿಗೂ ಹಾಗೆ ಮಾಡುವುದಿಲ್ಲ" ಎಂದನು.

"ಏನು ಮಾತನಾಡುತ್ತಿದ್ದೀಯೆ, ಅನಿಲ. ನಿನಗೆ ಲೋಕವ್ಯವಹಾರವು ಗೊತ್ತಿಲ್ಲ. ಬೆಳ್ಳಗಿರುವುದನ್ನೆಲ್ಲವನ್ನೂ ಹಾಲೆಂದುಕೊಳ್ಳುತ್ತೀಯೆ. ನಾನೇನು ನೀನು ಹಾಳಾಗಲೆಂದು ಇವೆಲ್ಲಾ ಮಾಡುತ್ತಿದ್ದೇನೆಂದು ಕೊಂಡೆಯಾ ? ನೀನು ಈಗ ಹೊರಟು ಹೋಗುವುದರಿಂದ ನನಗಿಂತ ಯಾರಿಗೆ ಹೆಚ್ಚು ನಷ್ಟವಾಗುತ್ತದೆ. ? "

ಅವನು ಸುಮ್ಮನಿದ್ದನು.

"ಮೊಟ್ಟಮೊದಲು ವಾಸವದತ್ತಾ ನಾಟಕವು ಪ್ರದರ್ಶನವಾದ ದಿನ ರಾತ್ರಿ ಕಾರಿನಲ್ಲಿ ಬರುತ್ತಾ ನಾನು ಹೇಳಿದ್ದು ನೆನಪಿದೆಯೇ ? ಅನಿಲ. ನೀನು ನನಗೆ ದೂರವಾಗುತ್ತಿದ್ದಿ-ಎಂದು ಹೇಳಲಿಲ್ಲವೇ ? ನೋಡು. ಎಷ್ಟು ಬೇಗ ನಮ್ಮ ವಿಯೋಗ ಕಾಲವು ಬಂದಿತು. ಈಗ ನೀನು ಹೊರಟು ಹೋಗುತ್ತಿದ್ದೀಯೆ ! ಪುನಃ ನಾವಿಬ್ಬರೂ ಸಂಧಿಸುವ ಕಾಲವು ಬರುತ್ತದೆಂದು ನಂಬು ವುದು ಹೇಗೆ ? ನೀನು ದೊಡ್ಡ ನಟ ಶ್ರೇಷ್ಠವಾಗುತ್ತೀಯೆ. ದಿನ ದಿನಕ್ಕೆ ಬೆಳೆಯುತ್ತೀಯೆ. ಅನಂತರ ಶಾಶ್ವತವಾಗಿ ನನಗೂ ನಿನಗೂ ಬಿಟ್ಟು ಹೋ ಗುತ್ತದೆ. ಅಂತಹದನ್ನು ನಾನು ಒಪ್ಪಿಕೊಂಡು ನಿನ್ನನ್ನು ಕಳಿಸಿಕೊಡು ತ್ತಿರುವುದು ಸ್ವಾರ್ಥ ತ್ಯಾಗವಲ್ಲವೇ ? ಅದು ನಿನ್ನ ಉನ್ನತಿಗಾಗಿಯೇ ಅಲ್ಲವೇ ? "

ಆಗಲೂ ಅವಳ ಮಾತಿಗೆ ಉತ್ತರ ಕೊಡಲು ಅವನಿಂದಾಗಲಿಲ್ಲ.

"ನನ್ನ ಮಾತು ಕೇಳು, ಅನಿಲ. ಈ ದಿನವೇ ನಾನು ವೆಂಕಪ್ಪಯ್ಯ ನಿಗೆ ಕಾಗದ ಹಾಕುತ್ತೇನೆ. ನೀನು ಅವರ ತ್ರಿಭಾಷಾ ಚಿತ್ರದಲ್ಲಿ ನಟಿಸಲು ಒಪ್ಪಿಕೊಂಡಿದ್ದೀಯೆಂದು ಬರೆಯುತ್ತೇನೆ. ಈ ಅವಕಾಶವನ್ನು ಬಿಡಬೇಡ. ಜೀವನದಲ್ಲಿ ಒಮ್ಮೊಮ್ಮೆ ಮಾತ್ರ ಇಂತಹ ಅವಕಾಶಗಳು ಬರುತ್ತವೆ" ಎಂದು ಹೇಳಿದಳು.

# ೧೩

ಆದಾದ ಎರಡು ಮೂರು ದಿನಗಳ ಒಳಗಾಗಿ ಅನಿಲಕುಮಾರನು ಮದರಾಸಿಗೆ ಪ್ರಯಾಣಮಾಡಿದನು. ಅವನದುವರೆವಿಗೆ ಮದರಾಸು ನೋಡಿರಲಿಲ್ಲ. ಆದರಿಂದ ವೆಂಕಪ್ಪಯ್ಯನವರು ರೈಲ್ವೆ ಸ್ಟೇಷನ್ನಿಗೇ ಬಂದು ಅವನನ್ನು ಎದುರುಗೊಳ್ಳುವುದಾಗಿ ಕಾಗದ ಬರೆದಿದ್ದರು.

ಅನಿಲನು ಫಸ್ಟ್‌ಕ್ಲಾಸ್ ಟಿಕೆಟ್ ತೆಗೆದುಕೊಂಡಿದ್ದನು. ಕೂಪೆಯೊಂದರಲ್ಲಿ ಅವನ ಸೀಟ್ ರಿಜರ್ವ್ ಮಾಡಲಾಗಿದ್ದಿತು. ಅಲ್ಲಿ ಅವನ ವಿನಾ ಇನ್ನಾರೂ ಬರಲಿಲ್ಲ. ಅರಸುರತ್ನೆಯೇ ಸ್ಟೇಷನ್ನಿಗೆ ಬಂದು ಅವನನ್ನು ಬೀಳ್ಕೊಡಲು ಬಂದಿದ್ದಳು. ಲೋಯರ್ ಬರ್ತ್‌ನಲ್ಲಿ ಹಾಕಿದ್ದ ಅವನ ಹಾಸಿಗೆಯ ಮೇಲೆಯೇ ಕುಳಿತುಕೊಂಡು ಮಾತನಾಡುತ್ತಿದ್ದರು. ಅನಿಲನನ್ನು ಕಳಿಸಿಕೊಡುವುದು ಅವಳಿಗೆ ದುಃಖವಾಗಿತ್ತು. ಅಳುತ್ತಿದ್ದಳು. ರೈಲು ಹೊರಡುವ ಸಮಯದಲ್ಲಿ ಬಿಕ್ಕಿ ಬಿಕ್ಕಿ ಅಳಲು ತೊಡಗಿದಳು. ಅನಿಲನಿಗೂ ಮನಸ್ಸು ಉದ್ವಿಗ್ನಗೊಂಡು ಬಹಳ ದುಃಖವಾಯಿತು.

ಅರಸು ರತ್ನೆಯು ಮತ್ತು ಅನಿಲಕುಮಾರನ ಮನಃಸ್ಥಿತಿಗಳನ್ನು ಅನುಸರಿಸಿ ಓಡುವ ಕಾಲವು ನಿಲ್ಲಲಿಲ್ಲ. ಅದು ಯಥಾವತ್ತಾಗಿ ಮುಂದುವರಿಯಿತು. ಎರಡನೆಯ ಬೆಲ್ ಹೊಡೆಯಲು ಅರಸುರತ್ನೆ ಗಾಡಿಯಿಂದ ಇಳಿದು ಅವನ ಜೇಬಿನಲ್ಲಿ ಒಂದು ಕವರನ್ನು ಇಟ್ಟಳು.

ಅನಿಲನು ಹಾಸಿಗೆಯ ಮೇಲೆಯೇ ಕುಳಿತು ಸಿಗರೇಟು ಸೇದುತ್ತಿದ್ದನು. ಒಂದಾದನಂತರ ಒಂದರಂತೆ ಸೇದುತ್ತಲೇ ಇದ್ದನು. ಕುಪ್ಪಂ ಸಹ ಬಂದು ಹೋಯಿತು. ಬಲು ಹೊತ್ತಾಯಿತೆಂದು ದೀಪವಾರಿಸಿ ಮಲಗಿಕೊಂಡನು. ನಿದ್ದೆ ಬರಲಿಲ್ಲ. ಮನಸ್ಸಿನ ಭಾವಗಳು ಹೊಡೆದು ಎಬ್ಬಿಸುತ್ತಿದ್ದವು. ಸುಪ್ಪತ್ತಿಗೆಯು ಮುಳ್ಳಿನ ಹಾಸಿಗೆಯಂತೆ ಭಾಸವಾಯಿತು.

ಅನಂತರ ಅವನೊಂದು ಗಳಿಗೆಯೂ ಮಲಗಲಾಗಲಿಲ್ಲ. ಎದ್ದು ಹಾಸಿಗೆಯ ಮೇಲೆ ಕುಳಿತುಕೊಂಡನು. ಕಿಟಕಿಯಲ್ಲಿ ನೋಡಲಾರಂಭಿಸಿದನು. ಯಾವುದೂ ಎತ್ತ ಕಡೆಯೂ ಚಲಿಸುತ್ತಿರುವುದು ಅವನಿಗೆ ಕಂಡು ಬರಲಿಲ್ಲ. ಬರುಬರುತ್ತಾ ರೈಲಿನ ಚಕ್ರಗಳ ತಿರುಗುವ ಶಬ್ದವು ಕೂಡಾ ಕೇಳಿಬರಲಿಲ್ಲ.

ದೂರದಲ್ಲಿ, ಬಲು ದೂರದಲ್ಲಿ ಸ್ಥಿರವಾಗಿದ್ದ ನಕ್ಷತ್ರಗಳು ಮಾತ್ರ ಅವನ ಕಣ್ಣಿಗೆ ಕಾಣುತ್ತಿದ್ದುವು.

ವಿಶಾಲವಾದ ಆಕಾಶದಲ್ಲಿರುವ ನಕ್ಷತ್ರಗಳಂತೆಯೇ ಅವನ ಮನಸ್ಸಿನಲ್ಲಿ ನಾನಾ ಆಲೋಚನೆಗಳು ಮಿಣಗುಟ್ಟುತ್ತಿದ್ದವು. ದೀಪದ ಹುಳುವು ಹೆಣ್ಣೊಂದುಕೊಂಡು ಭ್ರಾಂತಿಯಿಂದ ತಾರೆಗಳನ್ನು ನುಂಗಲು ಅತ್ತಿತ್ತ ಹಾರುವಂತೆ ಅವನ ಮನಸ್ಸು ವಿವಿಧವಾದ ಆಲೋಚನೆಗಳ ಕಡೆಗೆ ಸುಳಿದು ವಿಫಲವಾಗಿ ಹಿಂತಿರುಗುತ್ತಿದ್ದಿತು.

ಅವನು ತನ್ನ ಜೀವನವನ್ನು ಕುರಿತು ಆಲೋಚಿಸ ತೊಡಗಿದನು ಅದು ಗಾಜಿನ ಗೋಲಿಯಂತಾಗಿದೆ ಎಂದು ತೋರಿತು. ಜೀವನದಲ್ಲಿ ತನಗೆ ಯಾವ ನಿರ್ದಿಷ್ಟವಾದ ಉದ್ದೇಶವೂ ಇದ್ದ ಹಾಗೆ ಕಂಡುಬರಲಿಲ್ಲ. ಜೀವನದಲ್ಲಿ ಅನೇಕ ಘಟನೆಗಳೂ ವ್ಯಕ್ತಿಗಳೂ ಬಂದು ಹೋಗಿವೆ. ಅವು ತಳ್ಳಿದಂತೆಲ್ಲಾ ಅವನು ಗುಡುಗಿಕೊಂಡು ಹೋಗಿದ್ದಾನೆ.

ತನ್ನ ಜೀವನದಲ್ಲಿ ಎಂದಾವರೂ ಒಂದು ಗುರಿಯಿದ್ದಿತೇ ಎಂದು

ಅವಲೋಕಿಸಿದನು. ಅದು ಇದ್ದ ಹಾಗೆ ಅವನಿಗೆ ಕಂಡುಬರಲಿಲ್ಲ. ಅವನಿಗೆ ಓಡಿಯಾಡುವುದೂ ಮಾತನಾಡುವುದೂ ಬಂದ ಕೂಡಲೇ ಮನೆಯವರು ಶಾಲೆಗೆ ಹಾಕಿದರು. ಆ ಜೀವನವೇ ಅವನಿಗೆ ಸರಿಹೋಗಲಿಲ್ಲ. ಓದು ತಲೆಗೆ ಹತ್ತಲಿಲ್ಲ. ಆದರಿಂದ ತಾನು ಓದಿ ಪ್ಯಾಸು ಮಾಡಿ ಮುಂದಕ್ಕೆ ಬರಬೇಕೆಂದು ಎಂದೂ ಅವನಿಗೆ ತೋರಲಿಲ್ಲ.

ಆಮೇಲೆ ನಾಟಕಕ್ಕೆ ಬಂದುದೂ ಹಾಗೆಯೇ. ಯಾರೋ ಕರೆದುಕೊಂಡು ಹೋದರು. ಬಣ್ಣ ಹಚ್ಚಿ ರಂಗಭೂಮಿಯ ಮೇಲೆ ಬಿಟ್ಟರು. ಕುಣಿಯುವಂತೆ ಹೇಳಿದರು. ಕುಣಿಯುತ್ತಿದ್ದನು.

ಈ ಜಂಜಾಟದಲ್ಲಿ ಓದು ಬಿಟ್ಟುಹೋಯಿತು. ಅಭಿನಯವೂ ಹತ್ತಲಿಲ್ಲ. ಹೀಗಾಗಿ ಅಂಡಲೆಯುತ್ತಿದ್ದನು.

ಯೌವನದಲ್ಲಿ ಕಾಲಿಡುತ್ತಿದ್ದ ಹಾಗೆಯೇ ಮಂಜುಳೆಯು ಕಣ್ಣಿಗೆ ಬಿದ್ದಳು. ಅವಳಲ್ಲಿ ಮನಸ್ಸು ಆಸಕ್ತವಾಯಿತು. ಪ್ರೇಮವೆಂಬುವೇನೆಂದು ಅರಿಯದೇನೇ ತಾನವಳನ್ನು ಪ್ರೀತಿಸುತ್ತಿದ್ದೇನೆಂದುಕೊಂಡನು. ಅವಳನ್ನು ತಾನು ಪಡೆಯುವುದು ಸಂಭವವೇ ಅಸಂಭವವೇ ಎಂಬುದು ಕೂಡಾ ತೋರಲಿಲ್ಲ. ಮನಸ್ಸು ಬೇಕು ಎಂದಿತು. ಅವನು "ಅವಳು ಬೇಕು" ಎಂದುಕೊಂಡನು.

ಮುಂದೆ ನಡೆದ ಘಟನೆಯಿಂದ ಅದೂ ಕತ್ತರಿಸಿ ಹೋಯಿತು. ಆದರೂ ಮನಸ್ಸಿನಿಂದ ಮಂಜುಳೆಯು ಇನ್ನೂ ಮಾಯವಾಗಿಲ್ಲ.

ಪ್ರೇಮವು ಅವನಿಗೆ ಅವ್ಯಕ್ತವಾಗಿತ್ತು. ಆದರೂ ತಾನು ಪ್ರೇಮಿಸಿದುದರಲ್ಲಿ ಅವನು ಕೃತಕಾರ್ಯನಾಗಲಿಲ್ಲ. ಈಗಾಗಲೇ ಕೆಲವು ಮಂದಿ ಹೆಂಗಸರು ಅವನ ಜೀವನದಲ್ಲಿ ಬಂದು ಹೋಗಿದ್ದರು. ಅವರಾರನ್ನೂ ಅವನು ಬಯಸಿರಲಿಲ್ಲ.

ಅವರು ಬಂದರು. ಏನಾಗಬೇಕೋ ಅದು ಆಗಿ ಹೋಗಿದ್ದಿತು.

ಮೊದಲು ಶ್ಯಾಮಲೆ. ಆಮೇಲೆ ಅರಸುರತ್ನ. ಅನಂತರ ಮಾನಾ. ಕಡೆಯದಾಗಿ ವರದೆ.

ಈ ನಾಲ್ಕು ಮಂದಿ ಹೆಂಗಸರೂ ಅವನ ಜೀವನದಲ್ಲಿ ಬಂದರು. ಅವರನ್ನು ಮೆಟ್ಟಿಲುಗಳಂತೆ ಉಪಯೋಗಿಸಿಕೊಂಡ ಹತ್ತಿ ಮೇಲೆ ಬಂದಿದ್ದಾನೆ.

ಅವರು ತನ್ನನ್ನು ಉಪಯೋಗಿಸಿಕೊಳ್ಳಲಿಲ್ಲವೇನು ? ಉಪಯೋಗಿಸಿ ಕೊಂಡಿದ್ದಾರೆ.

ಅವರು ಅವನನ್ನು ಒಂದು ವಿಧವಾಗಿ ಉಪಯೋಗಿಸಿದರು. ಅವನು ಅವರನ್ನು ಮತ್ತೊಂದು ವಿಧವಾಗಿ ಉಪಯೋಗಿಸಿಕೊಂಡನು. ಅವರು ತಮಗೆ ಬೇಕಾದುದನ್ನು ಪಡೆದುಕೊಂಡರು. ಇವನು ತನಗೆ ಬೇಕಾದು ದನ್ನು ತೆಗೆದುಕೊಂಡನು.

ಅದರಲ್ಲಿ ಸರಿತಪ್ಪುಗಳೇನೂ ಅವನಿಗೆ ಕಂಡುಬರಲಿಲ್ಲ. ಅವನಾಗಿ ಯಾರ ಬಳಿಗೂ ಹೋಗಲಿಲ್ಲ. ಅವರಾಗಿ ಅವನ ಬಳಿಗೆ ಬಂದಿದ್ದರು. ಯಾರಾದರೂ ತಪ್ಪು ಎನ್ನುವುದಾದರೆ ಅವನದಂತೂ ತಪ್ಪಿಲ್ಲ.

ಯಾವುದು ಹೇಗಾದರೂ ಗಾಜಿನ ಗೋಲಿಯು ಬಲು ದೂರ ಬಂದಿದೆ.

ಅವನೊಬ್ಬ ದೊಡ್ಡ ನಟನಾಗಿದ್ದಾನೆ. ತ್ರಿಭಾಷಾ ಚಿತ್ರದಲ್ಲಿ ಪ್ರಧಾನ ಪಾತ್ರವನ್ನು ವಹಿಸಲು ರೈಲು ಅವನನ್ನು ಮದರಾಸಿಗೆ ಕೊಂಡು ಹೋಗು ತ್ತಿದೆ. ಅಲ್ಲಿ ಹೊಸ ಜೀವನ. ಹೊಸ ಮನುಷ್ಯರು. ಯಾವು ಯಾವುದು ಹೇಗೆ ಹೇಗೆ ಆಗುತ್ತದೆಯೋ !

ಆದರೆ—ಆದರೆ ಈಗ ಇಷ್ಟು ದಿನಗಳಾದ ನಂತರ ಅವನಿಗೊಂದು ಗುರಿಯು ಕಂಡಿದೆ. ಜೀವನದಲ್ಲಿ ಒಂದು ಉದ್ದೇಶವು ಕಂಡಿದೆ.

ಈಗ ನಟನಾಗುವ ಅವಕಾಶವು ಸಿಕ್ಕಿದೆ. ಅದನ್ನು ಪೂರ್ಣವಾಗಿ ಉಪಯೋಗಿಸಿಕೊಂಡು ಧನವನ್ನೂ, ಕೀರ್ತಿಯನ್ನೂ ಸಂಪಾದಿಸಬೇಕು. ಈ ಕಾರ್ಯವನ್ನು ಸಾಧಿಸಿ ಏನಾದರೂ ಮಾಡಿ ಮಂಜುಳೆಯನ್ನು ಪಡೆಯ ಬೇಕು.

ಮಂಜುಳೆಯು ಇನ್ನೂ ಅವನ ಮನದನ್ನೆಯಾಗಿಯೇ ಇದ್ದಳು. ಅವಳನ್ನು ಪಡೆಯುವುದು ಜೀವನದ ಆಶೆಯಾಗಿ ಉಳಿದೇ ಇದ್ದಿತು.

ಹೀಗೆ ಆಲೋಚನಾ ಸಾಗರದಲ್ಲಿ ಮುಳುಗಿ ಏಳುತ್ತಿದ್ದಾಗ ಅವನಿಗೆ ಯಾವಾಗಲೋ ನಿದ್ದೆಯು ಬಂದುಬಿಟ್ಟಿತು.

ಗಾಡಿಯು ಸೆಂಟ್ರಲ್ ಸ್ಟೇಷನ್ನಿಗೆ ಬರುವ ವೇಳೆಗೆ ಚೆನ್ನಾಗಿ ಬೆಳಕಾ ಗಿದ್ದಿತು.

ಅನಿಲಕುಮಾರನು ಗಾಡಿಯನ್ನು ಇಳಿಯುವ ಮೊದಲೇ ಮೂರು ಮಂದಿ ಬಂದು ಅವನನ್ನು ಎದುರುಗೊಂಡರು. ಅವರಲ್ಲಿ ಒಬ್ಬರು ಮೊದಲೇ ಅನಿಲನಿಗೆ ಪರಿಚಯವಿದ್ದ ವೆಂಕಪ್ಪಯ್ಯನವರು.

ವೆಂಕಪ್ಪಯ್ಯನವರು ತನ್ನೊಡನೆ ಬಂದಿದ್ದವರಿಬ್ಬರನ್ನೂ ಪರಿಚಯ ಮಾಡಿಸುತ್ತಾ "ಇವರು ರಾಜರತ್ನಂ ಚೆಟ್ಟಿಯಾರರ ಮ್ಯಾನೇಜರು. ಮಿ|| ನಾರಾಯಣ್ ಎಂದು. ಇವರು ಮಿ|| ಸುಂದರ್. ನಮ್ಮ ಚಿತ್ರಪ್ರಿಯ ಪತ್ರಿಕೆಯ ಪ್ರತಿನಿಧಿಗಳು. ನಿಮ್ಮ ಸ್ನ್ಯಾಪ್‌ಷಾಟ್ ತೆಗೆದುಕೊಳ್ಳಲು ಬಂದಿದ್ದಾರೆ" ಎಂದು ಹೇಳಿದನು.

ಅನಿಲಕುಮಾರನು ಅವರಿಬ್ಬರಿಗೂ ಹಸ್ತಲಾಘವನ್ನು ಕೊಟ್ಟು ಆದರ ದಿಂದ ಮಾತನಾಡಿಸಿದನು.

ಅನಿಲನು ರೈಲಿನಿಂದ ಇಳಿಯುತ್ತಿದ್ದ ಹಾಗೆಯೇ ಸುಂದರನು ಫೋಟೋ ತೆಗೆದುಕೊಂಡನು.

ಅನಂತರ ನಾಲ್ಕು ಮಂದಿಯೂ ಟ್ಯಾಕ್ಸಿಯಲ್ಲಿ ಕುಳಿತುಕೊಂಡು ಹೊರಟರು.

ಸ್ಟೇಷನ್ ಆವರಣವನ್ನು ಬಿಟ್ಟು ಹೋದನಂತರ ವೆಂಕಪ್ಪಯ್ಯ ನವರು "ಮಿ|| ಅನಿಲ್‌ಕುಮಾರ್. ನಿಮಗೆ ಹೋಟೆಲ್ ವಿಹಾರದಲ್ಲಿ ಮೂರು ಕೋಣೆಗಳನ್ನು ರಿಜರ್ವ್ ಮಾಡಿದೆ. ಬಹುಶಃ ನಿಮಗೆ ಒಪ್ಪಿಗೆ ಯಾಗಬಹುದೆಂದು ಕೊಂಡಿದ್ದೇನೆ. ವಾರ ಹತ್ತು ದಿನಗಳಲ್ಲಿ ನಿಮಗೆ ಸೊಗ ಸಾದುದೊಂದು ಸಣ್ಣ ಬಂಗಲೆಯನ್ನು ಏರ್ಪಾಡು ಮಾಡಿಕೊಡುತ್ತೇವೆ" ಎಂದು ಹೇಳಿದರು.

ದೊಡ್ಡ ಪುಟ್ಟ ಮರಗಳಿಂದ ಆವೃತ್ತವಾದ ವಿಶಾಲವಾದ ಕಾಂಪೌಂಡಿ ನೊಳಗೆ ಕಾರು ಹೋಯಿತು. ಹೋಟಲಿನ ದೊಡ್ಡ ಕಟ್ಟಡದ ಪಕ್ಕದಲ್ಲಿ ಉದ್ಯಾನ ವನದ ನಡುವೆ ಸಣ್ಣದಾದ ಎಂಟು ಹತ್ತು ಮನೆಗಳಿದ್ದವು. ಅವು ಗಳಲ್ಲಿ ಒಂದರ ಮುಂದೆ ಕಾರು ಹೋಗಿ ನಿಂತಿತು.

ಅನಿಲನು ಇಳಿದನು. ವೆಂಕಪ್ಪಯ್ಯನವರು ಒಳಗೆ ಕರೆದುಕೊಂಡು ಹೋಗಿ ತೋರಿಸಿದರು.

ಮುಂದುಗಡೆ ಸಣ್ಣ ವರಾಂಡ. ಅದಕ್ಕೆ ಎಕ್ಸ್‌ಪಾಂಡೆಡ್ ಮೆಟಲ್

ಹಾಕಿದೆ. ಹೊರಗಿನಿಂದ ನೋಡಲಾಗದಂತೆ ಅದಕ್ಕೆಲ್ಲಾ ಬಟ್ಟೆಯ ಪರದೆಗಳನ್ನು ಇಳಿ ಬಿಟ್ಟಿದೆ. ನಾಲ್ಕಾರು ಬೆತ್ತದ ಕುರ್ಚಿಗಳನ್ನು ಹಾಕಿ ನಡುವೆ ಸಣ್ಣ ಪುಷ್ಪದಾನಿಯಲ್ಲಿ ಅರಳಿದ ಹೂಗಳನ್ನು ಇಡಲಾಗಿದೆ. ಒಳಗೆ ಹೋಗುತ್ತಲೇ ಉಣ್ಣೆಯ ರತ್ನಕಂಬಳಿಯ ಮೇಲೆ ಸೋಫಾ ಸೆಟ್ಟಿದೆ. ಬಲಗಡೆ ಒಂದು ಕೊಠಡಿ. ಅಲ್ಲಿ ಮೇಜು ಕುರ್ಚಿಗಳನ್ನು ಹಾಕಿ ಆಫೀಸು ರೂಂ ಮಾಡಲಾಗಿದೆ. ಎಡಗಡೆಯ ಕೊಠಡಿಯೇ ಶಯನಗೃಹ. ಅದು ಎಲ್ಲ ಕೋಣೆಗಳಿಗಿಂತಲೂ ದೊಡ್ಡದು. ಅಲ್ಲಿಗೂ ರತ್ನಕಂಬಳಿಯನ್ನು ಹಾಸಿ ಒಂದು ಕಡೆ ದೊಡ್ಡ ಮಂಚವನ್ನು ಇಟ್ಟು ಅದರ ಮೇಲೆ ಮೆತ್ತನೆಯ ಹಾಸಿಗೆಯನ್ನು ಹಾಸಿದೆ. ಮಂಚದ ಮಗ್ಗುಲಲ್ಲಿ ಸಣ್ಣದೊಂದು ಟೀಪಾಯಿಯೂ, ಅದರ ಎದುರಿಗೆ ಸ್ಟ್ಯಾಂಡಿನಲ್ಲಿ ಅಳವಡಿಸಿದ್ದ ದೊಡ್ಡ ಗುಂಡು ಕನ್ನಡಿಯೂ ಇವೆ.

ಶಯನ ಗೃಹಕ್ಕೆ ಸೇರಿದಂತೆ ಎರಡು ಕೋಣೆಗಳು. ಅವರಲ್ಲಿ ಒಂದು ಸ್ನಾನಗೃಹ. ಮತ್ತೊಂದು ಕೋಣೆಯಲ್ಲಿ ಬಟ್ಟೆಗಳನ್ನು ಹಾಕುವ ಸ್ಟ್ಯಾಂಡೂ, ಶೃಂಗರಿಸಿಕೊಳ್ಳಲು ಕನ್ನಡಿಯನ್ನು ಒಳಗೊಂಡ ಮೇಜುವೂ ಇದ್ದುವು.

ಇವೊಂದೂ ಅನಿಲನಿಗೆ ಹೊಸದಾಗಿರಲಿಲ್ಲ. ಆದರೂ ಅವೆಲ್ಲವೂ ಅವನಿಗೆ ಒಪ್ಪಿದುವು.

ನೋಡಿಕೊಂಡು ಬಂದು ಎಲ್ಲರೂ ಸೋಫಾದ ಮೇಲೆ ಕುಳಿತುಕೊಂಡರು. ಅಷ್ಟು ಹೊತ್ತಿಗೆ ಹೋಟಲಿನ ಮಾಣಿಯು ಕಾಫಿ ತಂದಿಟ್ಟನು.

ಕಾಫಿಯನ್ನು ತೆಗೆದುಕೊಂಡ ನಂತರ ವೆಂಕಪ್ಪಯ್ಯನವರು "ಅನಿಲ ಕುಮಾರ್. ಪ್ರಯಾಣದಿಂದ ನಿಮಗೆ ಆಯಾಸವಾಗಿರಬಹುದು. ಈ ದಿನವೆಲ್ಲಾ ವಿಶ್ರಮಿಸಿಕೊಳ್ಳಿರಿ. ನಾಳೆಯ ದಿನ ಸ್ಟುಡಿಯೋದಿಂದ ಕಾರು ಕಳಿಸುತ್ತಾರೆ. ತಾವಲ್ಲಿಗೆ ಬನ್ನಿರಿ. ನಾನೂ ಅಲ್ಲಿರುತ್ತೇನೆ. ತಾವು ಸ್ಟುಡಿಯೋ ನೋಡಿಕೊಂಡು, ಅಲ್ಲಿರುವವರನ್ನು ಪರಿಚಯ ಮಾಡಿಕೊಂಡು ಬರುವಿರಂತೆ" ಎಂದು ಹೇಳಿದರು.

ಸ್ಟುಡಿಯೋಗೆ ಹೋಗಲು ಅನಿಲನು ಬೆಳಗಾಗ ಅಷ್ಟು ಹೊತ್ತಿಗೇ ಸಿದ್ಧನಾದನು. ಆದರೆ ಎಷ್ಟು ಹೊತ್ತು ಕಾದರೂ ಕಾರು ಬರಲಿಲ್ಲ

ಸುಮಾರು ಹತ್ತು ಗಂಟೆಯ ವೇಳೆಗೆ ಡ್ರೈವರು ಬಂದು ಸಲಾಂ ಮಾಡಿ ಕಾರು ಬಂದಿರುವುದಾಗಿ ಹೇಳಿದನು.

ನಿದಾನವಾದುದರಿಂದ ಸ್ವಲ್ಪ ಅಸಮಾಧಾನವಾಗಿದ್ದರೂ ಕಡೆಗೆ ಕಾರು ಬಂದುದರಿಂದ ಸಂತೋಷವಾಯಿತು. ಅದರಲ್ಲಿ ಕುಳಿತುಕೊಂಡು ಹೋದನು.

ದೊಡ್ಡ ಕಾಂಪೌಂಡಿನಲ್ಲಿ ದೊಡ್ಡದೊಂದು ಬಂಗಲೆಯೂ ಅದರ ಹಿಂದೆ ಮೂರು ನಾಲ್ಕು ಜಿಂಕುಷೀಟಿನ ದೊಡ್ಡ ಷೆಡ್ಡುಗಳೂ ಇದ್ದುವು.

ಅದೇ ರಾಜರತ್ನಂ ಚೆಟ್ಟಿಯಾರರ ಜೀವ್ನ ಸ್ಟುಡಿಯೋಸ್.

ವೆಂಕಪ್ಪಯ್ಯನವರೇ ಬಂದು ಎದುರುಗೊಂಡರು. ಒಳಗೆ ಕರೆದು ಕೊಂಡು ಹೋಗಿ ಕುಳ್ಳಿರಿಸಿ, ಕೈಗೊಂದು ಪತ್ರಿಕೆಯನ್ನು ತೆಗೆದು ಕೊಟ್ಟರು.

ಅದರಲ್ಲಿ ಅನಿಲನು ರೈಲಿನಿಂದ ಇಳಿಯುತ್ತಿರುವ ಚಿತ್ರವನ್ನು ಮುದ್ರಿಸಿ ಅದರ ಕೆಳಗೆ " ಉದಯಿಸುತ್ತಿರುವ ತ್ರಿಭಾಷಾ ತಾರೆ " ಎಂದು ಬರೆಯಲಾಗಿತ್ತು.

ಸಂಪಾದಕರು ನಗುತ್ತಾ " ಅದು ನಿನ್ನೆಯ ದಿನ ತೆಗೆದುಕೊಂಡ ಫೋಟೋ " ಎಂದು ಹೇಳಿದರು.

ಅದನ್ನು ನೋಡಿ ಅನಿಲನ ಮನಸ್ಸಿಗೆಷ್ಟೋ ಆಪ್ಯಾಯಮಾನವಾಯಿತು.

ವೆಂಕಪ್ಪಯ್ಯನವರು ಯಾವುದಕ್ಕೋ ಕಾಯುತ್ತಿರುವಂತಿತ್ತು.

ಅಷ್ಟರಲ್ಲಿ ಸೇವಕನೊಬ್ಬನು ಬಂದು " ಚೆಟ್ಟಿಯಾರರು ಯಾರೊಂದಿಗೋ ಮಾತನಾಡುತ್ತಿದ್ದಾರೆ. ಬರುವುದು ಇನ್ನೂ ಕಾಲು ಗಂಟೆಯಾಗಬಹುದು " ಎಂದು ಹೇಳಿದನು.

" ಅವರು ಬರುವ ವೇಳೆಗೆ ನಾವೊಂದು ರೌಂಡ್ ಹೋಗಿ ಬರೋಣ, ಬನ್ನಿರಿ " ಎಂದು ವೆಂಕಪ್ಪಯ್ಯನವರು ಕರೆದುಕೊಂಡು ಹೋದರು.

ಅವರು ಹೋದ ಕಡೆ ಷೂಟಿಂಗ್ ನಡೆಯುತ್ತಿತ್ತು. ಬಾಗಿಲಿದ್ದ ಕಡೆ ಜನಸಮೂಹವು ಸೇರಿ ನೋಡುತ್ತಾ ನಿಂತಿದ್ದಿತು.

ಎದುರುಗಡೆ ಒಂದು ಜಮಖಾನವನ್ನು ಹಾಕಿ ಸೋಫಾ ಸೆಟ್ಟು ಹಾಕಿದ್ದರು. ಅದರ ಪಕ್ಕದಲ್ಲಿ ಒಂದು ಮಹಡಿ ಮೆಟ್ಟಿಲು. ಮೇಲೆ ಹತ್ತಿ ಹೋದರೆ

ಕೈಸಾಲೆಯಂತೆ ಮಾಡಿ ಬಾಗಿಲು ಕಿಟಕಿಗಳನ್ನು ಅಳವಡಿಸಲಾಗಿತ್ತು. ನಾಲ್ಕೈದು ಭಾವಚಿತ್ರಗಳನ್ನು ತೂಗು ಹಾಕಲಾಗಿತ್ತು. ಕೆಳಗಡೆಯೂ ಹಾಗೆಯೇ ಬಾಗಿಲು, ಕಿಟಕಿಗಳು, ಪರಗಳು. ಮೇಲೆ ಮೊಗಟ ಉಟ್ಟು ಕೊಂಡು, ಬಣ್ಣದ ಜುಬ್ಬಾ ಧರಿಸಿದ ಗಿರಿಜಾ ಮೀಸೆಯ ಸ್ಥೂಲಕಾಯನೂ ಅವನೊಂದಿಗೆ ಲುಂಗಿ ಸುತ್ತಿಕೊಂಡು ಪಟಿಂಗನಂತೆ ಕಂಡು ಬರುತ್ತಿದ್ದ ಕೃಶಾಂಗನೊಬ್ಬನೂ ಎಲ್ಲಿಯೋ ನೋಡುತ್ತಾ ನಿಂತಿದ್ದರು.

ಹತ್ತು ಹನ್ನೆರಡು ಸ್ಪಾಟ್ ಲೈಟುಗಳನ್ನು ಕೆಳಗಿಡಲಾಗಿತ್ತು. ಅಷ್ಟೇ ಲೈಟುಗಳನ್ನು ಮೇಲೆಯೂ ತೂಗು ಹಾಕಲಾಗಿತ್ತು. ಆ ಪ್ರದೇಶ ವೆಲ್ಲವೂ ಆ ಲೈಟುಗಳಿಂದಲೇ ತುಂಬಿದಂತೆ ಕಂಡು ಬರುತ್ತಿತ್ತು.

ಕೆಳಗಡೆ ಸೂಟು ಧರಿಸಿದ್ದ ತರುಣನೊಬ್ಬನು ಕೂಗುತ್ತಾ ಕಿರು ಚುತ್ತಾ ಓಡಿಯಾಡುತ್ತಿದ್ದನು. ಐವತ್ತು ವರ್ಷ ಮೀರಿದ ವ್ಯಕ್ತಿಯು ಮೂಗಿನ ಮೇಲಿದ್ದ ಕನ್ನಡಕದಿಂದ ಕೈಯಲ್ಲಿದ್ದ ಪುಸ್ತಕವನ್ನು ಆಡಿಗ ಡಿಗೆ ನೋಡುತ್ತಾ ಆ ತರುಣನಿಗೆ ಸಲಹೆ ಕೊಡುತ್ತಿದ್ದನು.

ತರುಣನು ಕೂಗು ಹಾಕಿದಂತೆಲ್ಲಾ ಅಲ್ಲಿದ್ದ ಹತ್ತು ಹದಿನೈದು ಮಂದಿ ಹುಡುಗರು ಸಡಗರದಿಂದ ಓಡಿಯಾಡುತ್ತಿದ್ದರು. ಕೆಲವರು ದೊಡ್ಡ ದೊಡ್ಡ ಸ್ಟ್ಯಾಲುಗಳನ್ನು ಅತ್ತಲಿಂದ ಇತ್ತಲೂ ಇತ್ತಲಿಂದತ್ತಲೂ ಜರುಗಿಸಿ ಸ್ಪಾಟ್ ಲೈಟುಗಳನ್ನು ಸರಿಪಡಿಸುತ್ತಿದ್ದರು. ಮತ್ತೆ ಕೆಲವರು ಏಣಿಗಳನ್ನು ಹತ್ತಿ ಮೇಲಿನ ದೀಪಗಳನ್ನು ತಿರುಗಿಸಿಡುತ್ತಿದ್ದರು. ಒಂದೊಂದು ದೀಪವನ್ನೂ ಹಚ್ಚಿ ಆರಿಸಿ ನೋಡಲಾಗುತ್ತಿದ್ದಿತು. ಎಲ್ಲ ದೀಪಗಳನ್ನೂ ಎರಡು ಬಾರಿ ಹಚ್ಚಿ ಆರಿಸಿ ತೃಪ್ತಿಗೊಂಡರು.

ಇದಿಷ್ಟೂ ಆದನಂತರ ಕೃತಕ ಕೈಸಾಲೆಯ ಮೇಲೆ ನಿಂತಿದ್ದ ಸ್ಥೂಲ ಕಾಯನು "ತಮಿಳಿನಲ್ಲಿ ನಾನು ಇಳಿದು ಬರಲೇ?" ಎಂದು ಕೇಳಿದನು.

ಕನ್ನಡಕವನ್ನು ಧರಿಸಿ ಕ್ಯಾಮರಾ ಮುಂದೆ ನಿಂತಿದ್ದ ವ್ಯಕ್ತಿಯೊ ಬ್ಬನು "ಲೈಟ್ಸ್" ಎಂದು ಕೂಗಿಕೊಂಡನು

ಒಮ್ಮೆಗೇ ಎಲ್ಲ ದೀಪಗಳೂ ಹತ್ತಿಕೊಂಡವು. ಕಣ್ಣು ಕೋರೈಸು ವಂತೆ ಪ್ರಕಾಶವು ಜ್ವಲಿಸುತ್ತಿತ್ತು. ಯಾರೋ ಶಾಲೆಯಲ್ಲಿ ಬಾರಿಸುವ ಗಂಟೆಯಂತೆ ಬೆಲ್ ಮಾಡಿದರು.

ಹುಡುಗನೊಬ್ಬನು ಸೀಮೆಸುಣ್ಣದಿಂದ ಯಾವುದೋ ಅಂಕಿಗಳು ಬರೆದಿದ್ದ ಕರಿಯ ಹಲಗೆಯನ್ನು ತಂದು ಹಿಡಿದನು.

ಕ್ಯಾಮರಾವರ್ಕ್ಯರ್ ಚಿತ್ರವನ್ನು ತೆಗೆಯಲಾರಂಭಿಸುತ್ತಲೇ ಹುಡುಗನು ಹಲಗೆಯನ್ನು ತೆಗೆದನು.

ಅನಂತರ ಕೈಸಾಲೆಯ ಮೇಲಿದ್ದ ಸ್ಥೂಲ ವ್ಯಕ್ತಿಯು ಎಡಗೈಯಿಂದ ಪಂಚೆಯ ನೆರಿಗೆಯನ್ನು ಎತ್ತಿ ಹಿಡಿದುಕೊಂಡು, ಬಲಗೈಯಲ್ಲಿ ವಿಸಾಶಿಯನ್ನು ಹುರಿ ಮಾಡುತ್ತಾ ನಿಧಾನವಾಗಿ ಕೆಳಗಿಳಿಯುತ್ತಿದ್ದನು. ಕೃಶಾಂಗನಾದ ವ್ಯಕ್ತಿಗೆ ಬಹಳ ಸಂತೋಷವಾಗಿತ್ತೆಂದು ಕಂಡುಬರುತ್ತಿತ್ತು. ಅವನು ದಟ್ಟಿಯ ಕೆಳಭಾಗವನ್ನು ಮೇಲೆತ್ತಿ ಸೊಂಟಕ್ಕೆ ಸುತ್ತಿ, ಸೊಂಟಕ್ಕೆ ಸುತ್ತಿದ್ದ ಅಂಗವಸ್ತ್ರವನ್ನು ತೆಗೆದು ತಲೆಗೆ ಸುತ್ತಿಕೊಳ್ಳುತ್ತಾ ಹಿಂದೆಯೇ ಇಳಿದು ಬಂದನು.

ಇಬ್ಬರೂ ಕೆಳಗಿಳಿದ ನಂತರ ಸ್ಥೂಲಕಾಯನು ಹೋಗಿ ಸೋಫಾದ ತುಂಬಾ ಕುಳಿತುಕೊಂಡನು. ಅವನೊಂದಿಗೆ ಇಳಿದು ಬಂದ ವ್ಯಕ್ತಿಯು ನಮ್ರವಾಗಿ ಕೈ ಕಟ್ಟಿಕೊಂಡು ನಿಂತನು.

ಡೈರೆಕ್ಟರನು "ಕಟ್" ಎಂದು ಕೂಗಿದನು

ಕ್ಯಾಮರಾ ಸ್ತಬ್ಧವಾಯಿತು. ಬೆಲ್ ಹೊಡೆದರು. ದೀಪಗಳಾರಿದುವು. ಯಾವನೋ ಒಬ್ಬನು ಬಂದು ಕೃಶಾಂಗನು ತಲೆಗೆ ಕಟ್ಟಿಕೊಂಡಿದ್ದ ಅಂಗವಸ್ತ್ರವನ್ನು ಕಿತ್ತುಕೊಂಡು ಹೊರಟುಹೋದನು.

ವೆಂಕಪ್ಪಯ್ಯನವರು ಅನಿಲನನ್ನು ಅಲ್ಲಿಂದ ಹೊರಗೆ ಕರೆದುಕೊಂಡು ಬಂದರು.

ಮೊದಲಿನಿಂದಲೂ ಫಿಲಿಂ ನಟನಾಗಬೇಕೆಂದಿದ್ದ ಅನಿಲಕುಮಾರನು ಫಿಲಿಂ ಸಂಬಂಧವಾದ ಪುಸ್ತಕಗಳನ್ನು ಓದಿದ್ದನು. ಪುಡೌಕಿನ ಫಿಲಿಂ ಅಂಡ್ ಫಿಲಿಂ ಕ್ರಾಫ್ಟ್, ಆರ್ನ ಹೀಂನ ಫಿಲಿಂ, ಸ್ಟಾಟಿಸ್ ವುಡ್‌ನ ಗ್ರಾಮರ್ ಆಫ್ ಫಿಲಿಮ್ಸ್ ಇವುಗಳನ್ನು ಅನೇಕ ಬಾರಿ ಓದಿಕೊಂಡಿದ್ದನು.

ಸ್ಟುಡಿಯೋದಲ್ಲಿ ತಾನು ನೋಡಿದ ದೃಶ್ಯವನ್ನು ಕುರಿತು ಅನಿಲನು

ಪ್ರಶ್ನೆಮಾಡಲಿಲ್ಲ. ತನಗೆ ಅರ್ಥವಾದಷ್ಟು ತಿಳಿದುಕೊಂಡನು. ಮಿಕ್ಕದರ ವಿಷಯದಲ್ಲಿ ನಿರ್ಲಕ್ಷ್ಯವನ್ನು ತಾಳಿದನು.

ಅನಿಲನನ್ನು ವೆಂಕಪ್ಪಯ್ಯನವರು ಸ್ಟುಡಿಯೋದ ಆಫೀಸ್ ರೂಂಗೆ ಕರೆದುಕೊಂಡು ಹೋದಾಗ ರಾಜರತ್ನಂ ಚೆಟ್ಟಿಯಾರು ಮ್ಯಾನೇಜರಾದ ನಾರಾಯಣರೊಡನೆ ಮಾತನಾಡುತ್ತಾ ಕುಳಿತಿದ್ದರು.

ಪರಿಚಯವಾಗದೇ ಇದ್ದರೂ ಬಹಳ ದಿನಗಳ ಸ್ನೇಹವಿದ್ದಂತೆಯೇ ರಾಜರತ್ನಂ ಚೆಟ್ಟಿಯಾರರು ಅನಿಲನನ್ನು ಎದುರುಗೊಂಡು ಮಾತನಾಡಿದರು.

"ತಾವು ಮದರಾಸಿಗೆ ಬಂದುದು ನಮಗೆ ಬಹಳ ಸಂತೋಷ. ನಿಮಗೆ ಉತ್ತಮವಾದ ಭವಿಷ್ಯವಿದೆ" ಎಂದು ಹೇಳಿದರು.

ಅದಕ್ಕೆ ಪ್ರತ್ಯುತ್ತರವಾಗಿ ಅನಿಲನು ಮುಗುಳುನಗೆಯನ್ನು ನಕ್ಕನು.

ಮ್ಯಾನೇಜರು ಕಾಗದ ಪತ್ರಗಳನ್ನು ತೆಗೆದಿಟ್ಟು ಅನಿಲನ ರುಜುವನ್ನು ತೆಗೆದುಕೊಂಡರು.

ಸಾಂಪ್ರದಾಯಿಕವಾದ ಕಾರ್ಯಗಳು ಮುಗಿಯುವ ವೇಳೆಗೆ ಸ್ಟುಡಿಯೋದಲ್ಲಿ ಮರದ ಕೆಳಗೆ ಟೀಗೆ ಏರ್ಪಾಟು ಮಾಡಿದ್ದರು.

ಅಲ್ಲಿ ಅನೇಕ ಮಂದಿ ಬಂದು ಸೇರಿದ್ದರು.

ಜೀವನ್ ಸ್ಟುಡಿಯೋಸ್ ಮದರಾಸಿನಲ್ಲಿ ದೊಡ್ಡ ಸ್ಟುಡಿಯೋ. ಅಲ್ಲಿ ಅನೇಕ ಚಿತ್ರಗಳು ಏಕಕಾಲದಲ್ಲಿ ಸಿದ್ಧವಾಗುತ್ತಿದ್ದುವು. ಅಲ್ಲಿದ್ದ ಅನೇಕ ಮಂದಿ ನಿರ್ಮಾತೃಗಳೂ, ನಿರ್ದೇಶಕರೂ, ಲೇಖಕರೂ, ಪ್ರಮುಖ ನಟನಟಿಯರೂ ಟೀ ತೆಗೆದುಕೊಳ್ಳಲು ಬಂದು ಸೇರಿದರು.

ಟೀ ತೆಗೆದುಕೊಳ್ಳುತ್ತಿದ್ದಾಗ ವೆಂಕಪ್ಪಯ್ಯನವರು ಅನಿಲನಿಗೆ ಅಲ್ಲಿದ್ದವರ ಪರಿಚಯವನ್ನೆಲ್ಲಾ ಮಾಡಿಸಿದರು. ರಜತ ಪರದೆಯ ಮೇಲೆ ನೋಡಿ ಅವನು ಮೆಚ್ಚಿಕೊಂಡಿದ್ದಂತಹ ಎಷ್ಟೋ ನಟನಟಿಯರು ಅವನ ಮುಂದೆಯೇ ಕುಳಿತಿದ್ದರು.

ಐದಾರು ನಿಮಿಷಗಳೊಳಗೆ ಆ ನಟನಟಿಯರು ಅವನಿಗೆ ಸ್ನೇಹಿತರಾದರು. ಮೈಸೂರು ದೇಶವೆಂದರೆ ಅವರು ನಂದನವನವೆಂದು ಭಾವಿಸುತ್ತಿದ್ದರೆಂದು ಕಂಡುಬರುತ್ತದೆ. ಮೈಸೂರನ್ನು ಕಾಣದವರು ಮೈಸೂರಿನ ಅರ

ಮನೆ, ಉದ್ಯಾನ ವನಗಳಿಂದಲೇ ಆವೃತ್ತವಾಗಿರುವ ನಗರ, ಬೃಂದಾವನ ಮುಂತಾದ ವಿಷಯಗಳನ್ನು ಕೇಳಿದರು. ಬೆಂಗಳೂರನ್ನು ನೋಡಿದವರು ಅಲ್ಲಿನ ಹವಾಗುಣವನ್ನೂ ಅಲ್ಲಿನ ಜೀವನವನ್ನೂ ಕುರಿತು ಪ್ರಶಂಸೆ ಮಾಡಿದರು. ಒಬ್ಬ ಆಂಧ್ರ ತಾರೆಯು ವರದಾದೇವಿಯನ್ನು ಕುರಿತು ಸೂಕ್ಷ್ಮವಾಗಿ ಒಂದೆರಡು ಮಾತುಗಳನ್ನು ಕೇಳಿದಳು.

ಅವಳ ಮಾತು ಕೇಳಿದ ಅನಿಲನಿಗೆ ವರದೆಯೊಡನೆ ತನಗಿದ್ದ ಪ್ರಣಯ ಸಂಬಂಧವು ಈ ತಾರೆಯರ ಕಿವಿಗೂ ಬಿದ್ದಿದೆಯೇನೋ ಎಂದು ಸಂದೇಹ ವುಂಟಾಯಿತು.

ಇದಿಷ್ಟು ಲೋಕ ವ್ಯವಹಾರವೂ ಹತ್ತು ನಿಮಿಷಗಳಲ್ಲಿ ಪೂರೈಸಿತು.

ಆ ತಾರ ತಾರೆಯರೊಂದಿಗೆ ಕುಳಿತಿದ್ದಾಗ ಅನಿಲನಿಗೆ ಸ್ವಪ್ನ ನೋಡುತ್ತಿರುವ ಹಾಗಿತ್ತು. ಅವರ ಮುಖಗಳೆಲ್ಲವನ್ನೂ ನೋಡಿದ್ದುದರಿಂದ ಅವರುಗಳು ಪರಿಚಯಸ್ಥರಂತೆ ಕಂಡು ಬರುತ್ತಿದ್ದರು. ಆದರೂ ಅವರು ಹೊಸಬರಂತೆ ಕಂಡು ಬರುತ್ತಿದ್ದರು.

ಹೀಗೆ ಅನಿಲನು ತಾರ ತಾರೆಯರಲ್ಲಿ ಬೆರೆತುಹೋದನು.

೧೪

ವಾಸವದತ್ತಾ ಚಿತ್ರೀಕರಣದ ಏರ್ಪಾಟುಗಳು ಮೊದಲೇ ಆರಂಭವಾಗಿದ್ದುವು. ಅನಿಲನು ಮದರಾಸಿಗೆ ಬಂದ ನಂತರ ಅವು ಭರವಾಗಿ ನಡೆಯುತೊಡಗಿದ್ದವು.

ನಟನಟಿಯರಿಗೆಲ್ಲಾ ವಸ್ತ್ರಗಳು ಸಿದ್ಧವಾದುವು. ಇಂತ ಇಂತಹ ಪಾತ್ರಕ್ಕೆ ಇದು ಇದೇ ಭೂಷಣ ಮತ್ತು ಶೃಂಗಾರವೆಂದು ಇತ್ಯರ್ಥವಾದುವು. ಪ್ರಮುಖ ಪಾತ್ರಗಳಿಗೆ ವೇಷಭೂಷಣಗಳನ್ನು ಹಾಕಿ, ಸ್ಟಿಲ್ಸ್ ತೆಗೆದು ನೋಡಲಾಯಿತು.

ಜಗದೀಶ್‌ರವರು ಈ ಚಿತ್ರದ ಡೈರೆಕ್ಟರು. ಅನಿಲನು ಅವರನ್ನು ಹೊಂದಿಕೊಂಡನು. ಸಾಧ್ಯವಾದಷ್ಟು ಹೊತ್ತು ಅವರೊಂದಿಗಿರುತ್ತಿದ್ದನು. ಆಗೆಲ್ಲಾ ಅವರು ಹೊಸ ಚಿತ್ರದ ವಿಷಯವಾಗಿ ಮಾತುಕತೆಗಳನ್ನಾಡುತ್ತಿದ್ದರು.

ಅನಿಲನಿಗೆ ನಾಟಕದ ಅಭಿನಯವೂ, ಸಿನಿಮಾದ ಅಭಿನಯವೂ ಬೇರೆ ಬೇರೆ ಎಂಬ ಅಭಿಪ್ರಾಯವಿದ್ದಿತು. ತನ್ನ ಅಭಿನಯವು ಪರದೆಗೆ ಸರಿಹೋಗುತ್ತದೆಯೋ ಇಲ್ಲವೋ ಎಂಬ ಸಂದೇಹವು ಅವನಿಗೆ ಆಗಾಗ ಬರುತ್ತಿದ್ದಿತು.

ಬುದ್ಧಿವಂತರಾದ ಜಗದೀಶ್‌ರು ಅದನ್ನು ತಿಳಿದುಕೊಂಡು "ಅನಿಲಕುಮಾರ್. ಅದೆಲ್ಲವನ್ನೂ ನೀವು ಚಿಂತಿಸಬೇಡಿ. ನಾನು ಪ್ರತಿಯೊಂದು

ಭಾವ, ಪ್ರತಿಯೊಂದು ಭಂಗಿ, ಪ್ರತಿಯೊಂದು ಹೆಜ್ಜೆಯನ್ನೂ ಗಮನಿಸು ತ್ತೇನೆ. ಆದರೆ ಮಾತನಾಡುವಾಗ ಮಾತ್ರ ಸ್ವಲ್ಪ ಎಚ್ಚರವಾಗಿರಿ. ನಾಟಕ ದಂತೆ ನಾಲ್ಕಾಣೆಯ ಪ್ರಭುಗಳಿಗೆ ಕೇಳಿಸುವಂತೆ ಮಾತುಗಳನ್ನು ಕೂಗಿ ಹೇಳಬೇಕಾಗಿಲ್ಲ. ಇಲ್ಲಿರುವ ಮೈಕ್ರಾಫೋನ್ ಆ ಎಲ್ಲ ಕೆಲಸಗಳನ್ನು ಮಾಡು ತ್ತದೆ" ಎಂದವನಿಗೆ ಒಂದು ದಿನ ಹೇಳಿದರು.

ಚಿತ್ರಪ್ರಾರಂಭಿಸುವ ಮೊದಲು ಕೆಲವು ಬಾರಿ ರಿಹರ್ಸಲ್ಸ್ ನಡೆದುವು.

ಅನಂತರ ಒಂದು ಸುಮುಹೂರ್ತದಲ್ಲಿ ಷೂಟಿಂಗ್ ಆರಂಭವಾಯಿತು.

ಅಲ್ಲಿನ ಸ್ನೇಹಿತರು, ಅಲ್ಲಿನ ರೀತಿ ನೀತಿಗಳು, ಅಲ್ಲಿನ ಅಭಿನಯ ಇವು ಗಳೆಲ್ಲವೂ ಅನಿಲನಿಗೆ ಹೊಸದಾಗಿದ್ದುವು. ಆದರೆ ಅವನು ಜಗದೀಶನಿಗೆ ಬೇಕಾದವನಾಗಿದ್ದುದರಿಂದಲೂ, ಬುದ್ಧಿವಂತನಾಗಿದ್ದುದರಿಂದಲೂ ಅಳವಡಿ ಸಿಕೊಳ್ಳಲು ಬಹಳ ಕಾಲವು ಬೇಕಾಗಲಿಲ್ಲ.

ಮೊದಲನೆಯ ಬಾರಿ ಅವನು ಸ್ಟುಡಿಯೋಗೆ ಹೋಗಿದ್ದಾಗಲೂ, ಅನಂ ತರ ಐದಾರು ಬಾರಿ ಹೋದಾಗಲೂ ಅಲ್ಲಿ ನಟಿಸುವ ತಾರತಾರೆಯರ ಸ್ಥಿತಿ ಗತಿಗಳನ್ನು ನೋಡಿ ತನಗೂ ಹೇಗಾಗುವುದೋ ಎಂದು ಚಿಂತಿಸುತ್ತಿದ್ದನು. ನಟನಟಿಯರುಗಳ ದೈನ್ಯವೃತ್ತಿಯನ್ನು ನೋಡಿ ಹೊರಗೆ ಮಿಣುಗುಟ್ಟಿದರೂ ಇದೆಂತಹ ಹಾಳು ಜೀವನವೆಂದು ಕೊಳ್ಳುತ್ತಿದ್ದನು. ಹೆವರಿದವರ ಮೇಲೆ ಬೀಳುವ ಕಪ್ಪೆಗಳಂತೆ ಪ್ರೊಡ್ಯೂಸರುಗಳೂ ಡೈರಕ್ಟರುಗಳೂ ಅವರ ಮೇಲೆ ಬೀಳುವುದನ್ನು ನೋಡಿ ಅನಿಲನು ಜೇಬಾರುಗೊಂಡಿದ್ದನು.

ಆದರೆ ಅನಿಲನಿಗೆ ಹೀಗೆಲ್ಲಾ ಆಗಲಿಲ್ಲ. ಎಲ್ಲರೂ ಅವನನ್ನು ಗೌರ ವದಿಂದ ಕಾಣುತ್ತಿದ್ದರು. ಸ್ಟುಡಿಯೋದಲ್ಲಿ ಎಲ್ಲರಂತೆ ಅವನೂ ಕಾಯ ಬೇಕಾಗುತ್ತಿತ್ತು. ಆದರೆ ಅವನಿಗಾಗಿಯೂ ಸ್ವಲ್ಪ ಹೊತ್ತು ಕಾಯುತ್ತಿದ್ದರು. ತಾನು ಕಾಯಬೇಕಾದ ಒಳಗಡೆ ಲೌಂಜ್‌ನಲ್ಲಿ ಸೋಫಾದ ಮೇಲೆ ಮಲಗಿ ರುತ್ತಿದ್ದನು. ಆಗಾಗ ನಿದ್ದೆಯೂ ಬಂದುಬಿಡುತ್ತಿತ್ತು. ಅವನ ಕೆಲಸವು ಬರು ವವರೆಗೆ ಯಾರೂ ಆತಂಕಪಡಿಸುತ್ತಿರಲಿಲ್ಲ.

ಇನ್ನೇನು ಷೂಟಿಂಗ್ ಆರಂಭವಾಗುತ್ತದೆ ಎನ್ನುವಾಗ ಯಾರಾದ ರೊಬ್ಬರು ಅಸಿಸ್ಟೆಂಟ್ ಡೈರೆಕ್ಟರು ಬಂದು ಅವನನ್ನು ಎಬ್ಬಿಸಿ ಸಿದ್ಧವಾಗಬೇ ಕೆಂದು ಸೂಚಿಸುತ್ತಿದ್ದರು. ಕಾಸ್ಟ್ಯೂಂಮ್ಯಾನ್ ಬಂದು ಅನಿಲನ ವೇಷಭೂಷ

ಣಗಳನ್ನು ನೋಡಿ, ಆವಶ್ಯಕವಿದ್ದರೆ ಸ್ವಲ್ಪ ಸರಿಪಡಿಸಿ ಬಟ್ಟೆಗಳನ್ನು ಬ್ರಷ್ ಮಾಡಿದಂತೆ ಮಾಡುತ್ತಿದ್ದನು. ಮೇಕಪ್ ಮ್ಯಾನ್ ಬಣ್ಣಗಿಣ್ಣಗಳನ್ನು ನೋಡಿ ತಲೆಗೂದಲನ್ನು ಸರಿಪಡಿಸುತ್ತಿದ್ದನು.

ಆ ಜೀವನವು ಅನಿಲನಿಗೆ ಪ್ರಿಯವಾಗತೊಡಗಿತು. ಸರಳವಾಗಿ ಸಾಗ ತೊಡಗಿತು. ಚಿತ್ರಗ್ರಹಣ ಕಾಲದಲ್ಲಿ ಒಬ್ಬ ಅಭಿನೇತನಿಗೆ ಎಷ್ಟು ಮನ್ನಣೆ, ಗೌರವಗಳು ಸಿಗುವುದು ಸಾಧ್ಯವೋ ಅಷ್ಟು ಅವನಿಗೆ ಸಿಗುತ್ತಿದ್ದವು.

ಆ ಸ್ಟುಡಿಯೋಗೆ ಬಂದು ಹೋಗುತ್ತಿದ್ದ ಮತ್ತು ಇತರ ತಾರತಾರೆ ಗಳ ಸ್ನೇಹವು ಅವನಿಗಾಗಿತ್ತು. ಸ್ಟುಡಿಯೋದಲ್ಲಿಯೂ ಹೊರಗಡೆಯೂ ಇರುವ ವೃತ್ತಿಬಾಂಧವರ ಪರಿಚಯವಾಗಿದ್ದಿತು.

ಒಂದು ದಿನ ಅನಿಲನು ಜಗದೀಶರೊಂದಿಗೆ ಅರವಿಂದನ ವಿಷಯವನ್ನು ಸೂಕ್ಷ್ಮವಾಗಿ ಪ್ರಸ್ತಾಪ ಮಾಡಿದನು.

ಅವರು "ಇತ್ತೀಚೆಗೆ ಅವನಾವುದೋ ಚಿತ್ರವನ್ನು ಮಾಡಿ ಸ್ವಲ್ಪ ಹಣ ಹಾಳುಮಾಡಿಕೊಂಡನೆಂದು ಕೇಳಿದ್ದೆ" ಎಂದು ಹೇಳಿ, ಇನ್ನಾವುದೋ ಮಾತನ್ನು ಆಡಲು ಉಪಕ್ರಮಿಸಿದರು.

ಅರವಿಂದನ ಮಾತನ್ನಾಡುವುದು ಯಾಕೋ ಇವರಿಗೆಲ್ಲರಿಗೂ ಇಷ್ಟವಿಲ್ಲ ವೆಂದು ಕಂಡು ಬರುತ್ತದೆ-ಎಂದುಕೊಂಡು ಅನಿಲನು ಸುಮ್ಮನಾದನು.

ಅನಿಲನ ಜೀವನವು ಯಥಾಪ್ರಕಾರ ನಡೆಯುತ್ತಿದ್ದಿತು.

ಅನಿಲನಿಗೆ ಸ್ನೇಹಿತರು ಹೆಚ್ಚಿದಂತೆಲ್ಲಾ ಅವರು ಅವನನ್ನು ಆಹ್ವಾನಿ ಸುವುದೂ ಇವನು ಅವರನ್ನು ಆಹ್ವಾನಿಸುವುದೂ ಹೆಚ್ಚಾಗುತ್ತ ಬಂದಿತು.

ಒಮ್ಮೆ ಅನಿಲನು ಅಡ್ವಾನ್ಸ್ ಕೊಡಿಸಬೇಕೆಂದು ವೆಂಕಪ್ಪಯ್ಯನವರನ್ನು ಕೇಳಿದನು.

ಮಾರನೆಯ ದಿನ ವೆಂಕಪ್ಪಯ್ಯನವರು ಒಂದು ಸಾವಿರ ರೂಪಾಯಿ ತಂದುಕೊಟ್ಟರು.

ಅನಿಲ ಕುಮಾರನು ಹತ್ತು ಸಾವಿರವಾದರೂ ತಂದುಕೊಡುತ್ತಾರೆಂದು ನಿರೀಕ್ಷೆ ಮಾಡಿದ್ದನು. ಸಾವಿರ ರೂಪಾಯಿ ಮಾತ್ರ ಕೊಟ್ಟುದು ಅವನಿಗೆ ಆಶ್ಚರ್ಯವಾಯಿತು.

ಅವನು ಬೆರಗಾಗಿ " ಇದೇನು, ಇಷ್ಟು ಹಣ ?" ಎಂದನು.

ವೆಂಕಪ್ಪಯ್ಯನವರು “ ಚೆಟ್ಟಿಯಾರರು ಅರವತ್ತು ಸಾವಿರಕೊಡ ಲೊಪ್ಪಲಿಲ್ಲ. ನೀವು ಬಹಳ ಶ್ರೀಮಂತರೆಂದು ಹೇಳಿ ಒಪ್ಪಿಸಿದ್ದೇನೆ. ಈಗಲೇ ಹಣ ಕೇಳುವುದು ಚೆನ್ನಾಗಿರುವುದಿಲ್ಲ. ಸ್ವಲ್ಪ ತಡೆಯಿರಿ. ಹಣವೆಲ್ಲಿ ಹೋಗುತ್ತದೆ ’ ಎಂದು ಸಮಾಧಾನವನ್ನು ಹೇಳಿದರು.

ಬರುವ ಅಡ್ವಾನ್ಸಿನಿಂದ ಅನಿಲನು ಹೊಸ ಕಾರು ಕೊಂಡುಕೊಳ್ಳ ಬೇಕೆಂದಿದ್ದನು. ಹಣವು ಬರದಿರಲು ಅರಸುರತ್ನಿಗೆ ಕಾಗದವನ್ನು ಬರೆದು ತನ್ನ ಕಾರನ್ನೇ ತರಿಸಿಕೊಂಡನು.

ಕಾರು ಬಂದ ಮೇಲಂತೂ ಅನಿಲನ ಓಡಿಯಾಟಗಳು ಬಹಳವಾದುವು. ಯಾರಾದರೂ ಸ್ನೇಹಿತರೊಡನೆ ಹೊರಟು ಹೋದರೆ ರಾತ್ರಿಯೆಲ್ಲಾ ಕುಡಿದಿರುತ್ತಿದ್ದುದರಿಂದ ಪ್ರಾತಃಕಾಲ ಸ್ವಸ್ಥನಾಗಿರುತ್ತಿರಲಿಲ್ಲ. ಮುಖದಲ್ಲಿ ಕಳೆ ಇರುತ್ತಿರಲಿಲ್ಲ.

ವೆಂಕಪ್ಪಯ್ಯನವರೂ ಮತ್ತು ಜಗದೀಶರೂ ಈ ವಿಷಯವನ್ನು ಸ್ವಲ್ಪ ಕಟುವಾಗಿಯೇ ಅವನಿಗೆ ಹೇಳುತ್ತಿದ್ದರು. ಅವರು ಹೇಳಿದ ಕೆಲವು ದಿನಗಳ ವರೆವಿಗೆ ಅವನ ಓಡಿಯಾಟಗಳು ಕಡಿಮೆಯಾಗುತ್ತಿದ್ದುವು

ಇಷ್ಟಾದರೂ ಅನಿಲನು ತನ್ನೊಂದಿಗೆ ಕೆಲಸ ಮಾಡುತ್ತಿದ್ದ ನಟನಟಿಯರೊಂದಿಗೆ ಬಿಂಕದಿಂದ ದೂರ ದೂರವಾಗಿರುತ್ತಿದ್ದನು. ಪ್ರಧಾನ ಅಭಿನೇತ್ರಿಯಾದ ಕಾಂಚನಲತೆ (ಕನ್ನಮ್ಮ ಅಭಿನೇತ್ರಿಯಾಗುವಾಗ ಈ ಹೊಸ ಹೆಸರನ್ನು ಇಟ್ಟುಕೊಂಡಿದ್ದಳು) ಯೊಂದಿಗೆ ಸಹ ಹೆಚ್ಚಾಗಿ ಸೇರುತ್ತಿರಲಿಲ್ಲ. ಎಷ್ಟೋ ಬಾರಿ ಅನೇಕ ಮಂದಿ ತಾರೆಯರೊಡನೆ ಕುಳಿತು ಮಾತನಾಡುತ್ತಿದ್ದನು. ಅವರೊಂದಿಗೆ ಸೇರಿ ಕುಡಿಯುತ್ತಿದ್ದನು. ಆದರೆ ಯಾರನ್ನಾದರೂ ಸ್ಪರ್ಶಮಾಡಬೇಕೆಂದರೆ ಮನಸ್ಸು ಅಳುಕುತ್ತಿತ್ತು. ಏಕಾಂಗಿಯಾಗಿದ್ದಾಗ ಧೈರ್ಯವನ್ನು ತಂದುಕೊಂಡು ಸ್ಪರ್ಶಿಸುತ್ತೇನೆಂದುಕೊಳ್ಳುವನು. ಆದರೆ ಸಂದರ್ಭವೊದಗಿದಾಗ ಸಾಧ್ಯವಾಗುತ್ತಿರಲಿಲ್ಲ.

ಒಬ್ಬನೇ ಕುಳಿತುಕೊಂಡು ಹೀಗೇಕೆ ಆಗುತ್ತದೆ ಎಂದು ಯೋಚನೆ ಮಾಡುವನು. ಎಷ್ಟು ಯೋಚಿಸಿದರೂ ಅದು ಬಗೆಹರಿಯುವುದಿಲ್ಲ. ಸ್ತ್ರೀಯ ಪ್ರಚೋದನೆ ಇಲ್ಲದಿದ್ದರೆ ತನಗಾವ ಪ್ರವೃತ್ತಿಯೂ ಹುಟ್ಟುವುದಿಲ್ಲವೆಂದು ಒಮ್ಮೊಮ್ಮೆ ಅವನ ಅಲ್ಪ ಬುದ್ಧಿಗೆ ಕಂಡುಬರುವುದು.

ಕನಕಂಳನ್ನು ನೋಡುವವರೆವಿಗೆ ಅನಿಲನ ಸ್ಥಿತಿಯು ಹೀಗೆಯೇ ಇದ್ದಿತು.

ತಮಿಳು ಚಿತ್ರಗಳಲ್ಲಿ ಹಾಸ್ಯವಿದ್ದೇ ಇರಬೇಕಂತೆ. ಅದರಿಂದ ತಮಿಳು ವಾಸವದತ್ತದಲ್ಲಿ ದಂಪತಿಗಳ ಒಂದು ವಿಡಂಬನವನ್ನು ಜೋಡಿಸಲಾಗಿತ್ತು. ಕನಕಂ ಅದರಲ್ಲಿ ಸತಿಯ ಪಾತ್ರವನ್ನು ಧರಿಸುತ್ತಿದ್ದಳು.

ಪಾತ್ರಕ್ಕೆ ಬೇಕಾದ ಬುದ್ಧಿ ಚಾತುರ್ಯವು ವಾಸ್ತವವಾಗಿ ಕನಕಳಿಗಿದ್ದಿತು. ಅವಳದು ತುಂಬಿಕೊಂಡ ಕೋಲುಮುಖ. ಎಳಸಾದ ಮೂಗು. ಉದ್ದವಾದ ಹುಬ್ಬುಗಳು. ಪ್ರಕಾಶಮಾನವಾದ ಕಣ್ಣುಗಳು. ಮಂದಹಾಸದಿಂದ ಕೂಡಿದ ತುಟಿಗಳು. ಮಾಟವಾದ ಗಲ್ಲ. ಮೆಟ್ಟಲುಮೆಟ್ಟಲಾಗಿ ಮಿಣುಗುವ ಕೇಶರಾಶಿ. ಬಳಕುವ ದೇಹ, ಬಾಗಿದ ನಿತಂಬ——

ಹದಿನೆಂಟು ವರ್ಷದ ಕನಕಂಳನ್ನು ನೋಡಿದಾಗಲೆಲ್ಲಾ ಅನಿಲನಿಗೆ ಮಂಜುಳೆಯ ನೆನಪು ಬರುತ್ತಿತ್ತು.

ಅವಳ ಕೋಕಸ್ತನಗಳನ್ನು ನೋಡಿದಾಗಲಂತೂ ಅನಿಲನಿಗೆ ಹುಚ್ಚು ಹಿಡಿದ ಹಾಗಾಗುತ್ತಿದ್ದಿತು.

ಪುಟ ಹಾರುವ ಆಟದ ಚೆಂಡಿನಂತೆ, ಕನಕಂ. ಅವಳು ಹೋಗಿ ಬರದ ಜಾಗವೇ ಇರಲಿಲ್ಲ. ಎಲ್ಲಿ ಬೇಕಾದರಲ್ಲಿ ಧಾರಾಳವಾಗಿ ಹೋಗಿ ಬರುತ್ತಿದ್ದಳು. ಹಾಗೆಯೇ ಅನಿಲಕುಮಾರನ ಬಳಿಗೂ ಬರುತ್ತಿದ್ದಳು.

ಅನಿಲನು ಎಲ್ಲರಿಗಿಂತಲೂ ಹೆಚ್ಚಾಗಿ ಕನಕಳೊಡನಿರುವನು. ಎಲ್ಲಿಗಾದರೂ ಹೋಗುವಾಗ ಅವಳನ್ನು ಕರೆದುಕೊಂಡು ಹೋಗುವನು. ಅವರಿಬ್ಬರೂ ಹೋಟೆಲುಗಳಿಗೆ ಹೋಗಿ ಐಸ್‌ಕ್ರೀಂ ತಿನ್ನುವರು. ಸಿನಿಮಾಗಳಿಗೆ ಹೋಗಿ ಬರುವರು. ಬೀಚಿನಲ್ಲಿ ತಿರುಗುವರು.

ಆಗಾಗ ಕನಕಂ ಅನಿಲನೊಡನೆ ಕುಚೇಷ್ಟೆ ಮಾಡುವಳು. ಆಗವನು ಅವಳ ಕೆನ್ನೆಯನ್ನು ಜಿಗುಟುವನು.

ಎಷ್ಟೋ ದಿನಗಳು ಬೆಳದಿಂಗಳಿನ ರಾತ್ರಿಯಲ್ಲಿ ಅನಿಲನ ಕಾರಿನಲ್ಲಿ ಉಕ್ಕುತ್ತಿರುವ ಸಮುದ್ರವನ್ನು ನೋಡಿಕೊಂಡು ಅವರು ಹತ್ತಾರು ಮೈಲಿಗಳು ಹೋಗುವರು. ಆಗ ಫ್ರೆಂಟ್ ಸೀಟಿನಲ್ಲಿ ತನ್ನ

ಪಕ್ಕದಲ್ಲಿ ಕುಳಿತಿರುವ ಕನಕಂಳನ್ನು ನೋಡಿದಾಗ, ಅದರಲ್ಲಿಯೂ ಅವಳ ಕೋಕಸ್ಥನಗಳನ್ನು ನೋಡಿದಾಗ ಅವನು ಉನ್ಮತ್ತನಾಗುವನು.

ಆದರೆ ಅವಳನ್ನು ಸ್ಪರ್ಶ ಮಾಡಲು ಅನಿಲನಿಗೆ ಧೈರ್ಯವಾಗುತ್ತಲಿರಲಿಲ್ಲ. ಎರಡು ಮೂರು ಬಾರಿ ಪ್ರಯತ್ನ ಪಟ್ಟಿದ್ದನು. ಆಗೆಲ್ಲಾ ಅವಳು ಸೆಡೆದು ಕುಳಿತುಕೊಂಡು ತೀವ್ರ ದೃಷ್ಟಿಯಿಂದ ನೋಡಿ ನಿವಾರಿಸಿದ್ದಳು. ಆಗೆಲ್ಲಾ ಅವನಿಗೆ ಮಂಜುಳೆಯ ನೆನಪು ಬರುವುದು.

ಆದರೂ ಅವರು ಸ್ನೇಹಿತರಾಗಿಯೇ ಇದ್ದರು.

——————ಕೋಕಸ್ಥನಗಳನ್ನು ನೋಡಿದಾಗ ಅವನು ಉನ್ಮತ್ತನಾಗುವನು. ಗಾಡಿಯನ್ನು ನಡೆಯಿಸಲಾಗದೇ ಸ್ಟಿಯರಿಂಗ್ ಮೇಲೆ ತಲೆಯಿಟ್ಟು ಸುಮ್ಮನೆ ಕುಳಿತುಕೊಂಡು ಬಿಡುವನು.

ಒಂದು ಬಾರಿ ಅವನೂ ಕನಕಮ್ಮಾ ಕಾರಿನಲ್ಲಿ ಹೋಗುತ್ತಿದ್ದಾಗ ಅನಿಲನು "ಮೊನ್ನೆ ಫಿಲಿಂ ಉಲಗಂ ಪತ್ರಿಕೆಯಲ್ಲಿ ಏನು ಬರೆದಿದ್ದಾರೆ, ಓದಿದ್ದೀಯಾ?" ಎಂದನು.

ಫಿಲಿಂ ಉಲಗಂ ಪತ್ರಿಕೆಯಲ್ಲಿ ಅನಿಲನೂ ಕನಕಮ್ಮಾ ಒಟ್ಟಿಗೆ ತಿರುಗುವ ವಿಷಯುವನ್ನು ಪ್ರಸ್ತಾಪ ಮಾಡಿ ಟೀಕೆ ಮಾಡಿದ್ದರು.

ಕನಕಂ ಅದನ್ನು ಓದಿದ್ದಳು. ಆದರೂ ಏನೂ ಆಗದವಳಂತೆ, "ಓದಿದೆ. ಈಗ ಏನಾಯಿತು?" ಎಂದಳು.

"ನೀನು ನೀತಿ ನೀತಿ ಎನ್ನುತ್ತೀಯಲ್ಲಾ. ಅದರಿಂದ ಏನಾದಂತಾಯಿತು ? "

"ನೀತಿ ಇನ್ನೊಬ್ಬರಿಗಾಗಿ ಅಲ್ಲ. ನನಗಾಗಿ ಅಷ್ಟೇ!"

ಅನಿಲನು ಮುಂದೆ ಮಾತನಾಡಲಿಲ್ಲ. ಅಲ್ಲಿಗೇ ಬಿಟ್ಟು ಬಿಟ್ಟನು.

ಸುಮಾರು ಮೂರು ನಾಲ್ಕು ಮೈಲಿಗಳಷ್ಟು ದೂರ ಕಾರು ಹೋದ ನಂತರ "ಕನಕಂ. ನಿನಗೆ ಅರವಿಂದನೆಂಬ ನಟನ ವಿಷಯ ಗೊತ್ತೇ ? " ಎಂದನು.

ಅವಳು "ಗೊತ್ತು ಏನಾಗಬೇಕು ?" ಎಂದಳು.

"ಎಲ್ಲಿಯೂ ಕಂಡು ಬರಲಿಲ್ಲವಲ್ಲ. ಅವನೀಗ ಏನು ಮಾಡುತ್ತಿದ್ದಾನೆ ?"

"ಈಗೀಗ ಆತನಿಗೆ ಸರಿಯಾಗಿ ಬುಕ್ಕಿಂಗ್ ಸಿಗುತ್ತಾ ಇಲ್ಲ. ಮೊನ್ನೆ ಅವನೇ ಒಂದು ಚಿತ್ರ ತಯಾರಿಸಿದನೆಂದು ಕೇಳಿದೆ. ಆದರದು ಡಬ್ಬಾ ಆಯಿತು "

ಏನೂ ಅರಿಯದ ಮಗುವಿನಂತೆ ಅ ವ ನು "ಕನಕಂ. ಅವನಿಗೇಕೆ ಬುಕ್ಕಿಂಗ್ ಸಿಗುವುದಿಲ್ಲ. ?" ಎಂದು ಕೇಳಿದನು.

"ಎಷ್ಟೋ ಚಿತ್ರಗಳಲ್ಲಿ ಅಭಿನಯಿಸಿ ಅವನೆಂದರೆ ಬೇಜಾರಾಗುವ ಹಾಗಿದೆ. ಆದರಮೇಲೆ ಮೊದಲಿನಂತಹ ಕಾಲವು ಬರುತ್ತದೆಂದು ಅವನು ಆಶೆ ಇಟ್ಟುಕೊಂಡಿದ್ದಾನೆ. ನನಗೆ ತಿಳಿದಂತೆ ಅವನಿಗಿನ್ನು ಒಳ್ಳೆಯ ಕಾಲವು ಬರುವುದಿಲ್ಲ. ಕೆಲವು ದಿನಗಳ ಹಿಂದೆ ನಾನು ಅವನನ್ನು ನೋಡಿದ್ದಾಗ——"

"ನೀನು ಅರವಿಂದನನ್ನು ನೋಡಿದೆಯಾ ? ನಿನಗೆ ಅವನು ಗುರುತೇ ?"

"ಚೆನ್ನಾಗಿ ಗುರುತು. ನೀವು ಅವನನ್ನು ನೋಡಬೇಕೇನು ?"

ಅನಿಲನು ನೋಡಬೇಕೆಂದು ಹೇಳಿದನು.

"ಅವನನ್ನು ನೋಡುವುದಕ್ಕೇನು ಮುಟ್ಟಬೇಕು ? ಯಾವಾಗ ಬೇಕಾದರೂ ಹೋಗಿ ನೋಡಬಹುದು. ಎಲ್ಲಿ ಹೋಗುವುದಕ್ಕೂ ಅವನಲ್ಲಿ ಕಾಸಿಲ್ಲ. ಮನೆಯಲ್ಲಿಯೇ ಕುಳಿತಿರುತ್ತಾನೆ. ಯಾರೂ ಅವನನ್ನು ಹೋಗಿ ನೋಡ್ಳುವುದಿಲ್ಲ. ಎಕ್ಸ್ಟ್ರಾಗಳು ಕಾದು ಬಿದ್ದಿರುವಂತೆ ಯಾರಾದರೂ ಕರೆಯುತ್ತಾರೇನೋ ಎಂದು ಕಾಯುತ್ತಿರುತ್ತಾನೆ."

"ಆದರೂ ಹೋಗುವಾಗ ಒಮ್ಮೆ ಹೇಳಿ ಹೋಗಬಾರದೇಕೆ? ನಾವು ಬರುತ್ತೇವೆಂದು ಹೇಳಿ ಬಂದುಬಿಡು."

ಕನಕಂ ಒಪ್ಪಿಕೊಂಡಳು.

ಭಾನುವಾರದ ದಿನ ಸಾಯಂಕಾಲ ಅವಸರವಸರವಾಗಿ ಬಂದು "ಅನಿಲ್. ಅರವಿಂದನಿಗೆ ಹೇಳಿಬಿಟ್ಟು ಬಂದಿದ್ದೇನೆ, ಬನ್ನಿ. ಹೋಗಿ ನೋಡಿಕೊಂಡು ಬರೋಣ" ಎಂದು ಹೇಳಿದಳು.

ಇಬ್ಬರೂ ಹೋದರು.

ಕೋಡಂಬಾಕಂನಲ್ಲಿ ಸುಮಾರು ಇಪ್ಪತ್ತು ಇಪ್ಪತ್ತೈದು ಎಕರೆಗಳ

ವಿಶಾಲವಾದ ಕಾಂಪೌಂಡಿನಲ್ಲಿ ದೊಡ್ಡ ಬಂಗಲೆ. ಅದೇ ಅರವಿಂದನ ಮನೆ. ಅರವಿಂದ ವಿಲಾಸವೆಂದು ಅದರ ಹೆಸರು.

ಮುಂದುಗಡೆಯ ಕಾಂಪೌಂಡು ಗೋಡೆಯು ಮಳೆ ಗಾಳಿಗಳಲ್ಲಿ ನೆನೆದು ನೆನೆದು ಮಣ್ಣಿನ ಗೋಡೆಯಂತೆ ಆಗಿತ್ತು. ಅದರೊಳಗಡೆ ತೋಟ ವನ್ನು ಯಾರೂ ಗಮನಿಸದೇ ಸಣ್ಣ ಕಾಡಿನಂತೆ ಬೆಳೆದಿತ್ತು. ಒಳಗಿನ ರಸ್ತೆಯು ಮಣ್ಣು ಕೊಚ್ಚಿ ಹೋಗಿ ಕಲ್ಲುಗಳೆದ್ದು ಕೊಂಡಿದ್ದುವು. ಕಾಂಪೌಂಡಿನಲ್ಲಿ ಆ ರಸ್ತೆಯಲ್ಲಿ ಹೋಗುವಾಗ ಸ್ವಿಮಿಂಗ್ ಪೂಲ್‌ನ ಭಗ್ನಾವಶೇಷವು ಕಂಡಿತು.

ಅದಕ್ಕೆ ಅನತಿ ದೂರದಲ್ಲಿಯೇ ಸುಣ್ಣ ಬಣ್ಣಗಳಿಲ್ಲದೇ ಬಿಕೋ ಎಂದು ದೊಡ್ಡ ಬಂಗಲೆಯು ನಿಂತಿದೆ.

ಅಲ್ಲಿ ನೋಡಿದರೆ ಯಾರು ಇರುವಂತೆ ಇರಲಿಲ್ಲ. ಎಲ್ಲಿ ಕೂಗುವುದು, ಯಾರನ್ನು ಕೂಗುವುದೆಂಬುದು ಗೊತ್ತಾಗುವಂತೆ ಇರಲಿಲ್ಲ. ಸ್ವಲ್ಪ ಹೊತ್ತು ಕಾದನಂತರ ಯುವಕನಾದ ಸೇವಕನೊಬ್ಬನು ಅತ್ತ ಸುಳಿದನು.

ಕನಕಂ ತಮಿಳಿನಲ್ಲಿ "ಅರವಿಂದರೆಲ್ಲಿ ?" ಎಂದು ಕೇಳಿದಳು.

ಅವನು ಉತ್ತರವನ್ನು ಕೊಡದೇ, ಮನೆಯ ಕಡೆಗೆ ಕೈ ತೋರಿಸಿ ಹೊರಟು ಹೋದನು.

ಮುಂದುಗಡೆ ದೊಡ್ಡ ಪೋರ್ಟಿಗೋ. ಅದಕ್ಕೆ ಸೇರಿದಂತೆ ಉದ್ದವಾದ ವಿಶಾಲವಾದ ಜಗುಲಿ. ಜಗುಲಿಯ ಒಂದು ಕಡೆಗೆ ಹಳೆಯ ಕಾಲದ ಮೂರು ಕಲ್ಲು ಕುರ್ಚಿಗಳೂ, ಮತ್ತೊಂದು ಕಡೆ ನೀರಿನಲ್ಲಿದೇ ಒಣಗಿ ಕಡ್ಡಿಗಳು ನಿಂತಿದ್ದ ತುಂಡುಗಳೂ ಇದ್ದವು. ಅಲ್ಲಿ ಕಸವನ್ನು ಸಹ ಗುಡಿಸಿರಲಿಲ್ಲ.

ಅದನ್ನು ದಾಟಿ ಹೋದರೆ ದೊಡ್ಡ ಹಜಾರ. ಅಷ್ಟಗಲಕ್ಕೂ ಜಮಖಾನವನ್ನು ಹಾಕಲಾಗಿತ್ತು. ಅದರ ಮೇಲೆ ಕುರ್ಚಿಗಳನ್ನೂ ಮೇಜುಗಳನ್ನೂ ಇಡಲಾಗಿತ್ತು. ಹಳೆಯ ಮಾದರಿಯ ಸೋಫಾ ಸೆಟ್ಟು ಹಾಕಿತ್ತು. ಪುಷ್ಪದಾನುಗಳಲ್ಲಿ ಕಾಗದದ ಎಲೆ ಹೂಗಳಿದ್ದವು.ಗೋಡೆಗಳ ಮೇಲೆ ಬಗೆ ಬಗೆಯ ಪಠಗಳಿದ್ದವು. ಕಾಡೆಮ್ಮೆ, ಜಿಂಕೆ, ಹುಲಿ, ಚಿರತೆಗಳ ಮುಖಗಳು ಮರದ ಹಲಗೆಗಳಿಗೆ ಸಿಕ್ಕಿಕೊಂಡಿದ್ದುವು.

ಎಲ್ಲೆಲ್ಲಿಯೂ ಕಸ, ಧೂಳು ತುಂಬಿದ್ದವು.

ಆ ತುಂಬಿದ ಹಜಾರದಲ್ಲಿ ಯಾರೂ ಕಂಡು ಬರಲಿಲ್ಲ. ಒಂದು ಕಡೆ ಹೋಗೆಯು ಬರುತ್ತಿದ್ದುದನ್ನು ನೋಡಿ ಅನಿಲನೂ ಕನಕಮ್ಮಾ ಅತ್ತಕಡೆ ಹೋದರು.

ಈಸೀ ಚೇರಿನ ಮೇಲೆ ಮಲಗಿಕೊಂಡು, ಕಾಲನ್ನು ಸ್ಟೂಲಿನ ಮೇಲೆ ಎತ್ತಿಟ್ಟುಕೊಂಡು ಅರವಿಂದನು ಚುಟ್ಟಾ ಸೇದುತ್ತಾ ಇದ್ದನು.

ಇವರನ್ನು ನೋಡಿದ ಕೂಡಲೇ ಅರವಿಂದನು ಎದ್ದು ಕುಳಿತುಕೊಂಡು ತಲೆ ಎತ್ತಿ ನೋಡಿದನು.

ಅನಿಲನು ಅವನನ್ನು ಗುರುತು ಹಿಡಿದನು. ಆದರೆ ಅವನನ್ನು ನೋಡಿದೊಡನೆಯೇ ಎದೆಯು ಒಡೆದು ಹೋದಂತೆ ಆಯಿತು. ಅವನಿಗೆ ಐವತ್ತರ ಹತ್ತಿರ ವಯಸ್ಸಾಗಿದ್ದಿರಬಹುದು. ಆದರೆ ಎಪ್ಪತ್ತು ವರ್ಷದ ಮುದುಕನಂತಾಗಿದ್ದನು. ಕೂದಲು ನೆರೆತಿತ್ತು. ಚರ್ಮವು ಸುಕ್ಕು ಬಂದಿತ್ತು. ಕಣ್ಣುಗಳು ಗುಳಿಬಿದ್ದು ಸುತ್ತಲೂ ಕಪ್ಪು ಕಟ್ಟಿಕೊಂಡಿದ್ದಿತು.

ಕನಕಂಗೆ ಚೆನ್ನಾಗಿ ಅರವಿಂದನ ಪರಿಚಯವಿದ್ದಿತು.

ಅವಳು ಪರಿಚಯವನ್ನು ಮಾಡಿಸುತ್ತಾ "ಇವರ ಹೆಸರು ಅನಿಲ ಕುಮಾರ್. ಕರ್ನಾಟಕದ ಸುಪ್ರಸಿದ್ಧ ನಟ ಶ್ರೇಷ್ಠರು. ಅವರು ಅಭಿನಯಿಸಿದ್ದ ನಾಟಕವು ಯಶಸ್ವಿಯಾದ್ದದನ್ನು ನೋಡಿ ಜೀವರ್ ಸ್ಟುಡಿಯೋಸ್‌ನವರು ವಾಸವದತ್ತಾ ತ್ರಿಭಾಷಾ ಚಿತ್ರಕ್ಕೆ ಇವರನ್ನು ಪ್ರಧಾನ ನಟರಾಗಿ ಆರಿಸಿದ್ದಾರೆ. ಮೊದಲಿನಿಂದಲೂ ಚಿತ್ರಗಳಲ್ಲಿ ನಿಮ್ಮ ಅಭಿನಯವನ್ನು ನೋಡಿ ಪ್ರಭಾವಿತರಾಗಿದ್ದಾರೆ. ನಿಮ್ಮನ್ನು ನೋಡಬೇಕೆಂದು ಬಹಳ ಆಶೆಪಡುತ್ತಿದ್ದಾರೆ" ಎಂದಳು.

ಆಗ ಅರವಿಂದನನ್ನು ಬಂದು ನೋಡುವವರೇ ಇರಲಿಲ್ಲ. ಎಲ್ಲರೂ ಅವನನ್ನು ನಿರ್ಲಕ್ಷ್ಯ ಮಾಡುತ್ತಿದ್ದರು. ಆದ್ದರಿಂದ ಅನಿಲನು ಬಂದು ನೋಡಿದುದರಿಂದ ಅವನಿಗೆಷ್ಟೋ ಸಂತೋಷವಾಯಿತು.

ಆತನು ಮೇಲೆದ್ದು "ಬರುತ್ತೇನೆ. ಒಂದು ನಿಮಿಷ" ಎಂದು ಹೇಳಿ, ಕೆಮ್ಮುತ್ತಾ ಒಳಗೆ ಹೋದನು.

ಅನಿಲನು ಮಾತನಾಡದೇ ಅರವಿಂದನ ವಿಷಯವನ್ನೇ ಆಲೋಚಿಸುತ್ತಾ ಕುಳಿತಿದ್ದನು ಅಂದಿನ ಅವನ ಆ ಉಚ್ಛ್ರಾಯ ಸ್ಥಿತಿ, ಇಂದಿನ

ಅವನ ಈ ಅವನತ ಸ್ಥಿತಿಗಳನ್ನು ನೆನೆದುಕೊಂಡು ಪರಿತಾಪ ಉಂಟಾಯಿತು. ಆ ಭಾವನೆಯು ಅನಿಲನ ಮುಖವನ್ನು ಪೆಚ್ಚಾಗಿ ಮಾಡಿತು.

ಅರವಿಂದನು ವಾಪ್ಸು ಬಂದು ಮಾತನಾಡುತ್ತಾ ಕುಳಿತುಕೊಂಡ ಸ್ವಲ್ಪ ಹೊತ್ತಿನಲ್ಲಿಯೇ ಪರಿಚಾರಕನಂತೆ ಕಂಡು ಬರುತ್ತಿದ್ದ ವೃದ್ಧನೊಬ್ಬನು ಮೂರು ಪಿಂಗಾಣಿ ಬಟ್ಟಲುಗಳಲ್ಲಿ ಚಹಾ ತಂದಿಟ್ಟನು.

ಚಹಾ ಚೆನ್ನಾಗಿರಲಿಲ್ಲ. ಟೀ. ಎಲೆ ಮತ್ತು ಹಾಲುಗಳಿಗಿಂತಲೂ ಸಕ್ಕರೆಯನ್ನೇ ಹೆಚ್ಚಾಗಿ ಹಾಕಿದಂತಿದ್ದಿತು.

ಅರವಿಂದನು ಅತಿಥಿಗಳೊಂದಿಗೆ ಬೇಕಾದ ಹಾಗೆ ಮಾತನಾಡಿದನು. ತನ್ನ ಹಿಂದಿನನುಭವವನ್ನೆಲ್ಲಾ ಹೇಳಿಕೊಂಡನು. ಇಂದಲ್ಲ, ನಾಳೆಯಾದರೂ ತಾನು ಪುನಃ ಮೊದಲಿನಂತೆ ರಜತ ಪರದೆಯ ಮೇಲೆ ಪ್ರಕಾಶಿಸುತ್ತೇನೆಂಬ ಭರವಸೆಯನ್ನು ವ್ಯಕ್ತ ಪಡಿಸಿದನು. ತನ್ನ ಮನೆಯನ್ನೂ, ಅದರ ಸುತ್ತಲೂ ಎಸ್ಟೇಟಿನಂತೆ ವಿಶಾಲವಾಗಿದ್ದ ತೋಟವನ್ನೂ ತೋರಿಸಿದನು.

ಮಾತಿಗೆ ಮಾತು ಬಂದು ಅರವಿಂದನು "ರಾಜರತ್ನಂ ಚೆಟ್ಟಿಯಾರರು ನಿಮಗೆಷ್ಟು ಕೊಡುತ್ತೇನೆಂದು ಹೇಳಿದ್ದಾರೆ?" ಎಂದು ಕೇಳಿದನು.

ಅನಿಲನು ಉತ್ಸಾಹದಿಂದ "ಅರವತ್ತು ಸಾವಿರ ಕೊಡುವುದಾಗಿ ಹೇಳಿದರು" ಎಂದನು.

ಅರವಿಂದನು ವಿಕಟವಾಗಿ ನಕ್ಕು "ಅರವತ್ತು ಸಾವಿರ! ಅರವತ್ತು ಸಾವಿರವೆಲ್ಲಿ ಕೊಡುತ್ತಾನೆ? ಅವನು ಶುದ್ಧ ಕಳ್ಳ" ಎಂದನು.

ಅನಿಲನು ಬೆರಗಾಗಿ ನೋಡಿದನು.

"ಅರವತ್ತು ಸಾವಿರ. ಹಳೆಯ ಹೆಸರಾದ ಅಭಿನೇತ ಅಭಿನೇತ್ರಿಯರಿಗೆ ಸಹ ಚಿತ್ರಕ್ಕೆ ಅರವತ್ತು ಕೊಡುವುದಿಲ್ಲ. ಈ ಇಂಡಿಯಾ ದೇಶದಲ್ಲಿ ಇಬ್ಬರು ಮೂವರು ನಟರಿಗೆ ಚಿತ್ರಕ್ಕೆ ಐವತ್ತು ಅರವತ್ತು ಸಿಕ್ಕುತ್ತದೆಯೋ. ಅದೂ ಇಲ್ಲವೋ? ಅಂತಹದರಲ್ಲಿ ಹೊಸ ನಟನಿಗೆ ಅಷ್ಟು ಯಾರು ಕೊಡುತ್ತಾರೆ?"

ಅರವಿಂದನ ತರಹವು ಅವರಿಬ್ಬರಿಗೂ ಅರ್ಥವಾಗಲಿಲ್ಲ. ಅನಿಲನು ಇವನಿಗೆ ಅಸೂಯೆಯೋ ಎಂದುಕೊಂಡನು. ಕನಕಂಳು "ಏನೋ ನೋಡಿ

ಕೊಂಡು ಹೋಗೋಣವೆಂದು ಬಂದರೆ ಇವನೇಕೆ ಹೀಗೆ ಮಾತನಾಡುತ್ತಾನೆ" ಎಂದುಕೊಂಡಳು.

ಅವಳು "ಕೊಡುವುದಾಗಿ ಕರಾರಾಗಿದೆ" ಎಂದಳು.

"ನಾನು ಇಂತಹ ಕರಾರುಗಳನ್ನು ಬಲ್ಲೆ. ಅವೆಲ್ಲವೂ ಮೋಸ. ಅಷ್ಟೊಂದು ಹಣ ಕೊಡುವುದೇ ಇಲ್ಲ. ಅದರಲ್ಲಿಯೂ ಬಚ್ಚಲಲ್ಲಿ ಬಿದ್ದಿರುವ ಬಿಡಿಗಾಸನ್ನು ನಾಲಿಗೆಯಿಂದ ಎತ್ತಿಕೊಳ್ಳುವ ಆ ಚೆಟ್ಟಿಯಾರ್ ಕೊಡುತ್ತಾನೆಯೇ?"

ಯಾರೂ ಮಾತನಾಡಲಿಲ್ಲ.

"ನೋಡಿ, ಅನಿಲ್. ನೀವು ನನ್ನನ್ನು ನೋಡುವುದಕ್ಕೆ ಬಂದಿದ್ದೀರಿ. ಅಪ್ರಿಯವಾದ ಮಾತುಗಳನ್ನು ಆಡುತ್ತೇನೆಂದು ನೀವು ತಪ್ಪು ತಿಳಿದುಕೊಳ್ಳಬೇಡಿ. ನೀವಿನ್ನೂ ಈ ವೃತ್ತಿಗೆ ಹೊಸಬರು. ಆದರಿಂದ ನಾನೆರಡು ಹಿತವಚನಗಳನ್ನು ಹೇಳುತ್ತೇನೆ- ಇವರೂ ಇವರ ಕರಾರುಗಳೂ ಸುಳ್ಳು. ಇದರಲ್ಲಿ ಮೋಸವಿದೆ. ಆರವತ್ತು ಸಾವಿರ ಕೊಟ್ಟು ಮೈಸೂರಿನಿಂದ ನಟನನ್ನು ತಂದಿದ್ದೇನೆ ಎಂದು ಜಾಹಿರಾತು ಮಾಡಲು ಈ ಚೆಟ್ಟಿ ಆಟವಾಡುತ್ತಿರುವಂತಿದೆ. ಇದರ ಜೊತೆಗೆ ಆದಾಯದ ತೆರಿಗೆಯವರಿಗೆ ಮೋಸ ಮಾಡುವುದೂ ಉದ್ದೇಶವಿರಬಹುದು. ಅವನು ಹೇಳಿರುವುದರಲ್ಲಿ ನಾಲ್ಕನೆಯ ಒಂದು ಭಾಗ, ಐದನೆಯ ಒಂದು ಭಾಗವಾದರೂ ಸಿಕ್ಕಿದರೆ ನಿಮ್ಮ ಪುಣ್ಯ. ಆದರೆ ಅದರಿಂದ ನೀವು ನಿರಾಶರಾಗಬೇಡಿರಿ. ನೀವು ಶ್ರದ್ಧೆಯಿಂದ, ಆಸಕ್ತಿಯಿಂದ ಕಷ್ಟಪಟ್ಟು ಪಾರ್ಟು ಮಾಡಿರಿ. ಇದೇನೋ ತ್ರಿಭಾಷಾ ಚಿತ್ರವೆನ್ನುತ್ತೀರಿ. ಏನೋ ದೇವರ ದಯವಿದ್ದು ಈ ಚಿತ್ರವು ಯಶಸ್ವಿಯಾದರೆ ಹಣ ಬರದಿದ್ದರೂ ನೀವು ಕೀರ್ತಿಶಾಲಿಗಳಾಗುತ್ತೀರಿ. ಬಹಳ ಹೆಸರು ಮಾಡುತ್ತೀರಿ. ಅದೃಷ್ಟವಿದ್ದರೆ ಅನಂತರ ನಿಮಗೆ ವಾಸ್ತವವಾಗಿ ಚಿತ್ರಕ್ಕೆ ನಲವತ್ತು, ಐವತ್ತು ಸಾವಿರಗಳು ಸಿಕ್ಕುವ ದಿನಗಳು ಬರಬಹುದು."

ಅರವಿಂದನೇ ಬಹಳವಾಗಿ ಮಾತನಾಡಿದನು. ಬಲು ದಿನಗಳಿಂದ ಮಾತನಾಡದೇ,ಮಾತನಾಡದೇ ಇದ್ದು ಆ ದಿನ ಉದ್ವೇಗವು ಬಂದು ಮಾತನಾಡ ತೊಡಗಿದನೆಂದು ಕಂಡು ಬರುತ್ತದೆ.

ಎಲ್ಲ ನಿರ್ಮಾಪಕರನ್ನೂ ನಿರ್ದೇಶಕರನ್ನೂ ವಾಚಾಮ ಗೋಚರವಾಗಿ ಬೈದನು.

" ನನ್ನನ್ನು ಸಣ್ಣ ಪುಟ್ಟ ಪಾರ್ಟುಗಳನ್ನು ಮಾಡು ಎಂದು ಕರೆಯುತ್ತಾರೆ. ಒಂದೆರಡು ಕ್ಲೋಸ್ ಅಪ್ ಸಹ ಕೊಡುವುದಿಲ್ಲವೆಂದು ಹೇಳುತ್ತಾರೆ. ನಾನೆಂದರೆ ಅವರೇನೋ ಎಂದುಕೊಂಡಿದ್ದಾರೆ. ನಾನು ಮುದುಕನಾಗಿರುವುದರಿಂದ ನನಗೆ ರಜತ ಪರದೆಯಲ್ಲಿ ಸ್ಥಾನವಿಲ್ಲವೇನು ? ಕಲೆಯಲ್ಲಿ ಯೌವನ ವೃದ್ಧಾಪ್ಯಗಳಿಲ್ಲ. ರೂಪ–ಕುರೂಪಗಳಿಲ್ಲ. ವ್ಯಕ್ತಿಯು ಕಲಾವಂತನು ಹೌದೇ ಇಲ್ಲವೇ ಎಂಬುದು ಮಾತ್ರ ಮುಖ್ಯ. ನೋಡಿ. ಹಿಂದೀ ಚಿತ್ರಗಳಲ್ಲಿ ಸೊಹ್ರಾಬ್ ಮೋದಿಯು ಇನ್ನೂ ನಟಿಸುತ್ತಿದ್ದಾನೆ. ಅವನು ಅವನು ಮುದುಕನಲ್ಲವೇನು ? ಈ ಜನಗಳಿಗೆ ಕಣ್ಣೆದುರಿಗೆ ನೋಡಿ ತಿಳಿದು ನೋಡುವಂತಹ ಯೋಗ್ಯತೆಯಿಲ್ಲ. ಇಂದಲ್ಲ, ನಾಳೆಯಾದರೂ ಯೋಗ್ಯತೆಗೆ ಬೆಲೆಯು ಬಂದೇ ಬರುತ್ತದೆ. ಆಗ–ಆಗ ನಾನು ಇವರುಗಳಿಗೆಲ್ಲಾ ಹೇಗೆ ಬುದ್ಧಿಯನ್ನು ಕಲಿಸುತ್ತೇನೆಯೋ ನೋಡುತ್ತಾ ಇರಿ "

ಕನಕಂ ಮತ್ತು ಅನಿಲರು ಆ ವೃದ್ಧ ನಟನಲ್ಲಿ ಸಹಾನುಭೂತಿಯನ್ನು ವ್ಯಕ್ತಪಡಿಸಿದರು.

ಅರವಿಂದನು ಕಡೆಯದಾಗಿ ಬುದ್ಧಿಯ ಮಾತುಗಳನ್ನು ಹೇಳುತಾ " ಅನಿಲ ಕುಮಾರ್. ನಿಮಗೀಗ ಬಹಳ ಒಳ್ಳೆಯ ಅವಕಾಶವು ಸಿಕ್ಕಿದೆ. ಫಿಲಿಂಗಳಲ್ಲಿ ಮೊಟ್ಟ ಮೊದಲು ಇಂತಹ ಚಾನ್ಸ್ ಸಿಕ್ಕುವುದು ಸಾವಿರದಲ್ಲಿ ಒಂದು. ನೀವಿದನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಿರಿ. ಇವರುಗಳ ಮೋಸಕ್ಕೆ ನೀವು ಬಲಿಯಾಗ ಬೇಡಿರಿ. ವರ್ಷಕ್ಕೆ ಒಂದೋ ಎರಡೋ ಚಿತ್ರಗಳಲ್ಲಿ ಅಭಿನಯಿಸಲು ಒಪ್ಪಿಕೊಳ್ಳ ಬೇಡಿರಿ. ನೀವು ಹೆಚ್ಚು ಚಿತ್ರಗಳಲ್ಲಿ ನಟಿಸಿದರೆ ಜನಾನುರಾಗವನ್ನು ಕಳೆದುಕೊಳ್ಳುತ್ತೀರಿ. ನಿಮಗೆ ತಕ್ಕ ಪಾತ್ರಗಳನ್ನು ನೋಡಿ ಆರಿಸಿಕೊಳ್ಳಿರಿ. ಇಲ್ಲದಿದ್ದರೆ ಎಣ್ಣೆ ಇಲ್ಲದ ಬತ್ತಿಯಂತೆ ಉರಿದು ಹೋಗುತ್ತೀರಿ. ಇನ್ನೊಂದು ವಿಷಯ. ಈ ಪತ್ರಿಕೆಯವರು ಮಹಾ ಅಪಾಯಕಾರಿಗಳು. ಅವರಲ್ಲಿ ಅತಿಯಾಗಿ ಸ್ನೇಹವನ್ನೂ ಮಾಡಿಕೊಳ್ಳ ಬೇಡಿ. ದ್ವೇಶವನ್ನೂ ಕಟ್ಟಿಕೊಳ್ಳ ಬೇಡಿರಿ. ಅವರನ್ನು

ದೂರ ದೂರವಾಗಿ ಇಟ್ಟಿರಿ. ಪತ್ರಿಕೆಗಳಲ್ಲಿ ನಿಮ್ಮ ವಿಷಯಗಳಾವುವೂ ಬರದಂತೆ ಎಚ್ಚರಿಕೆಯಾಗಿರಿ " ಎಂದು ಹೇಳಿದನು.

ಅನಿಲನೂ ಕನಕಂಳೂ ಆತನ ಹಿತ ವಚನಗಳಿಗೆ ಧನ್ಯವಾದಗಳನ್ನು ಹೇಳಿದರು. ಆತನು ಹೇಳಿದಂತೆಯೇ ನಡೆದುಕೊಳ್ಳುವುದಾಗಿ ತಿಳಿಸಿದರು. ಅನಂತರ ಅಲ್ಲಿಂದ ಬೀಳ್ಕೊಂಡು ಹೊರಟರು.

ದಾರಿಯಲ್ಲಿ ಬರುತ್ತಾ ಅನಿಲನು "ಕನಕಂ. ಈ ಅರವಿಂದನು ವಿಚಿತ್ರ ವಾದ ಮನುಷ್ಯ. ಕೆಲವು ವೇಳೆ ಹುಚ್ಚನಂತೆ ಕಂಡು ಬರುತ್ತಾನೆ. ಮತ್ತೆ ಕೆಲವು ವೇಳೆ ವಿವೇಕಿಯಂತೆ ಕಂಡು ಬರುತ್ತಾನೆ. ಅವನು ಹೇಳುವ ಮಾತು ಗಳು ಒಗಟಿನಂತಿವೆ" ಎಂದು.

"ಅದೇನೋ ಗೊತ್ತಿಲ್ಲ. ಅವನು ಜಗಳಗಂಟಿ, ಬುದ್ಧಿ ಇಲ್ಲದವನೆಂದು ಹೇಳುತ್ತಾರೆ."

"ಅದಿರಲಿ. ಅವನನ್ನು ನೋಡಿದರೆ ದುಡ್ಡಿಲ್ಲದಂತೆ ಕಂಡು ಬರುತ್ತದೆ. ಮನೆಯನ್ನು ಅಚ್ಚುಕಟ್ಟಾಗಿ ಇಟ್ಟುಕೊಳ್ಳುವುದಕ್ಕೂ ಅನುಕೂಲವಿರುವಂತೆ ಇಲ್ಲ. ಹಾಗಿರುವಾಗ ಈ ಮನೆಯಲ್ಲಿ ಯಾಕೆ ಇದ್ದಾನೆ"

"ತನಗೇನೂ ಕಡಿಮೆಯಾಗಿಲ್ಲವೆಂದು ತೋರಿಸಿಕೊಳ್ಳಲು ಅವನು ಹಾಗಿರಬಹುದು. ಅವನು ಈ ಫಿಲಿಂನವರ ಹತ್ತಿರ ಅವೆಲ್ಲಾ ನಡೆಯು ವುದಿಲ್ಲ."

"ಹಾಗಾದರೇನಾಗುತ್ತದೆ, ಎನ್ನುತ್ತೀ ?"

"ಈಗ ಅವನಿಗೆ ಸಾಧಾರಣವಾದ ಪಾತ್ರಗಳನ್ನಾದರೂ ಕೊಡುತ್ತಾರೆ. ಇನ್ನೂ ತಡವಾಡಿದರೆ ಬಹಳ ಕೀಳು ಪಾತ್ರಗಳನ್ನು ತೆಗೆದುಕೊಳ್ಳಬೇಕಾ ಗುತ್ತವೆ.

"ಅವನನ್ನು ನೋಡಿದರೆ ಹೀರೋ ಪಾರ್ಟು ವಿನಾ ಬೇರಾವ ಪಾರ್ಟನ್ನೂ ತೆಗೆದುಕೊಳ್ಳುವಂತೆ ಕಂಡು ಬರುವುದಿಲ್ಲ."

"ತೆಗೆದುಕೊಳ್ಳದಿದ್ದರೆ ಉಪವಾಸ ಸಾಯಬೇಕಾಗುತ್ತದೆ"

ಇಬ್ಬರಿಗೂ ಅದು ಅಪ್ರಿಯವಾದ ಮಾತಾಗಿತ್ತು.

ಅನಿಲನು ಮಾತು ಬದಲಾಯಿಸಿ " ಸರಿ, ಬಿಡು. ಬಹಳ ಸೆಕೆ

ಯಾಗುತ್ತಿದೆ. ಎಲ್ಲಿಯಾದರೂ ಹೋಗಿ ತಣ್ಣಗೆ ಸ್ವಲ್ಪ ಬಿಯರ್ ತೆಗೆದು ಕೊಂಡು ಹೋಗೋಣ " ಎಂದು ಹೇಳಿದನು.

ಕನಕಂ ಒಪ್ಪಿಕೊಂಡಳು.

# ೧೫

ವಾಸವದತ್ತ ಚಿತ್ರದ ನಿರ್ಮಾಣವು ಭರದಿಂದ ಸಾಗುತ್ತಲೇ ಇದ್ದಿತು.

ಆದರೆ ಮುಂದಿನ ದಿನಗಳು ಅನಿಲನಿಗೆ ಸುಖಪ್ರದವಾಗಿರಲಿಲ್ಲ. ಮೊದಲಿನಂತೆ ಜೀವನವು ಸರಾಗವಾಗಿಯೂ ಸರಳವಾಗಿಯೂ ಕಳೆಯಲಿಲ್ಲ.

ಅನಿಲನು ಮದರಾಸಿಗೆ ಹೋದುದು ತಿಂಗಳ ಮಧ್ಯ ಭಾಗವು ಕಳೆದ ನಂತರ. ಇವನನ್ನು ಇಳಿಸಿದ್ದ ಹೋಟಲಿಗೆ ಮೊದಲೇ ಸ್ವಲ್ಪ ಕೊಟ್ಟು ರೂಂ ಬುಕ್ ಮಾಡಿದ್ದರು. ಅದರಿಂದ ಹೊಸ ತಿಂಗಳು ಬಂದ ಕೂಡಲೇ ಅವನಿಗೆ ಬಿಲ್ ಬರಲಿಲ್ಲ. ಮುಂದಿನ ತಿಂಗಳೂ ಲೆಕ್ಕದಲ್ಲಿಯೇ ಕಳೆಯಿತು. ಅವನಿಗೆ ಬಿಲ್ ಬರುವುದಕ್ಕೆ ಒಂದೂವರೆ ತಿಂಗಳಾಯಿತು.

ಸ್ಟುಡಿಯೋದವರು ಮೊದಲು ಕೊಟ್ಟಿದ್ದ ಅಡ್ವಾನ್ಸ್ ಮುನ್ನೂರು ರೂಪಾಯಿ ಕಳೆದು ಇನ್ನೂ ಒಂದು ಸಾವಿರದ ನೂರೂ ಚಿಲ್ಲರೆಯಷ್ಟು ಬಿಲ್ ಬಂದಿತ್ತು.

ಒಂದೂವರೆ ತಿಂಗಳಿಗೆ ಸುಮಾರು ಒಂದೂವರೆ ಸಾವಿರ ರೂಪಾಯಿ. ತಿಂಗಳಿಗೆ ಸಾವಿರ ರೂಪಾಯಿ. ಅದನ್ನು ನೋಡಿ ಇಷ್ಟೊಂದು ಹೆಚ್ಚೇ ಎಂದು ತೋರಿತು. ಅನಂತರ " ಎಷ್ಟಾದರೇನು? ಸ್ಟುಡಿಯೋದವರು ತಾನೇ ಕೊಡುವುದು " ಎಂದು ಮನಸ್ಸಿಗೆ ಸಮಾಧಾನವನ್ನು ತಂದುಕೊಂಡನು.

ಸ್ಟುಡಿಯೋದಲ್ಲಿ ವೆಂಕಪ್ಪಯ್ಯನವರನ್ನು ನೋಡಿದಾಗ ಹೋಟೆಲ್

ಬಿಲ್ ಅವರ ಕೈಗೆ ಕೊಟ್ಟು ಅದನ್ನು ಕೊಡಿಸಲು ಏರ್ಪಾಟು ಮಾಡಬೇ ಕೆಂದು ಸೂಕ್ಷ್ಮವಾಗಿ ತಿಳಿಸಿದನು. ಅವರು ಆಗಲೆಂದು ಹೇಳಿ ಜೇಬಿನಲ್ಲಿ ಹಾಕಿಕೊಂಡರು.

ಆದರೆ ವೆಂಕಪ್ಪಯ್ಯನವರು ಹೋಟಲ್ ಬಿಲ್ ಚುಕ್ತಾ ಮಾಡಿಸು ವುದರಲ್ಲಿ ಆಸಕ್ತಿಯನ್ನು ವಹಿಸಿದಂತೆ ಕಂಡುಬರಲಿಲ್ಲ. ಇತ್ತ ಹೋಟಲಿ ನವರ ತಗಾದೆಯು ಹೆಚ್ಚಾಗ ತೊಡಗಿತು. ತಾನೇ ಹೋಗಿ ವೆಂಕಪ್ಪಯ್ಯ ನವರನ್ನು ಕಂಡು ಒಂದೆರಡು ಬಾರಿ ಹೇಳಿದನು. ಆದರೂ ಪ್ರಯೋಜನ ವಾಗಲಿಲ್ಲ. ಅವರು ಸಿಕ್ಕುವುದೇ ಕಷ್ಟವಾಗ ತೊಡಗಿತು. ಸಿಕ್ಕಿದಾಗ ಅವಸರದ ಕೆಲಸವಿರುತ್ತಿತ್ತು. ಬಿಡುವಿದ್ದು ಸಿಕ್ಕಿದರೆ ತಾವು ಒಂದೆರಡು ದಿನಗಳಲ್ಲಿ ಏರ್ಪಾಡು ಮಾಡುವುದಾಗಿ ಹೇಳುತ್ತಿದ್ದರು.

ಕಡೆಗೆ ಅನಿಲನು ಮ್ಯಾನೇಜರಾದ ಮಿ॥ ನಾರಾಯಣ್‌ರನ್ನು ಹೋಗಿ ಕಂಡು ವಿಷಯವೆಲ್ಲವನ್ನೂ ಹೇಳಿ ಹೋಟಲಿನ ತಗಾದೆಯು ಬಹಳವಾಗಿ ರುವುದಾಗಿ ತಿಳಿಸಿದನು.

ಅವರು "ಹೋಟೇಲ್ ಬಿಲ್ ನಾವು ಕೊಡಬೇಕೇ ?" ಎಂದು ಕೇಳಿದರು.

ಅನಿಲನಿಗೆ ಕೋಪವು ಬಂದಿತು. ಆದರೂ ಇದ್ದುದರಲ್ಲಿ ಸಮಾಧಾನ ವನ್ನು ತಂದುಕೊಂಡು " ನನ್ನ ಖರ್ಚುಗಳೆಲ್ಲವನ್ನೂ ಸ್ಟುಡಿಯೋದವರೇ ವಹಿಸಿ ಕೊಳ್ಳುತ್ತಾರೆಂದು ಮೊದಲೇ ವೆಂಕಪ್ಪಯ್ಯನವರು ಹೇಳಿದ್ದರು. ನಮ್ಮ ಕರಾರಿನಲ್ಲಿಯೂ ಹಾಗೆಯೇ ಇರುವಂತಿದೆ " ಎಂದು ಹೇಳಿದನು.

ಅನಿಲನು ಸಮಾಧಾನದಿಂದ ಮಾತನಾಡುತ್ತಿದ್ದೇನೆಂದುಕೊಂಡಿದ್ದರೂ ಅವನ ಧ್ವನಿಯಲ್ಲಿ ದುಗುಡವಿತ್ತು.

ನಾರಾಯಣ್ ನಯವಾಗಿ "ಕೋಪಮಾಡಿ ಕೊಳ್ಳಬೇಡಿರಿ, ಅನಿಲ್ ಕುಮಾರ್. ತಮ್ಮದೇ ಅಲ್ಲ. ಈ ಚಿತ್ರದಲ್ಲಿ ಪಾರ್ಟು ಮಾಡುವ ಪ್ರತಿ ಯೊಬ್ಬರ ಖರ್ಚನ್ನೂ ನಾವೇ ವಹಿಸಿಕೊಳ್ಳುತ್ತಿದ್ದೇವೆ. ಈ ಫಿಲಿಂ ಉದ್ಯೋ ಗದ ಸಂಪ್ರದಾಯವೇ ಅದು. ತಾವು ಹೊಸಬರು. ಅದರಿಂದ ತಿಳಿಯದಿರ ಬಹುದು, ಅಷ್ಟೇ. ನಾವು ನಟನಟಿಯರಿಗಾಗಿ ದೊಡ್ಡ ಬಂಗಲೆಯನ್ನು ಮಾಡಿದ್ದೇವೆ. ಅಲ್ಲಿ ಅವರಿರುವುದಕ್ಕೆ ಸ್ಥಳವಿದೆ. ಕಾಫೀ, ತಿಂಡಿ, ಸ್ನಾನ

ಊಟ ಎಲ್ಲಕ್ಕೂ ಅಲ್ಲಿ ಸರಿಯಾಗಿ ಏರ್ಪಾಟು ಮಾಡಿದ್ದೇವೆ. ಅಲ್ಲಿದ್ದರೆ ಖರ್ಚು ನಮ್ಮದು. ಹಾಗೆ ಅಲ್ಲಿರದೇ ಇರುವವರು ತಮ್ಮ ಏರ್ಪಾಟು ತಾವೇ ಮಾಡಿಕೊಳ್ಳಬೇಕು" ಎಂದರು.

"ಹಾಗಾದರೆ ವಿಹಾರ್ ಹೋಟಲಿನಲ್ಲಿ ನನಗಾಗಿ ಸ್ಥಳವೇರ್ಪಡಿಸಿದ್ದವರು ನೀವೇ ಅಲ್ಲವೇ ?"

"ಹೌದು. ಅಲ್ಲಿ ಮೊದಲೇ ಹತ್ತು ದಿನಗಳಿಗಾಗುವ ಹಣ ಕೊಟ್ಟಿದ್ದೆವು. ಆ ಕಾಲದೊಳಗೇ ನೀವು ನಮ್ಮ ಮೆಸ್‌ಗೇ ಬರುತ್ತೀರಿ ಅಥವಾ ನಿಮ್ಮ ಏರ್ಪಾಡು ನೀವೇ ಮಾಡಿಕೊಳ್ಳುತ್ತೀರೆಂದಿದ್ದೆವು. ನೀವು ಬರಲಿಲ್ಲ"

" ವೆಂಕಪ್ಪಯ್ಯನವರು ಇದೊಂದೂ ಹೇಳಲಿಲ್ಲವಲ್ಲ "

" ಹೇಳಿದ್ದರೆ ಚೆನ್ನಾಗಿತ್ತು. ಸಾಧಾರಣವಾದ ವಿಷಯ ನಿಮಗೆ ಗೊತ್ತಿರದೇ ಇರುತ್ತದೆಯೋ ಎಂದು ಹೇಳದೇ ಇರಬಹುದು "

' ನಾನು ಈರೀತಿಯಾಗುತ್ತದೆಂದು ಕೊಂಡಿರಲಿಲ್ಲ "

" ಹಾಗೆ ಹೇಳಬೇಡಿ, ಮಿ॥ ಅನಿಲ್ ಕುಮಾರ್. ಇಲ್ಲಿಯ ವ್ಯವಹಾರವೇ ಹೀಗೆ. ನಮ್ಮ ಹೀರೋಯಿನ್ ಇದ್ದಾರೆಯಲ್ಲ. ಆಕೆಗೆ ಮೆಸ್‌ನಲ್ಲಿರುವ ಇಷ್ಟವಿಲ್ಲ. ಅವರ ಏರ್ಪಾಟು ಅವರೇ ಮಾಡಿಕೊಂಡಿದ್ದಾರೆ. ಬೇಕಾದರೆ ವಿಚಾರಿಸಿ ನೋಡಿರಿ "

ಅನಿಲ ಕುಮಾರನಿಗೆ ಏನು ಮಾಡಬೇಕೆಂದು ದಿಕ್ಕು ಕಾಣದೇ ಹೋಯಿತು.

" ಮಿ॥ ಅನಿಲ್ ಕುಮಾರ್ ! ನೀವು ಅಗರ್ಭ ಶ್ರೀಮಂತರೆಂದು ಕೇಳಿದ್ದೇನೆ. ಈ ಜುಜಬಿ ಒಂದು ಸಾವಿರ ರೂಪಾಯಿಗೇಕೆ ಕಿರಿಕಿರಿ ಮಾಡಿಕೊಳ್ಳುತ್ತೀರಿ. ನಾವು ನಿಮಗೆ ವಿಶೇಷ ಸವಲತ್ತು ಕೊಡುತ್ತಿದ್ದೆವು. ಆದರೆ ನಮ್ಮ ಸ್ಟುಡಿಯೋದಲ್ಲಿ ವರ್ಷಕ್ಕೆ ಆರು ಚಿತ್ರಗಳು ತಯಾರಾಗುತ್ತವೆ. ಎಲ್ಲರೂ ಸವಲತ್ತು ಕೇಳುತ್ತಾರೆ. ಇನ್ನೆಷ್ಟು ದಿನ. ಎರಡು ತಿಂಗಳು ತಾನೇ. ನಮ್ಮ ಮೆಸ್‌ಗೇ ಬಂದುಬಿಡಿ. ನಾನು ಎಲ್ಲಾ ಅನುಕೂಲಗಳನ್ನು ಮಾಡಿಕೊಡುತ್ತೇನೆ."

ಅನಿಲನ ಮನಸ್ಸಿನಲ್ಲಿ ನಾನಾ ಬಗೆಯಾದ ಆಲೋಚನೆಗಳು ಬಂದುವು.

ಅರವಿಂದನು ಚೆಟ್ಟಿಯಾರರ ವಿಷಯವಾಗಿ ಹೇಳಿದ್ದೆಲ್ಲವೂ ನಿಜವೇನೋ ಎಂದು ತೋರಿತು. ತನಗೆ ಮೋಸವಾಯಿತೇನೋ ಎಂದು ಕೊಂಡನು.

ಕಡೆಗೆ "ಈಗೇನು ಮಾಡುವುದು?" ಎಂದನು.

ನಾರಾಯಣ್ ಉತ್ತರ ಕೊಡದೇ ಸುಮ್ಮನಿದ್ದರು.

"ಹೋಗಲಿ, ನನಗೆ ಅಡ್ವಾನ್ಸ್ ಆದರೂ ಕೊಡಿ. ಹೋಟಲಿಗೆ ಕೊಡುವುದನ್ನು ಕೊಟ್ಟುಬಿಟ್ಟು, ಮುಂದಿನ ಏರ್ಪಾಟು ಮಾಡಿಕೊಳ್ಳುತ್ತೇನೆ."

" ತಾವು ಹೇಳುವುದು ಸರಿ. ಆದರೂ ನಾನು ಹೇಳುವುದನ್ನು ಸ್ವಲ್ಪ ಕೇಳಿರಿ.

"ಈಗ ಮೂರು ಭಾಷೆಗಳಲ್ಲಿ ಚಿತ್ರ ತಯಾರಾಗುತ್ತಿರುವುದರಿಂದ ಎಷ್ಟು ಖರ್ಚಾಗುತ್ತಿದೆ ಎಂಬುದನ್ನು ನೀವೂ ಬಲ್ಲಿರಿ. ಚೆಟ್ಟಿಯಾರರು ಹಣಕಾಸುಗಳನ್ನು ಜೊತೆ ಮಾಡುವುದಕ್ಕೆ ಓಡಿಯಾಡುತ್ತಿದ್ದಾರೆ. ಅವರು ಸಿಕ್ಕುವುದೇ ಕಷ್ಟವಾಗಿದೆ. ಅವರನ್ನು ನೋಡಿದೊಡನೆಯೇ ಅಡ್ವಾನ್ಸು ಕೊಡಿಸುವ ಏರ್ಪಾಟು ಮಾಡುತ್ತೇನೆ. ಸಾವಿರದ ನೂರು ರೂಪಾಯಿಗಳಿಗೆ ಒಂದು ರಸೀತಿಯನ್ನು ಕೊಡಿ. ಹೇಗಾದರೂ ಅದನ್ನು ಹೋಟಲಿನವರಿಗೆ ಪಾವತಿ ಮಾಡಿಸುತ್ತೇನೆ. ತಾವು ಈಗ ಸದ್ಯದಲ್ಲಿ ನಮ್ಮ ಮೆಸ್‌ಗೆ ಬಂದು ಇದ್ದುಬಿಡಿರಿ."

ಅನಿಲನು ಮ್ಯಾನೇಜರು ಹೇಳಿದಂತೆ ಕೇಳದೇ ಬೇರೆಯ ವಿಧಿಯೇ ಇರಲಿಲ್ಲ. ಒಪ್ಪಿಕೊಂಡನು.

ಜೀವ್ ಸ್ಟುಡಿಯೋಸ್‌ನವರು ಕೊಟ್ಟಿದ್ದ ಸಾವಿರ ರೂಪಾಯಿಗಳ ಅಡ್ವಾನ್ಸ್ ಅನುದಿನದ ಖರ್ಚಿಗೆ ಆಗಿಹೋಗಿದ್ದಿತು. ಅರಸುರತ್ನ ಬೆಂಗಳೂರಿನಿಂದ ಹೊರಟಾಗ ಕೊಟ್ಟ ಕವರಿನಲ್ಲಿದ್ದ ಸಾವಿರ ರೂಪಾಯಿ ಹಾಗೆಯೇ ಇದ್ದಿತು. ಇದುವರೆವಿಗೆ ಅದನ್ನು ಖರ್ಚು ಮಾಡುವ ಆವಶ್ಯಕತೆಯು ಬಂದಿರಲಿಲ್ಲ. ಈಗ ನಾರಾಯಣ್‌ರೊಡನೆ ಮಾತನಾಡಿದ ನಂತರವಂತೂ ಅದನ್ನು ತೆಗೆಯಲು ಹೆದರಿಕೆಯಾಯಿತು. ಅವರಿಂದ ಮೆಸ್‌ನಲ್ಲಿಯೇ ಬಂದಿರಲಾರಂಭ ಮಾಡಿದನು.

ಆದರೆ ಎರಡು ದಿನಗಳಲ್ಲಿ ಆ ಮೆಸ್ ಅನಿಲನಿಗೆ ಅಸಹ್ಯವಾಗ ತೊಡ

ಗಿತ್ತು. ಅರಸುರತ್ನಿಯ ಮನೆಗೆ ಬಂದು ಸೇರಿದ ದಿನದಿಂದ ಚೊಕ್ಕ ಭೋಜನ, ಒಳ್ಳೆಯ ಉಪಚಾರಗಳು ಅಭ್ಯಾಸವಾಗಿದ್ದ ಅವನಿಗ ಒಂದೊಂದು ದಿನವನ್ನು ಕಳೆಯುವುದೂ ಕಷ್ಟವಾಗ ತೊಡಗಿತು.

ಬೆಳಗಾಗಿನ ಹೊತ್ತು ಕಾಫೀ, ತಿಂಡಿಗಳನ್ನು ಮಾಡುತ್ತಾರೆಂದಿತ್ತು ಆದರೆ ಖಾತರಿಯಾಗಿ ಸಿಕ್ಕುತ್ತಿದ್ದುದು ಕಾಫಿಯೊಂದೇ. ಆ ಕಾಫಿಯೂ ಚೆನ್ನಾಗಿರುತ್ತಿರಲಿಲ್ಲ. ಅದಕ್ಕಾಗಿ ನಟನಟಿಯರು ಹಜಾರದಲ್ಲಿ ಲೋಟಾ ಗಳನ್ನು ಹಿಡಿದು ಕಾಗೆಗಳಂತೆ ಅರಚುತ್ತಾ ಕುಳಿತಿರುತ್ತಿದ್ದರು. ಬೆಳಗಾಗ ತಿಂಡಿಯನ್ನು ಮಾಡಿದ ದಿನ ಹಬ್ಬವೆಂದೇ ಹೇಳಬೇಕು.

ಮಧ್ಯಾಹ್ನದ ಹೊತ್ತಿನ ಊಟವಂತೂ ದೇವರಿಗೇ ಪ್ರೀತಿ. ಅನ್ನ, ಹುಳಿ, ನೀರು ಮಜ್ಜಿಗೆ ಅಥವಾ ಅನ್ನ, ಸಾರು, ಪಲ್ಯವೆಂದು ಒಂದು ಪದಾರ್ಥ, ನೀರು ಮಜ್ಜಿಗೆ. ನಂಚಿಕೊಳ್ಳಲು ಉಪ್ಪಿನಕಾಯಿ ಅಥವಾ ಚಟ್ನಿ ಗಳು ಸಹ ಇರುತ್ತಿರಲಿಲ್ಲ ಉಪ್ಪಿನಲ್ಲಿಯೇ ತೃಪ್ತಿಪಡಬೇಕಾಗಿತ್ತು. ಕೆಲವು ನಟರಂತೂ ಊಟದ ಸಮಯದಲ್ಲಿ ಹಸೀ ಈರುಳ್ಳಿಯನ್ನು ನಂಚಿ ಕೊಳ್ಳಲು ತಂದಿಟ್ಟುಕೊಳ್ಳುತ್ತಿದ್ದರು.

ಷೂಟಿಂಗ್ ದಿನ ಸ್ಟುಡಿಯೋಗೆ ಅದೇ ಸಾರೂ ಮತ್ತು ಮಜ್ಜಿಗೆ ಗಳಲ್ಲಿ ಅನ್ನವನ್ನು ಕಲಸಿ ಕಳಿಸುತ್ತಿದ್ದರು.

ಅನಿಲನಿಗೆ ಆ ಮೆಸ್‌ನಲ್ಲಿ ಒಂದು ಕೋಣೆಯನ್ನು ಬಿಟ್ಟುಕೊಟ್ಟಿದ್ದರು. ಅವನು ಅಲ್ಲಿರುತ್ತಾ ಹೋಟಲಿನಿಂದ ಊಟ, ಕಾಫಿಗಳನ್ನು ತರಿಸಿಕೊಳ್ಳು ತ್ತಿದ್ದನು.

ಅದೂ ಬಹಳ ದಿನಗಳು ಸರಿಬೀಳಲಿಲ್ಲ. ಒಂದು ದಿನ ಸ್ನಾನಕ್ಕಾಗಿ ಎರಡು ಗಂಟೆಗಳ ಕಾಲ ಕಾಯಬೇಕಾಗಿದ್ದಿತು. ಬೇಜಾರುಗೊಂಡು ಕಿಲ್ ಪಾಕ್‌ನಲ್ಲಿ ಸಣ್ಣದೊಂದು ಬಂಗಲೆಯನ್ನು ಬಾಡಿಗೆಗೆ ತೆಗೆದುಕೊಂಡು ಹೊರಟು ಹೋದನು.

ಚಿತ್ರ ನಿರ್ಮಾಣದ ಉತ್ತರಾರ್ಧದಲ್ಲಿ ಅನಿಲನಿಗೆ ಈ ಜನಗಳ ವಿಷಯ ವೆಲ್ಲವೂ ಚೆನ್ನಾಗಿ ಗೊತ್ತಾಗುತ್ತ ಬಂದಿತು. ಅಲ್ಲಿ ಕೆಲಸಮಾಡುವವರೆಲ್ಲ ರಿಂದಲೂ ಕರಾರುಗಳನ್ನು ಬರೆಸಿಕೊಂಡಿದ್ದರು. ಯಾರಿಗೂ ಅವರು ಏನೂ ಬರೆದು ಕೊಟ್ಟಿರಲಿಲ್ಲ. ಹಣ ಕೇಳಿದರೆ ಕೊಡುತ್ತಿರಲಿಲ್ಲ. ನಟನಟಿಯರಿಗೆ

ಮ್ಯಾನೇಜರು ಹತ್ತು ಇಪ್ಪತ್ತು ರೂಪಾಯಿಗಳನ್ನು ಸಹ ಕೊಡಲು ಸತಾಯಿಸುತ್ತಾ ಇದ್ದರು. ಬೆಳಗಿನಿಂದ ಕಾಫೀ ತಿಂಡಿಗಳಿಲ್ಲದೇ ಶೃಂಗಾರವನ್ನು ಅಭಿನಯಿಸ ಬೇಕಾಗಿತ್ತು. ಬೀಡಿಗೆ ಸಹ ಕಾಸಿಲ್ಲದೆ ಜೀವಚ್ಛ್ರವದಂತೆ ಬದುಕಿದ್ದು ಅಲ್ಲಿ ಹೋಗಿ ರಾಜನಂತೆ, ಮಂತ್ರಿಯಂತೆ ನಟಿಸ ಬೇಕಾಗಿದ್ದಿತು.

ಅನಿಲನಿಗೂ ಕಷ್ಟಗಳು ಬರದೇ ಇರಲಿಲ್ಲ. ಬರುಬರುತ್ತಾ ಹಣವಿಲ್ಲದೇ ಹೋಯಿತು. ಒಂದೊಂದು ದಿನ ಪೆಟ್ರೋಲಿಗೆ ಸಹ ಹಣವಿಲ್ಲದೇ ಬಸ್ಸಲ್ಲಿಯೋ ಅಥವಾ ನಡೆದುಕೊಂಡೋ ಸ್ಟುಡಿಯೋಗೆ ಹೋಗಬೇಕಾಗುವುದು. ಕೆಲವು ಬಾರಿ ಮತ್ತೊಬ್ಬರು ಕೊಡುವ ಸಿಗರೇಟಿನ ಮೇಲೆಯೇ ಅವಲಂಬಿಸ ಬೇಕಾಗುವುದು. ಮುಗ್ಗಟ್ಟು ಬಂದಾಗಲೆಲ್ಲಾ ನಾರಾಯಣರನ್ನು ಹೋಗಿ ಹಣ ಕೇಳುವನು. ಅವರು ಮಾಮೂಲಿನಂತೆ ಸತಾಯಿಸುವರು. ಮುರಾಡ ಹಾಕಿ ಮನೆಯಲ್ಲಿ ಕುಳಿತುಕೊಳ್ಳುವವರೆವಿಗೆ ಅಡ್ವಾನ್ಸು ಸಿಕ್ಕುತ್ತಿರಲಿಲ್ಲ. ಅವಶ್ಯಕವಿರಲಿ, ಇಲ್ಲದಿರಲಿ ಹಣ ಬೇಕೆಂದು ತೋರಿದಾಗ ಮುರಾಡ ಹಾಕುವುದು ಅನಿಲನಿಗೂ ಅಭ್ಯಾಸವಾಯಿತು.

ತಿಂಗಳಿಗೆ ಒಮ್ಮೆಯೋ, ಎರಡು ಬಾರಿಯೋ ಅರಸು ರತ್ನೆಯು ಮದರಾಸಿಗೆ ಬಂದಾಗ ಅನಿಲನಿಗೆ ಫೋನ್ ಮಾಡುತ್ತಿದ್ದಳು. ಅವಳು ಹೋಗುವವರೆವಿಗೆ ಅನಿಲನು ಅವಳೊಡನೆ ಹೋಟಲಿನಲ್ಲಿಯೇ ಇದ್ದು ಬಿಡುವನು.

ಅವಳು ಮದರಾಸಿನಲ್ಲಿರುವಾಗ ಒಂದು ಬಾರಿ ಅನಿಲಗೆ ಹಣಕ್ಕೆ ತೊಂದರೆಯಾಯಿತು. ಅವಳನ್ನು ಕೇಳಬೇಕೆಂದು ಕೊಂಡನು. ಕೇಳಲು ನಾಚಿಕೆಯಾಗಿ ಸುಮ್ಮನಾದನು. ಕೆಲವು ಬಾರಿ ವಾಸ್ತವವಾಗಿ ಹಣವಿಲ್ಲದೇ ತೊಂದರೆಯಾದಾಗ ಬೆಂಗಳೂರಿಗೆ ಬರೆದು ಹಣ ತರಿಸಿಕೊಳ್ಳಬೇಕೆಂದು ಆಲೋಚನೆ ಮಾಡುವನು. ಮರುಕ್ಷಣದಲ್ಲಿಯೇ ಅದು ಸರಿಯಲ್ಲವೆಂದೂ ತನ್ನ ವಾಸ್ತವ ಸ್ಥಿತಿಯು ಅರಸುರತ್ನೆಗೆ ಗೊತ್ತಾಗುವುದಲ್ಲ, ಎಂದೂ ಮನಸ್ಸು ಹಿಂದೇಟು ಹೊಡೆಯುವುದು. ಒಂದೆರಡು ತಿಂಗಳು ಈ ಅವಸ್ಥೆಯನ್ನು ಅನುಭವಿಸಿ ಬಿಡೋಣವೆಂದುಕೊಳ್ಳುವನು.

ಈ ಸ್ಥಿತಿಯಲ್ಲಿ ವೆಂಕಪ್ಪಯ್ಯನು ಅನಿಲಕುಮಾರನ ಬಳಿಗೆ ತಾನಾಗಿ

ಬರುತ್ತಿರಲಿಲ್ಲ. ಎಲ್ಲಿಯಾದರೂ ಸಿಕ್ಕಿದರೆ ನುಣುಚಿಕೊಂಡು ಹೊರಟು ಹೋಗುವನು

ಒಮ್ಮೆ ಸಿಕ್ಕಿಹಾಕಿಕೊಂಡ ಸಂಪಾದಕನಿಗೆ ಅನಿಲನು ಗ್ರಹಚಾರ ಬಿಡಿಸಿಬಿಟ್ಟನು.

ಆಗಾತನು “ಈ ಫಿರಂನವರೇ ಹೀಗೆ ಕಣ್ರಿ. ಏನೋ ನಮಗೂ ಸ್ವಲ್ಪ ಅಡ್ವರ್‌ಟೈಜ್‌ಮೆಂಟ್ ಸಿಕ್ಕಲಿ ಎಂದು ಓಡಿಯಾಡುತ್ತೇವೆ. ಆ ಚಿಟ್ಟಿ ಯಾರೇನು, ನಮ್ಮ ಚಿಕ್ಕಪ್ಪನ ಮಗನೇ” ಎಂದು ಹೇಳಿದನು.

ಅನಿಲನು ಆ ಮಾತಿಗೆ ಏನೂ ಜವಾಬು ಹೇಳದೇ ಮನಸ್ಸಿನಲ್ಲಿಯೇ ನಕ್ಕನು.

# ೧೬

ಹಣಕಾಸಿನ ತೊಂದರೆ, ಕಾರ್ಪಣ್ಯ ಜೀವನ, ನಿರ್ಮಾತೃಗಳೊಡನೆ ಅಸಮಾಧಾನ ಇವುಗಳೇನೇ ಇದ್ದರೂ ಚಿತ್ರನಿರ್ಮಾಣದ ಕಡೆಯ ದಿನಗಳಲ್ಲಿ ಅನಿಲಕುಮಾರನಿಗೆ ಬಹಳ ಸಂತೋಷವಾಗುತ್ತಿತ್ತು.

ವಾಸವದತ್ತಾದ ಜಾಹಿರಾತು ಪೇಜುಗಳ ಗಟ್ಟಲೆಯಾಗಿ ಬರುತ್ತಿದ್ದವು. ಅವುಗಳಲ್ಲೆಲ್ಲಾ ಅವನ ಹೆಸರೂ, ವಿವಿಧ ಭಂಗಿಗಳಲ್ಲಿ ಅವನ ಭಾವ ಚಿತ್ರಗಳೂ ಕಂಡುಬರುತ್ತಿದ್ದವು. ಅದನ್ನು ನೋಡಿದಾಗಲೆಲ್ಲಾ ಅವನ ಎದೆಯು ಉಬ್ಬಿದಂತೆ ಆಗುತ್ತಿದ್ದಿತು.

ಹಾಗೆಯೇ ಸ್ಟುಡಿಯೋದ ಕಾರ್ಯಕಲಾಪಗಳೂ ಸಹ ಮುಗಿಯುತ್ತ ಬಂದುವು. ಚಿತ್ರದ ಅನೇಕ ಭಾಗಗಳನ್ನು ಸ್ಟುಡಿಯೋದಲ್ಲಿಯೇ ಪ್ರೊಜೆಕ್ಟ್ ಮಾಡಿ ನೋಡಿದರು. ರಜತ ಪರದೆಯ ಮೇಲೆ ತನ್ನ ಸ್ವರೂಪವನ್ನು ನೋಡಿದಾಗ ಅನಿಲನಿಗೆ ಎಷ್ಟು ಆನಂದವಾಯಿತೆಂಬುದನ್ನು ವರ್ಣಿಸುವುದು ಕಷ್ಟ. ನೋಡುತ್ತಾ, ನೋಡುತ್ತಾ ತನಗೆ ರೆಕ್ಕೆಗಳು ಬಂದಂತೆಯೂ ತಾನೆಲ್ಲಿಗೋ ಹಾರಿ ಹೊರಟು ಹೋಗುವಂತೆಯೂ ಭಾಸವಾಗುವುದು.

ಕೆಲವು ಬಾರಿ ಅವನಿಗೆ ವಾಸವದತ್ತಾದ ಚಿತ್ರದಲ್ಲಿನ ಪ್ರಣಯ ಪ್ರಸಂಗಗಳು ನೆನಪಿಗೆ ಬರುವುವು. ಪರದೆಯ ಮೇಲೆ ತಾನೂ ಕಾಂಚನಲತೆಯೂ

ಪ್ರೀತಿಸುತ್ತಿರುವಂತಿರುವ ವಿವಿಧ ಭಂಗಿಗಳೂ ಕಣ್ಣು ಮುಂದೆ ಬಂದು ನಿಲ್ಲುವುವು. ವಾಸ್ತವವಾಗಿ ಅವುಗಳೆಷ್ಟೋ ಚೆನ್ನಾಗಿ ಕಂಡು ಬರುತ್ತವೆ. ಅವುಗಳನ್ನು ಜ್ಞಾಪಿಸಿಕೊಂಡಾಗಲೆಲ್ಲಾ ಅನಿಲನು ನೈಜ ಜೀವನಕ್ಕಿಂತಲೂ ಕೃತಕ ಜೀವನವೇ ಮನೋಹರವಾಗಿ ಕಂಡುಬರುತ್ತದೆಯಲ್ಲಾ ಎಂದುಕೊಳ್ಳುವನು.

ಕ್ಷಿಪ್ರದಲ್ಲಿಯೇ ವಾಸವದತ್ತಾ ಚಿತ್ರ ಪ್ರದರ್ಶನದ ದಿನವು ಬಂದಿತು. ಒಂದೇ ದಿನ ದಕ್ಷಿಣ ಭಾರತದ ವಿವಿಧ ಕೇಂದ್ರಗಳಲ್ಲಿ ಪ್ರದರ್ಶನದ ಏರ್ಪಾಡುಗಳು ನಡೆದುವು. ಮದರಾಸಿನಲ್ಲಿಯಂತೂ ಮೂರು ಥಿಯೇಟರುಗಳಲ್ಲಿ ಇದೇ ಆಟ.

ಮಾರನೆಯ ದಿನವೇ ಮದರಾಸಿನ ಪತ್ರಿಕೆಗಳಲ್ಲೆಲ್ಲಾ ಚಿತ್ರವಿಮರ್ಶೆಯು ಬಂದಿತು. ವಾಸವದತ್ತಾ ಚಿತ್ರವನ್ನು ಕುರಿತು ತಮಿಳು, ತೆಲುಗು, ಇಂಗ್ಲೀಷ್ ಪತ್ರಿಕೆಗಳೆಲ್ಲವೂ ಬರೆದುವು. ತಮಿಳು, ತೆಲುಗು ಚಿತ್ರಗಳಲ್ಲಿ ಇಂಥಹ ಲಲಿತ ನಾಯಕನನ್ನು ಇದುವರೆವಿಗೆ ನೋಡಿಯೇ ಇಲ್ಲವೆಂದು ಕೊಂಡಾಡಿದುವು. ಅದರ ನಟನಶೈಯುರನ್ನೂ ಪ್ರಶಂಸಿಸಿದುವು. ಮದರಾಸಿನಲ್ಲಿಯೂ ಇತರ ಮುಖ್ಯಸ್ಥಳಗಳಲ್ಲಿಯೂ ಅನಿಲಕುಮಾರನೂ,ಕಾಂಚನಲತೆಯೂ ಚಿತ್ರ ಪ್ರೇಕ್ಷಕರಿಗೆ ಭೇಟಿ ಕೊಡಬೇಕೆಂದು ಸ್ಟುಡಿಯೋದವರು ನಿಶ್ಚಯ ಮಾಡಿದರು. ರಾಜರತ್ನಂ ಚೆಟ್ಟಿಯಾರ್ ಅನಿಲನನ್ನು ಕರೆದು ಎಷ್ಟೋ ಆಶಾದಾಯಕವಾದ ಮಾತುಗಳನ್ನು ಆಡಿ, ಹೋಗಿ ಬರಬೇಕೆಂದು ಕೋರಿದರು.

ಅಷ್ಟು ಹೊತ್ತಿಗೆ ಅನಿಲನಿಗೆ ಚೆಟ್ಟಿಯಾರರಲ್ಲಿ ಸ್ವಲ್ಪವೂ ಭರವಸೆ ಇರಲಿಲ್ಲ. ಅವರ ವಿಷಯವಾಗಿ ಅರವಿಂದನು ಹೇಳಿದುದೆಲ್ಲವೂ ನಿಜವೆಂದೇ ಅವನಿಗೆ ತೋರಿತು. ಏನೋ ಬಂದಷ್ಟು ಹಣವನ್ನು ತೆಗೆದುಕೊಂಡು ಅವರ ಸಂಬಂಧವನ್ನು ಕಡಿದುಕೊಳ್ಳಬೇಕೆಂದು ಯೋಚನೆ ಮಾಡುತ್ತಿದ್ದನು.

ಹಾಗೆ ಕಡಿದುಕೊಳ್ಳುವ ಮೊದಲು ಕಡೆಯದಾಗಿ ಈ ಪ್ರವಾಸವೊಂದನ್ನು ಮುಗಿಸ ಬೇಕಾಗಿದ್ದಿತು. ಚೆಟ್ಟಿಯಾರ್ ಕೊಟ್ಟ ಕೇವಲ ಭರವಸೆಯಿಂದ ಅನಿಲಕುಮಾರನು ಆ ಪ್ರವಾಸಕ್ಕೆ ಹೋಗಲು ಒಪ್ಪಿಕೊಂಡನೆಂದು ಹೇಳಲಾಗುವುದಿಲ್ಲ. ಅವನಿಗೆ ಅಂತಹ ಪ್ರವಾಸದಲ್ಲಿ ಬಹಳ ಆಶೆಯಿದಿತು.

ಪ್ರವಾಸವು ಇಪ್ಪತ್ತು ದಿನ, ಒಂದು ತಿಂಗಳ ಕಾಲ ಅವಿಶ್ರಾಂತವಾಗಿ ನಡೆಯಿತು. ಹೋದ ಕಡೆಗಳಲ್ಲೆಲ್ಲಾ ಈ ಪ್ರಮುಖ ನಟನಟಿಯರು ಒಂದೊಂದು ಊರಿನಲ್ಲಿಯೂ ವಿವಿಧ ಪ್ರದರ್ಶನಗಳಿಗೆ ಹೋಗುವರು. ಇವರು ಗಳು ತೆರೆಯ ಮುಂದಿನ ಜಗುಲಿಯ ಮೇಲೆ ಕಾಣಿಸಿಕೊಳ್ಳುತ್ತಲೇ ಜನಗಳು ಹರ್ಷೋದ್ಗಾರ ಮಾಡುವರು. ಚಿತ್ರಮಂದಿರದವರೂ, ಪುರಪ್ರಮುಖರೂ ಮನ್ನಣೆ ಮಾಡಿ, ಸತ್ಕರಿಸುವರು. ಎಷ್ಟೋ ಕಡೆ ಕೊರಳಿಗೆ ಹಾಕಿದ ಪುಷ್ಪ ಹಾರಗಳು ಅನಿಲನಿಗೆ ಭಾರವಾಗಿ ಕಂಡುವು.

ಹೊರಗಡೆ ಟಿಕೆಟ್ಟಿಗಾಗಿ ಕ್ಯೂ ನಿಂತಿರುತ್ತಿದ್ದ ಜನರ ಸಾಲನ್ನೂ, ಒಳಗಡೆ ತುಂಬಿರುತ್ತಿದ್ದ ಜನಸ್ತೋಮವನ್ನೂ, ನೋಡಿ ಅನಿಲನು ಇಷ್ಟೊಂದು ಹಣ ಬರುತ್ತಿದ್ದರೂ ಚೆಟ್ಟಿಯಾರ್ ನ್ಯಾಯವಾಗಿ ಕೊಡಬೇಕಾದುದನ್ನು ಕೊಡುವುದಿಲ್ಲವಲ್ಲಾ ಎಂದು ಉದ್ರೇಕಗೊಳ್ಳುತ್ತಿದ್ದನು.

ಬೆಂಗಳೂರಿನ ಮೋರ್ಹ್ ಥಿಯೇಟರಿನಲ್ಲಿಯೂ ವಾಸವದತ್ತಾ ಪ್ರದ ರ್ಶಿಸಲ್ಪಟ್ಟಿತು. ಎರಡನೆಯ ಆಟಕ್ಕೆ ಈ ನಟನಟಿಯರು ಹೋಗಲು ಸ್ವಲ್ಪ ತಡವಾಯಿತು. ಹೋಗುವ ವೇಳೆಗೆ ಏಳೂವರೆ ಆಗಿದ್ದಿತು. ಅದರಿಂದ ಇಂಟರ್‌ವಲ್‌ನಲ್ಲಿ ಪ್ರೇಕ್ಷಕರಿಗೆ ಭೇಟಿ ಕೊಡಲು ಬಾಲ್ಕನಿಯಲ್ಲಿ ಕುಳಿತಿದ್ದರು.

ಇನ್ನೇನು ವಿಶ್ರಾಮಕಾಲಕ್ಕೆ ಐದು ನಿಮಿಷಗಳಿವೆ ಎನ್ನುವಾಗ ಚಿತ್ರ ಮಂದಿರದ ವ್ಯವಸ್ಥಾಪಕರು ಬಂದು ಸೂಚನೆಯನ್ನು ಕೊಟ್ಟರು. ಹೋಗು ವಾಗ ಬಲಗಡೆಯ ಸಾಲಿನಲ್ಲಿ ಯಾರೋ ಕುಳಿತಿರುವುದನ್ನು ಅನಿಲನು ನೋಡಿದನು. ಹಿಂದುಗಡೆಯಿಂದ ನೋಡಿ ಅರಸುರತ್ನೆಯೇ ಎಂದು ಕೊಂಡನು. ಆ ವ್ಯಕ್ತಿಯನ್ನು ಸಮೀಪಿಸಿದಾಗ ನಿಂತುಕೊಂಡು ನೋಡಿದನು.

ಅಲ್ಲಿ ಕುಳಿತಿದ್ದವಳು ಅರಸುರತ್ನೆ !

ಅನಿಲ ಅವಳನ್ನು ತನ್ನೊಡನೆ ಬರಬೇಕೆಂದು ಕರೆದನು. ಆಕೆ ಹಾಗೆ ಬರುವುದು ಚೆನ್ನಾಗಿರುವುದಿಲ್ಲವೆಂದು ನಿವಾರಿಸಲು ಪ್ರಯತ್ನಪಟ್ಟಳು. ಆದರೆ ಅವನು ಬಿಡಲಿಲ್ಲ.

ಈ ಎಳೆದಾಟದಲ್ಲಿ ಪ್ರೇಕ್ಷಕರ ಗಮನವು ಸೆಳೆಯಲ್ಪಡುವುದೆಂದು ವಿಧಿ ಇಲ್ಲದೇ ಅರಸುರತ್ನೆಯು ಅವನೊಡನೆ ಹೋದಳು. ಆದರೆ ತೆರೆಯು ಸಮೀ

ಹಿಸಿದೊಡನೆಯೇ ಅವನಿಂದ ದೂರವಾಗಿ ಚಿತ್ರಮಂದಿರದವರೊಡನೆ ಕೂಡಿ ಕೊಂಡಳು.

ತೆರೆಯ ಮುಂದೆ ಹಾಕಿದ್ದ ಸೋಫಾಗಳ ಮೇಲೆ ಕಾಂಚನಲತೆಯನ್ನೂ ಅನಿಲನನ್ನೂ ಕೂರಿಸಿದರು. ಮಂದಿರದ ವ್ಯವಸ್ಥಾಪಕರು ಸ್ವಾಗತವನ್ನು ಬಯಸಿದರು. ಅತಿಥಿಗಳು ನಾಲ್ಕು ನಾಲ್ಕು ಮಾತುಗಳನ್ನು ಆಡಿ ಜನಗಳು ತಮ್ಮಲ್ಲಿ ತೋರುತ್ತಿರುವ ಆದರಾಭಿಮಾನಗಳಿಗೆ ಧನ್ಯವಾದಗಳನ್ನು ಹೇಳಿದರು.

ಅರಸುರತ್ನೆಯೇ ಮುಂದೆ ಬಂದು ಆ ನಟನಟಿಯರಿಗೆ ಹೂವಿನ ಹಾರ ಗಳನ್ನು ಹಾಕಿ, ಪುಷ್ಪಗುಚ್ಛಗಳನ್ನು ಕೈಗೆ ಕೊಟ್ಟಳು.

ಕೆಲವರು ಕರತಾಡನಗಳನ್ನೂ, ಮತ್ತೆ ಕೆಲವರು ಹರ್ಷೋದ್ಗಾರಗಳನ್ನೂ ಮಾಡುತ್ತಿರುವಾಗ ಅತಿಥಿಗಳು ಚಿತ್ರಮಂದಿರದಿಂದ ಹೊರಗೆ ಬಂದರು.

ದೀಪಗಳಾರಿದುವು.

ಹೊರಗಡೆ ಕಾರು ನಿಂತಿದ್ದಿತು. ಕಾಂಚನಲತೆಯು ಕಾರಿನಲ್ಲಿ ಹೋಗಿ ಕುಳಿತುಕೊಂಡಳು. ಅನಿಲನು ಬಂದು ಕುಳಿತುಕೊಳ್ಳುತ್ತಾನೆಂಬ ನಿರೀಕ್ಷೆ ಯಿಂದ ನೋಡಿದಳು.

ಅವನು ಗಳಿಗೆಯ ಕಾಲ ನಿಂತು ಯೋಚಿಸಿದನು. ಅನಂತರ ಅರಸು ರತ್ನೆಯ ಕೈ ಹಿಡಿದುಕೊಂಡು ಅವಳನ್ನೂ ಕೂರಿಸಿಕೊಂಡು ಕುಳಿತನು.

ಜನಸ್ತೋಮದಿಂದ ಕಾರು ಮುಂದೆ ಹೋಗುತ್ತಲೇ ಅನಿಲನು "ನೀವು ಮಾಮೂಲಿನಂತೆ ಟ್ಯಾಕ್ಸಿಯಲ್ಲಿ ತಾನೇ ಬಂದಿರಿ?" ಎಂದು ಅರಸುರತ್ನೆ ಯನ್ನು ಕೇಳಿದನು.

ಅವಳು ತಲೆಯಾಡಿಸಿದಳು.

ಅನಂತರ ಕಾಂಚನ ಲತೆಯನ್ನು ಕುರಿತು "ಇವರು ನನ್ನ ಸ್ನೇಹಿ ತರು. ನಮ್ಮನ್ನು ಯಾವುದಾದರೂ ಟ್ಯಾಕ್ಸೀ ಸ್ಟ್ಯಾಂಡಿನ ಬಳಿ ಬಿಟ್ಟುಬಿಡಿ. ನಾಳೆ ಮೈಸೂರಿನಲ್ಲಿ ಬಂದು ನೋಡುತ್ತೇನೆ" ಎಂದನು.

ಕಾಂಚನ ಲತೆಯು ಆಗಂತುಕಳಾದ ಸ್ತ್ರೀಯನ್ನು ದುರದುರನೆ ನೋಡಿದಳು. ಅವರುಗಳಿಬ್ಬರೂ ಗಾಂಧೀನಗರದ ಬಳಿ ಕಾರಿನಿಂದ ಇಳಿ ದಾಗ ಕೋಪದಿಂದ ಕುದಿಯುತ್ತಿದ್ದಳು. ಅವಳಿಗಾದ ಅಸಮಾಧಾನವನ್ನು

ಅನಿಲನಾಗ ಗಮನಿಸಿದನೋ ಇಲ್ಲವೋ ಗೊತ್ತಿಲ್ಲ. ಗೊತ್ತಾಗಿದ್ದರೂ ಅವನು ಲಕ್ಷ್ಯ ಮಾಡುತ್ತಿರಲಿಲ್ಲ.

ಕಾರಿನಿಂದ ಇಳಿದವರು ಕೈಯಲ್ಲಿ ಕೈ ಹಾಕಿಕೊಂಡು ನಿದಾನವಾಗಿ ನಡೆದುಕೊಂಡು ಹೋದರು. ಬೀದಿಯಲ್ಲಿ ಯಾರಾದರೂ ನೋಡುತ್ತಾರೆಯೋ ಅಥವಾ ಇಲ್ಲವೇ ಎಂಬುದನ್ನು ಸಹ ಅವರು ಯೋಚಿಸಲಿಲ್ಲ. ಬಲು ದಿನಗಳು ಒಬ್ಬರನ್ನೊಬ್ಬರು ನೋಡದ ಆಪ್ತರಂತೆ ಮಾತನಾಡಿದರು. ಮಕ್ಕಳಂತೆ ಅರ್ಥವಿಲ್ಲದ ಎಷ್ಟೋ ಮಾತುಗಳನ್ನಾಡಿದರು.

ಅರಸು ರತ್ನೆಯನ್ನು ನೋಡಿದಾಗಲೇ ಅನಿಲನಿಗೆ ಬಲು ದಿನಗಳಿಂದಲೂ ಕುಡಿಯುದವನ ಮುಂದೆ ಮದಿರೆಯನ್ನು ಇಟ್ಟಹಾಗಾಯಿತು. ಅವನು ಎಷ್ಟು ಹೊತ್ತಿಗೆ ಅವಳನ್ನು ಏಕಾಂತವಾಗಿ ಸಂಧಿಸಿಯೇನೋ ಎಂದು ಹಾರೈಸುತ್ತಿದ್ದನು. ಇಬ್ಬರೇ ನಡೆದುಕೊಂಡು ಹೋಗುತ್ತಿದ್ದಾಗ ಆ ಹಾರೈಕೆಯು ಅತಿಯಾಯಿತು. ಟ್ಯಾಕ್ಸೀ ಸ್ಟಾಂಡಿನ ಕಡೆಗೆ ಬೇಗಬೇಗ ನಡೆಯಲಾರಂಭಿಸಿದನು.

ಅವನ ಆತುರವನ್ನು ನೋಡಿ ಅರಸು ರತ್ನೆಗೆ ಒಳಗೊಳಗೇ ನಗುವು ಬಂದಿತು.

ಟ್ಯಾಕ್ಸಿಯಲ್ಲಿ ಕುಳಿತುಕೊಂಡು ಅರಸುರತ್ನೆ ಪಿಂಕ್ಸ್‌ಗೆ ಬಿಡುವುದಕ್ಕೆ ಹೇಳಿದಳು.

ಅದು ಹೊರಟನಂತರ ಅನಿಲನಿಗೆ ಅವಳನ್ನು ಮನಸಾರೆ ಚುಂಬಿಸಬೇಕೆಂದು ಆಸೆಯಾಯಿತು. ಅದೇನೋ ಬಂದು ತಡೆದ ಹಾಗಾಯಿತು. ವಿದ್ಯುದ್ದೀಪಗಳಿಂದ ವಿರಾಜಿತವಾದ ಈ ರಸ್ತೆಗಳು ಕಳೆಯಲಿ ಎಂದು ಮನಸ್ಸಿಗೆ ಸಮಾಧಾನವನ್ನು ತಂದುಕೊಂಡನು.

ಕಬ್ಬನ್ ಪಾರ್ಕಿನಲ್ಲಿ ಹೋಗುತ್ತಿದ್ದಾಗ ಮತ್ತೆ ಆ ಆಸೆಯು ಉಲ್ಬಣವಾಯಿತು. ಚುಂಬಿಸಲು ಸಮೀಪಿಸಿದನು. ಆದರೆ ಆಗಲೂ ಅದು ಅವನಿಂದಾಗಲಿಲ್ಲ.

ಮನೋದೌರ್ಬಲ್ಯದಿಂದ ಹಿಂತೆಗೆಯುತ್ತಾ, ಆ ಸೆ ಯಿ ಂ ದ ಚಪಲಪಡುತ್ತಾ ಅವಳ ಕಡೆಗೆ ನೋಡ ತೊಡಗಿದನು.

ಅವನ ಸ್ಥಿತಿಯು ಅರಸುರತ್ನೆಗೆ ಗೊತ್ತಾಯಿತು. ಅವಳು ಭುಜದ

ಮೇಲೆ ಕೈಹಾಕಿ ಎಳೆದುಕೊಂಡು ಅವನನ್ನು ಆಲಂಗಿಸಿ ಚುಂಬಿಸಿದಳು.

ಗಾಡಿಯು ಹೋಗುತ್ತಲೇ ಇದ್ದಿತು.

ದೀರ್ಘವಾದ ಮತ್ತ ಚುಂಬನಾನಂತರದಲ್ಲಿ ಅವನು ಅರ್ಧ ಅರ್ಧವಾಗಿ "ಮನೆಗೆ ಹೋಗೋಣ" ಎಂದನು.

ಅರಸುರತ್ನೆ ನಗುತ್ತಾ "ಮನೆ ಎಲ್ಲಿದೆ, ? ಅನಿಲ" ಎಂದಳು.

"ಅ———ಏನಾಯಿತು ?"

"ನಿನಗಾಗಿ ಮನೆಯನ್ನು ಮಾಡಿದೆ. ನೀನು ಹೊರಟು ಹೋಗುತ್ತಲೂ ಬಿಟ್ಟು ಬಿಟ್ಟೆ."

"ಹಾಗಾದರೆ ಈಗ ಎಲ್ಲಿದ್ದೀರಿ ?"

"ಗಿರಿನಿವಾಸದಲ್ಲಿ"

"ಅಲ್ಲಿಗೇ ಹೋಗೋಣ"

ಅರಸುರತ್ನೆ ಗಿರಿನಿವಾಸಕ್ಕೆ ಬಿಡುವಂತೆ ಹೇಳಿದಳು. ಆ ಹೋಟಲು ದಂಡಿನಿಂದ ನಗರಕ್ಕೆ ಹೋಗುವ ದಾರಿಯಲ್ಲಿ ದೊಡ್ಡ ಕಾಂಪೌಂಡಿನಲ್ಲಿದ್ದ ಮೂರು ಬಂಗಲೆಗಳು. ಆಕೆ ಅಲ್ಲೊಂದು ಫ್ಲಾಟ್ ತೆಗೆದುಕೊಂಡಿದ್ದಳು.

ಇಬ್ಬರೂ ಅಲ್ಲಿ ಹೋಗಿ ಕುಳಿತುಕೊಂಡ ನಂತರ ಅರಸುರತ್ನೆಯು ಬ್ರಾಂದೀ, ಸೋಡಾಗಳನ್ನು ತೆಗೆದು ಗ್ಲಾಸುಗಳಿಗೆ ಬಗ್ಗಿಸಿ,ಒಂದನ್ನು ತಾನು ತೆಗೆದುಕೊಂಡಳು.

ಅವಳೊಂದು ಗುಟುಕು ಕುಡಿದು ಕೆಳಗಿಟ್ಟಳು. ಅವನಿನ್ನೂ ಮುಟ್ಟಿರಲಿಲ್ಲ.

"ಯಾಕೆ, ಅನಿಲಾ, ಕುಡಿಯುವುದನ್ನು ಬಿಟ್ಟು ಬಿಟ್ಟೆಯಾ ?"

"————————"

ಮಾತನಾಡದೇ ಇದ್ದ ಅವನ ಕಣ್ಣುಗಳನ್ನು ನೋಡಿದಳು. ಅವೇ ಮಾತನಾಡಿದುವು.

"ಅದೇನು ಅಷ್ಟು ಅವಸರ ? ನಿನಗೆ ವಯಸ್ಸಾದರೂ ಬುದ್ಧಿಯು ಬರಲಿಲ್ಲ" ಎಂದು ಹೇಳಿ, ಅವನನ್ನು ಶಯನ ಗೃಹಕ್ಕೆ ಎಳೆದುಕೊಂಡು ಹೋದಳು.

ಪುನಃ ಹೊರಗೆ ಬಂದ ಮೇಲೆ ತನಗಾಗಿ ಇಟ್ಟಿದ್ದ ಗ್ಲಾಸ್ ತೆಗೆದು ಕೊಂಡು ಕುಡಿದನು.

ಅವಳು ಗ್ಲಾಸುಗಳನ್ನು ತುಂಬುತ್ತಿದ್ದಾಗ ಆ ಕೋಣೆಯನ್ನು ಒಮ್ಮೆ ಅವಲೋಕಿಸಿದನು. ಅಲ್ಲಿ ಸಾಹುಕಾರು ಪೆಟ್ಟಿಗೆಗಳು ಕಂಡು ಬಂದುವು. ಅವನು ಮೊದಲು ಅವಳೊಡನಿರುತ್ತಿದ್ದಾಗ ಇಲ್ಲದಿದ್ದ ಎರಡು ಹೊಸ ಪೆಟ್ಟಿಗೆಗಳಿದ್ದವು.

ಕುತೂಹಲವಾಗಿ "ಇವೆಲ್ಲ ಏನು ?" ಎಂದನು.

"ಏನೋ ಸಾಮಾನುಗಳು" ಎಂದವಳು ಉದಾಸೀನದಿಂದ ಉತ್ತರವಿತ್ತಳು.

ಅಷ್ಟರಿಂದ ಅವನ ಆಸಕ್ತಿಯು ತೀರಲಿಲ್ಲ. ಹೋಗಿ ಬಾಗಿಲು ತೆರೆಯಲು ಪ್ರಯತ್ನ ಪಟ್ಟನು. ಬೀಗಗಳು ಹಾಕಿದ್ದುವು. ಒಳಗೆ ಹೋಗಿ ತಲೆದಿಂಬಿನ ಕೆಳಗಿದ್ದ ಬೀಗದ ಕೈಗೊಂಚಲು ತೆಗೆದುಕೊಂಡು ಬಂದನು.

ಅವನು ಬೀಗ ತೆಗೆದು ನೋಡುವುದು ಅರಸುರತ್ನಗೆ ಇಷ್ಟವಿರಲಿಲ್ಲವೆಂದು ಕಂಡು ಬರುತ್ತದೆ. ಹಾಗೆಯೇ ಅವನ ಉತ್ಸಾಹವನ್ನು ಭಂಗ ಮಾಡುವುದೂ ಅವಳಿಗೆ ಸರಿತೋರಲಿಲ್ಲ.

ಹಾರಿ ಬಂದು, ಬೀಗದ ಕೈಗೊಂಚಲನ್ನು ತೆಗೆದುಕೊಂಡು, "ಬೇಡ ಅನಿಲ. ತೆಗೆಯಬೇಡ" ಎಂದು ಹೇಳಿ, ಅವನನ್ನು ಎಳೆದುಕೊಂಡು ಬಂದು ಸೋಫಾದ ಮೇಲೆ ಕೂರಿಸಿದಳು.

"ನಾನು ನೋಡಬಾರದಂತಹುದು ಇದೆಯೇನು ?"

"ಇಲ್ಲ"

"ಹಾಗಾದರೆ ನಾನು ನೋಡಬಾರದೇಕೆ"

"................"

"ನಾನು ನೋಡಬಾರದೆ ?"

"ನೋಡಬಹುದು ?"

"ಮತ್ತೆ ಬೀಗದ ಕೈಕೊಡಿರಿ"

ಅವಳು ಕೊಡಲಿಲ್ಲ. ಅವನು ಬಲಾತ್ಕಾರ ಮಾಡತೊಡಗಿದನು.

ಆಗ ಅರಸುರತ್ನ "ನೀನು ನೋಡಿದರೆ ನನಗೆ ನಾಚಿಕೆಯಾಗುತ್ತದೆ" ಎಂದಳು.

ಅನಿಲನ ಆಸಕ್ತಿಯನ್ನು ಮತ್ತಷ್ಟು ಕೆರಳಿಸಿದಂತೆ ಆಯಿತು. ಆದರೆ ಹೆಚ್ಚು ಬಲಾತ್ಕಾರ ಮಾಡಲು ಧೈರ್ಯ ಬರಲಿಲ್ಲ. ತಾನು ಅರಸುರತ್ನಗೆ ದೂರವಾದೆನೋ ಎಂದು ಅವನ ಮನಸ್ಸಿಗೆ ಬಂದಿತು.

ಅವಳೂ ಅದೇ ಸಂದರ್ಭಕ್ಕಾಗಿ ಕಾಯುತ್ತಿದ್ದಳು. ಅವನ ಗಲ್ಲವನ್ನು ಹಿಡಿದು "ಇಷ್ಟಕ್ಕೆಲ್ಲಾ ಅಸಮಾಧಾನ ಮಾಡಿಕೊಳ್ಳುತ್ತಾರೆಯೇ ? ನಿನಗೆ ನೋಡಲೇ ಬೇಕೆಂದಿದ್ದರೆ ನೋಡಿ ಬಿಡು" ಎಂದಳು.

ಕೆಳಗೆ ಹಾಕಿದ್ದ ರತ್ನಕಂಬಳಿಯ ಮೇಲೆ ಕುಳಿತುಕೊಂಡು ಚರ್ಮದ ಪೆಟ್ಟಿಗೆಯನ್ನು ಮುಂದೆಳೆದುಕೊಂಡಳು. ಅನಿಲನೂ ಪಕ್ಕದಲ್ಲಿ ಕುಳಿತು ಕೊಂಡನು. ಅವಳು ಬಾಗಿಲು ತೆಗೆದು ತೋರಿಸಿದಳು.

ಅದರಲ್ಲಿ ಮಾಸಲು ನೀಲ ವರ್ಣದ ಲಂಗವೊಂದಿತ್ತು. ಹಲವಾರು ನೂರು ನೆರಿಗೆಗಳ ನಡುವೆ ನಾಲ್ಕಾರು ಕಡೆ ತುದಿಯಿಂದ ಮೇಲಿನವರೆವಿಗೆ ಅದನ್ನು ಕತ್ತರಿಸಲಾಗಿತ್ತು. ಕಪ್ಪಿನ ಮೇಲೆ ಕೆಂಪು ಹೂಗಳನ್ನು ಬಿಡಿಸಿದ ಉದ್ದವಾದ ಕುಚಬಂಧವಿತ್ತು. ಅವೆರಡೂ ಉತ್ತಮ ರೇಷ್ಮೆಯುವು. ಚಿನ್ನದ ತೋಳ ಬಂದಿಗಳೂ, ಬಳೆಗಳೂ ಅಡ್ಡಿಕೆಯೂ ಇದ್ದವು. ಲಂಗದ ಮೇಲೆ ಕಟ್ಟುವ ಪುಟ್ಟ ಪುಟ್ಟ ಗೆಜ್ಜೆಯ ಕಟಿಬಂಧವಿದ್ದಿತು.

ಇವುಗಳನ್ನೆಲ್ಲಾ ನೋಡಿ ಬೆರಗಾಗಿ "ಇವೇನು ?" ಎಂದು ಕೇಳಿದನು.

"ಅದಕ್ಕೇ ಅದನ್ನು ನೋಡಬೇಡವೆಂದು ಹೇಳಿದ್ದು" ಎಂದು ಹೇಳಿ ಅವಳು ಹೋಗಿ ಸೋಫಾದ ಮೇಲೆ ಕುಳಿತುಕೊಂಡು ಗ್ಲಾಸು ಕೈಗೆತ್ತಿ, ಪಾನಾಸಕ್ತಳಾದಳು.

ಅನಿಲನು ಆ ಪೆಟ್ಟಿಗೆಯನ್ನು ಪಕ್ಕದಲ್ಲಿಟ್ಟುಕೊಂಡು ಕುಳಿತು ಪುನಃ "ಇದೇನು ?" ಎಂದನು.

"ವಾರದ ಹಿಂದೆ ನಾನು ಸಿಲೋನಿಗೆ ಹೋಗಿದ್ದೆ. ಅಲ್ಲಿ ನಮ್ಮವಳೇ ಒಬ್ಬಳು———"

ನಡುವೆ ಬಾಯಿ ಹಾಕಿ "ನೀವು ಸಿಲೋನಿನವರೇ " ಎಂದನು.

"ಹೌದು. ನಮ್ಮವಳೇ ಒಬ್ಬಳು ಡ್ಯಾನ್ಸ್ ಮಾಡುತ್ತಾಳೆಂದು

ಗೊತ್ತಾಯಿತು. ಅಲ್ಲಿಗೆ ಹೋಗಿದ್ದೆ. ಲಂಕೆಯ ಅರಣ್ಯ ಸ್ತ್ರೀಯಂತೆ ಸಿಂಗರಿಸಿಕೊಂಡು ನರ್ತನ ಮಾಡಿದಳು. ಆ ಟ್ರೈಬಲ್ ಡಾನ್ಸ್‌ನ ಈ ಕಾಸ್ಟ್ಯೂಂ ನನಗೆ ಬಹಳ ಹಿಡಿಸಿತು. ಅವಳಿಗೆ ಹೇಳಿ ನಾನೂ ಅಂತಹದೊಂದು ಮಾಡಿಸಿಕೊಂಡೆ. ”

“ನೀವು ಆಗಾಗ ಇದನ್ನು ಧರಿಸುತ್ತೀರಾ ?”

ಅವಳು ನಗುತ್ತಾ “ಎಲ್ಲಿಯಾದರೂ ಇದನ್ನು ಧರಿಸುವುದುಂಟೆ ? ” ಎಂದಳು.

“ಧರಿಸದಿದ್ದರೆ ಇಷ್ಟೊಂದು ಖರ್ಚು ಮಾಡಿ ಇದನ್ನೆಲ್ಲಾ ಯಾಕೆ ಮಾಡಿಸಿದಿರಿ ?”

“ಮಾಡಿಸುವಾಗ ಮಾಡಿಸಿಬಿಟ್ಟೆ. ಆದರೆ ಬಂದ ಮೇಲೆ ಹಾಕಿಕೊಳ್ಳಲು ನಾಚಿಕೆಯಾಯಿತು. ಹಾಗೆಯೇ ತೆಗೆದಿಟ್ಟುಬಿಟ್ಟೆ.”

“ಆದರೆ ಇಷ್ಟು ಮಾಡಿಯೂ ಸಾರ್ಥಕವಿಲ್ಲದೇ ಹೋಯಿತಲ್ಲ.”

“ಹೌದು. ಅದರೇನು ಮಾಡಬೇಕೆನ್ನುತ್ತೀ ?”

“ಈಗ ಹಾಕಿಕೊಳ್ಳಿರಿ.”

“ನಿನಗೇನು ಹುಚ್ಚೋ, ಹೇಗೆ ? ಅನಿಲ”

ಅನಿಲನು ಹಟಮಾಡಿದನು. ಬಿಡುವಂತೆ ತೋರಲಿಲ್ಲ. ಅವಳು ಪೆಟ್ಟಿಗೆಯನ್ನು ಶಯನಗೃಹಕ್ಕೆ ತೆಗೆದುಕೊಂಡು ಹೋಗಿ ಹತ್ತು ನಿಮಿಷಗಳಲ್ಲಿ ಹೊರಗೆ ಬಂದಳು.

ಬಂದಾಗ ಅನಿಲನು ವಿಸ್ಮಿತನಾದನು.

ಅವನೆಷ್ಟೋ ಬಾರಿ ಅರಸುರತ್ನೆಯನ್ನು ನೋಡಿದ್ದನು. ಅವಳದು ಕಾಫಿಯನ್ನು ಹೋಲುವ ಬಣ್ಣ. ಆ ಶ್ಯಾಮಲ ವರ್ಣವು ಎಣ್ಣೆ ಹಚ್ಚಿದಂತೆ ಮಿಣುಗುಟ್ಟುವುದು. ಸ್ಪಷ್ಟವಾದ ಉಬ್ಬು ತಗ್ಗುಗಳಿಂದ ಕೂಡಿದ ದೇಹ. ಭಾವರಹಿತವಾದ ದಪ್ಪ ಪೆಚ್ಚು ಮುಖ. ಪ್ರಕಾಶಮಾನವಾದ ಕಣ್ಣುಗಳು.

ಮದರಾಸಿಗೆ ಹೋದ ಮೇಲೆಯೂ ಅವನು ಅನೇಕ ಸಲ ಅರಸುರತ್ನೆಯನ್ನು ನೆನೆಸಿಕೊಳ್ಳುತ್ತಿದ್ದನು. ಎಷ್ಟೇ ಸಹಾನುಭೂತಿಯಿಂದ ಯೋಚಿಸಿದರೂ ಅವಳು ಅವನ ಕಣ್ಣಿಗೆ ರೂಪವತಿಯಾಗಿ ಕಂಡು ಬರುತ್ತಿರಲಿಲ್ಲ.

ಎಷ್ಟೋ ಮಂದಿ ಎಕ್ಸ್‌ಟ್ರಾಗಳು ಇ ವ ಳಿ ಗಿ ಂ ತ ರೂಪವತಿಯರೆಂದು ಕೊಳ್ಳುವನು.

ಆದರೆ, ಆದರೆ ಅವರೆಲ್ಲರಿಗಿಂತಲೂ ಅರಸುರತ್ನಿಯ ಸಾನ್ನಿಧ್ಯವು ಪ್ರಿಯವಾಗಿ ಕಂಡು ಬರುವುದು.

ಅದೇಕೆ ? ಅದು ಅರ್ಥವಾಗಿರಲಿಲ್ಲ.

ಈಗ ಅದು ಅರ್ಥವಾಯಿತು.

ಅವಳು ಹೆಜ್ಜೆ ಇಟ್ಟು ಬರುತ್ತಿದ್ದರೆ ಸಂಗೀತದ ನಡುವೆ ಮೃದುವಾಗಿ ತಾಳ ಹಾಕಿದಂತೆ ಆಗುತ್ತಿತ್ತು. ಕಿಟಕಿಯ ಮಂದಮಾರುತಕ್ಕೆ ನೀಲವಸ್ತ್ರದ ನೆರಿಗೆಗಳು ಸಮುದ್ರದ ಅಲೆಗಳಂತೆ ಆಡುತ್ತಿದ್ದುವು. ಒಮ್ಮೊಮ್ಮೆ ನೆರಿಗೆಗಳು ಸರಿದು, ಪತ್ತಲದ ಕತ್ತರಿಸಿದ ಕೊನೆಗಳು ಬಿಟ್ಟು ಕೂಡಿದರೆ ಲೀಲಾಜಲದ ಮೇಲೆ ಚಂದ್ರಪ್ರಭೆಯು ಬಿದ್ದು ಮಿಂಚಿದಂತೆ ಆಗುವುದು. ಆ ನೂರಾರು ನೆರಿಗೆಗಳನ್ನು ಚಿನ್ನದ ಗೆಜ್ಜೆಗಳ ನಡುಕಟ್ಟು ಬಿಗಿದು ಹಿಡಿದಿರುವಂತಿದೆ. ಅದರ ಮೇಲೆ ಕೃಶವಾದ ಕಟಿ ಪ್ರದೇಶ. ಅದು ಬೆಳೆಯುತ್ತಾ ಎದೆಯ ಬಳಿ ಗಾತ್ರವಾಗಿದೆ. ಕೆಂಪು ಹೂವಿರುವ ಉದ್ದವಾದ ಕಪ್ಪು ಬಟ್ಟೆಯನ್ನು ಬಿಗಿದು ಹಿಂದೆ ಗಂಟು ಹಾಗಿದೆ. ಕಟ್ಟಿದ ವಕ್ಷೋಜಗಳು ಅತಿ ಅರುಣದಿಂದ ದಪ್ಪವಾದ ಮಲಗೋವಾ ಹಣ್ಣುಗಳಂತಿವೆ. ಕಂಠ ಪ್ರದೇಶದಲ್ಲಿ ಅಡ್ಡಿಕೆಯು ಕಂಗೊಳಿಸುತ್ತಿದೆ. ದುಂಡಾದ ಬಾಹುಗಳ ಮೇಲುಭಾಗದಲ್ಲಿ ತೋಳಬಂದಿ ಗಳೂ,ಕೆಳಗಡೆ ಕೆಂಪುಗಳು ಕೆತ್ತಿದ್ದ ಬಳೆಗಳೂ ಕಂಗೊಳಿಸುತ್ತಿವೆ. ಕೂದಲನ್ನು ಎತ್ತಿ ನೆತ್ತಿಯ ಮೇಲೆ ಗಂಟು ಹಾಕಿಕೊಂಡಿದ್ದಾಳೆ.

ಅದೇ ಪೆಚ್ಚು ಮೋರೆ.

ಅಲ್ಲ. ಅವಳದು ಪೆಚ್ಚು ಮೋರೆಯಲ್ಲ. ಅವಳ ಪ್ರಕಾಶಮಾನವಾದ ಕಣ್ಣುಗಳಿಗೆ ಸರಿದೂಗದೇ ಮೋರೆಯು ಪೆಚ್ಚಾಗಿ ಕಂಡುಬರುವುದೋ ಏನೋ ? ಆ ಕಣ್ಣುಗಳು, ಆ ಕಣ್ಣುಗಳು ! ಅವು ಅರಸುರತ್ನಿಯ ಸೌಂದರ್ಯ ವಾರಿಧಿಯಲ್ಲಿ ಮಿಣುಗುಟ್ಟುವ ಮೀನುಗಳಂತೆ ಕಂಗೊಳಿಸುತ್ತಿದ್ದುವು.

ಹೆಂಗಸರು ತಮ್ಮ ನಾಡಿನ ಉಡಿಗೆ ತೊಡಿಗೆಗಳನ್ನು ತೊಟ್ಟರೇ ಅವರ ಸೌಂದರ್ಯವು ಪ್ರಕಾಶಿಸುವುದೆಂದು ತೋರಿತು. ಈ ಉಡಿಗೆಯಲ್ಲಿ ಹೀಗೆ

ಕಾಣುವ ಅರಸುರತ್ನೆಯೂ ಹಿಂದೂಸಾಗರ ದ್ವೀಪದ ಅರಣ್ಯವಾಸಿಯೋ ಎಂದೆನಿಸಿತು.

ಬೆರಗಾಗಿ ನೋಡುತ್ತಿದ್ದ ಅವನನ್ನು ಕುರಿತು "ಈ ವೇಷ ಚೆನ್ನಾಗಿದೆಯೇ? ಅನಿಲ" ಎಂದು ಕೇಳಿದಳು.

ವಾಸವದತ್ತಾ ಚಿತ್ರದಲ್ಲಿ ಒಳ್ಳೆಯ ಬೆಳದಿಂಗಳಿನ ರಾತ್ರಿ, ತಾನು ಮತ್ತ ಮಾತಂಗದ ಮೇಲೆ ಕುಳಿತು ವೀಣೆಯನ್ನು ಬಾರಿಸುತ್ತಾ ಹೋಗ್ತ್ತಿದ್ದಾಗ, ಗಾನ ಮಾಧುರ್ಯದಿಂದ ಆಕರ್ಷಿತರಾಗಿ ಕಿನ್ನರ ಕನ್ನಿಕೆಯರು ಕಾಡಿನಿಂದ ಕುಣಿಯುತ್ತಾ ಬಂದು, ಸುತ್ತಲೂ ಕೂಡಿ, ನರ್ತನ ಮಾಡುತ್ತಿದ್ದುದನ್ನು ನೆನೆಸಿಕೊಂಡನು. ಅವರಲ್ಲಿ ಯಾರಾದರೂ ಇಷ್ಟು ಅಂದಗಾತಿಯರಾಗಿ ಕಂಡು ಬಂದರೇ ಎಂದು ಯೋಚಿಸಿದನು. ಇಲ್ಲ! ಅವರೆಲ್ಲರಿಗಿಂತ ಇವಳೇ ಚಲುವೆಯಾಗಿ ಕಂಡಳು.

"ಚೆನ್ನಾಗಿಯೇ? ಅಷ್ಟೇ ಏನು, ಅಮೋಘವಾಗಿದೆ"

"ಬಿಡು. ನಿನ್ನ ಮನಸ್ಸಿಗೆ ತೃಪ್ತಿಯಾಯಿತೆಂದರೆ, ಇದನ್ನು ಸಿಲೋನಿನಿಂದ ತಂದುದೂ, ಎಂದೂ ಇಲ್ಲದೇ ಈ ದಿನ ಧರಿಸಿದುದೂ ಸಾರ್ಥಕವಾಯಿತು.

"ಆದರೆ——————"

"ಏನು ಅರ್ಧದಲ್ಲಿಯೇ ಮಾತು ನಿಲ್ಲಿಸಿದೆಯಲ್ಲಾ?"

"ತೃಪ್ತಿಯಾಯಿತೇ———ಎಂದಿರಿ"

"ಹೌದು. ಯಾಕೆ, ತೃಪ್ತಿಯಾಗಲಿಲ್ಲವೆ?"

"ಆಯಿತು. ಆದರೆ ಇನ್ನೂ—"

"ಇನ್ನೂ———ಏನು, ಅನಿಲ" ಎಂದು ಹೆಚ್ಚಾಗಿ ತಿಂಡಿ ಕೇಳುವ ಹುಡುಗನನ್ನು ಕೇಳುವಂತೆ ಕೇಳಿದಳು.

ವನಾಂತರಾಳದಲ್ಲಿ ಸುತ್ತಿ ನಿಂತ ಕಿನ್ನರೆಯರನ್ನು ಅವನು ನೆನೆಸಿಕೊಂಡನು. ಹಾಗೆಯೇ ಚಂದ್ರಪ್ರಕಾಶದಲ್ಲಿ ಗಿಡಮರಗಳ ನಡುವೆ ನಿಂತರೆ ನೋಡಲು ಹೇಗಿರುತ್ತಾಳೆಂದು ಮನಸ್ಸಿನಲ್ಲಿಯೇ ಊಹಾಪೋಹಗಳನ್ನು ಮಾಡಿಕೊಂಡನು.

ಮನದಾಸೆಯು ಮರುಕಳಿಸಿ ಬರುತ್ತಿದ್ದರೂ, ಸಂಕೋಚಿಸುತ್ತಾ

"ಎಲ್ಲಿಯಾದರೂ ದೂರ ದೂರಕ್ಕೆ ಹೋಗಬೇಕೆನ್ನಿಸುತ್ತದೆ. ನಿರ್ಜನ ಪ್ರದೇಶದಲ್ಲಿ, ವೃಕ್ಷಸಮೂಹದ ಮಗ್ಗುಲಲ್ಲಿ, ಬೆಳದಿಂಗಳಿನಲ್ಲಿ, ಹೀಗೆಯೇ ನಿಮ್ಮನ್ನು ನೋಡಬೇಕೆಂದು ಬಯಕೆಯಾಗುತ್ತದೆ" ಎಂದನು.

ಅವಳು ನಗುತ್ತಾ "ನಿನ್ನನ್ನು ಮದರಾಸಿಗೆ ಕಳಿಸಬಾರದಾಗಿದ್ದಿತು, ಅನಿಲ! ನೀನು ಬಹಳ ಚಪಲಚಿತ್ತನಾಗಿದ್ದೀಯೆ ?" ಎಂದಳು.

"ಯಾಕೆ, ನಾನು ಹೇಳುವುದು ತಪ್ಪೇ ? ಈ ವೇಷವು ಆ ಹಿನ್ನೆಲೆಯಲ್ಲಿ ಇನ್ನೂ ಶೋಭಿಸುತ್ತದೆ"

"ಇರಬಹುದು ಆದರೆ ಅದಾಗುವುದಿಲ್ಲ"

"ಅದೇಕೆ ?"

ಎಷ್ಟಾದರೂ ಅರಸುರತ್ನೆಯು ಹೆಣ್ಣು. ಮುಂದಿನ ಮಾತನ್ನು ಹೇಳುವಾಗ ಕಪೋಲಗಳ ಮೇಲೆ ನಾಚಿಕೆಯು ಕಂಡಿತು.

"ಈ ಬರೀ ಲಂಗ, ಕಂಚುಕಗಳನ್ನು ಹಾಕಿಕೊಂಡು ಹೊರಗೆ ಹೋಗುವುದು ಸಾಧ್ಯವಿಲ್ಲ"

ಹೇಳಿದ ಮಾತಿನಲ್ಲಿ ಒಂದಿಷ್ಟು ದೃಢತೆಯನ್ನು ಕಂಡ ಅನಿಲನಿಗೆ ನಿರಾಶೆಯಾಯಿತು. ಆದರೂ ಮತ್ತೊಮ್ಮೆ ಪ್ರಯತ್ನ ಮಾಡುತ್ತಾ, ಅವಳ ಕೊರಳಿಗೆ ತನ್ನ ಎರಡು ತೋಳುಗಳನ್ನೂ ಹಾಕಿ "ಹಾಗೆ ಹೇಳಬೇಡ" ಎಂದನು.

ಅವಳು ಅವನ ದೈನ್ಯವಾದ ಮುಖವನ್ನು ನೋಡಿದಳು. ಆ ಮುಖವನ್ನು ಎರಡು ಕಡೆಯೂ ಎರಡು ಹಸ್ತಗಳಿಂದಲೂ ಚಲಿಸದಂತೆ ಹಿಡಿದುಕೊಂಡು ಚುಂಬಿಸಿದಳು.

ಅನಂತರ ಸೋಫಾದ ಮೇಲೆ ಬಿದ್ದಿದ್ದ ಶುಭ್ರವರ್ಣದ ಕಾಶ್ಮೀರಶಾಲುವನ್ನು ತೆಗೆದು ಹೊದ್ದುಕೊಂಡು "ಹೋಗೋಣ, ಬಾ. ಅನಿಲ" ಎಂದಳು.

ಅದೂ ಅನಿಲನ ಕಣ್ಣಿಗೆ ಚೆನ್ನಾಗಿಯೇ ಕಂಡಿತು. ಮೇಲುಗಡೆ ಅಸ್ಥಿಕೆಯನ್ನು ಮುಚ್ಚಿದ್ದ ಶಾಲುವು ಕೆಳಗಡೆ ಮಂಡಿಗಳವರೆಗೆ ಇಳಿದಿದ್ದಿತು.

ಎರಡು ಅಂಚುಗಳಲ್ಲಿಯೂ ಉತ್ತಮವಾದ ಜರಿಗಳಲ್ಲಿ ಬಿಡಿಸಿದ್ದ ಲತಾಪುಷ್ಪಗಳು ದೀಪಗಳ ಬೆಳಕಿಗೆ ಮಿರುಗುಟ್ಟುತ್ತಿದ್ದುವು.

ಹೊರಗೆ ಬಂದು ಇಬ್ಬರೂ ಟ್ಯಾಕ್ಸಿಯಲ್ಲಿ ಕುಳಿತುಕೊಂಡನಂತರ

ಅರಸುರತ್ನೆಯು "ವೇಲಾಯುಧಂ. ಹೋಗಿ ಎರಡು ಗ್ಲಾಸು, ಸೋಡಾ, ಸ್ವಲ್ಪ ಬಿಸ್ಕತ್ತು, ಹಣ್ಣುಗಳನ್ನು ತೆಗೆದುಕೊಂಡು ಬಾ" ಎಂದು ಹೇಳಿದಳು.

ಡ್ರೈವರು ಹೋಗಿ ತಂದ ನಂತರ ನಾರ್ತ್ ಪರೇಡಿನಲ್ಲಿ ಅವನಿಂದಲೇ ಒಂದು ಜಿನ್ ಬಾಟಲನ್ನು ತರಿಸಿ ಕಾರಿನಲ್ಲಿ ಇಟ್ಟುಕೊಂಡಳು. ಅವನಿಗಾಗಿ ಎರಡು ಬೆಂಗಳೂರು ಬಿಯರ್ ತಂದುಕೊಳ್ಳುವಂತೆ ಹೇಳಿದಳು.

ಟ್ಯಾಕ್ಸಿಯು ತುಮಕೂರು ರಸ್ತೆಯಲ್ಲಿ ಹೋಯಿತು. ದಾಸರಹಳ್ಳಿಯ ಸಮೀಪದಲ್ಲಿ ಕಾರು ನಿಲ್ಲಿಸುವಂತೆ ಡ್ರೈವರಿಗೆ ಹೇಳಿದಳು. ಅವನು ನಿಲ್ಲಿಸಿ, ಗಾಡಿಯಿಳಿದು ಬಂದು, ಕಿಟಕಿಯ ಬಳಿ ಬಂದು ನಮ್ರನಾಗಿ ನಿಂತುಕೊಂಡನು.

"ನೀನು ಇಲ್ಲಿಯೇ ಇರು. ಸ್ವಲ್ಪ ಹೊತ್ತಿನಲ್ಲಿಯೇ ಬರುತ್ತೇನೆ. ಬಿಯರ್ ತೆಗೆದಿಟ್ಟುಕೋ" ಎಂದು ಹೇಳಿ, ತಾನು ಮುಂದಿನ ಸೀಟಿಗೆ ಬಂದು ಕುಳಿತುಕೊಂಡು ಗಾಡಿ ಸ್ಟಾರ್ಟ್ ಮಾಡಿ ಎಡಗಡೆಗೆ ತಿರುಗಿಸಿದಳು.

ಹಳ್ಳಿಯ ರಸ್ತೆಯಲ್ಲಿ ಕಾರು ನಿಧಾನವಾಗಿ ಹೊರಟಿತು. ಎರಡು ಕಡೆಯೂ ತೋಟಗಳಿಗಾಗಿ ಬೆಳೆಸಲಾಗಿದ್ದ ಬೇಲಿಗಳಿದ್ದುವು. ಅವುಗಳಲ್ಲಿ ಬಿಟ್ಟಿದ್ದ ಬಗೆಬಗೆಯ ಹೂಗಳು ಬೆಳದಿಂಗಳಿನ ಮಂದಪ್ರಕಾಶದಲ್ಲಿ ಅರೆಮುಚ್ಚಿದಂತೆ ಕಂಡುಬರುತ್ತಿದ್ದುವು. ಒಂದು ಮೈಲಿ ಮುಂದೆ ಬಂದ ನಂತರ ಎದುರಿಗೆ ಒಂದು ದೊಡ್ಡ ಗುಡ್ಡ. ಅದರ ಮೇಲೆ ದಿಗಂತಕ್ಕೆ ಮೊಳದುದ್ದದಲ್ಲಿ ಒಮ್ಮೆ ಕಚ್ಚಿದ ಸೌತೇಕಾಯಿ ತುಂಡಿನಂತೆ ತೇಲುತ್ತಿರುವ ಚಂದ್ರ.

ಭರ್ರನೆ ಬೀಸುತ್ತಿದ್ದ ಗಾಳಿಯಲ್ಲಿ ನುಗ್ಗುತ್ತಾ ಕಾರು ಗುಡ್ಡವನ್ನು ಹತ್ತುತ್ತಿದ್ದಾಗ ಅರಸುರತ್ನೆಯ ಪಕ್ಕದಲ್ಲಿ ಕುಳಿತಿದ್ದ ಅನಿಲನು ಈ ಕಾರು ಸಿಡಾನ್ ಬಾಡಿಯಾಗದೇ ಓಪನ್ ಆಗಿದ್ದಿದ್ದರೆ ಎಷ್ಟು ಚೆನ್ನಾಗಿದ್ದಿತು ಎಂದುಕೊಂಡನು.

ಗುಡ್ಡದ ಮುಕ್ಕಾಲರವರೆಗೆ ಎತ್ತಿನ ಗಾಡಿಗಳು ಹೋಗಿ ಸವೆದ ರಸ್ತೆಯಾಗಿದ್ದಿತು. ಅದನ್ನು ಮೇಲೆ ಹೋಗದೇ ಪಕ್ಕಕ್ಕೆ ತಿರುಗಿದ್ದಿತು. ಅರಸುರತ್ನೆ ಅಲ್ಲಿ ಕಾರನ್ನು ನಿಲ್ಲಿಸಿ ಕೆಳಗಿಳಿದಳು.

ಇಬ್ಬರೂ ತಿಂಡಿಗಳನ್ನೂ, ಜಿನ್ ಮತ್ತು ತದಿತರ ಸಾಮಗ್ರಿಗಳನ್ನೂ ತೆಗೆದುಕೊಂಡು ಗುಡ್ಡದ ಮೇಲಕ್ಕೆ ಹೊರಟರು. ನುರುಜು ಕಲ್ಲುಗಳಿಂದಾವೃತ್ತವಾದ ಆ ಪ್ರದೇಶದಲ್ಲಿ ಹೋಗುವಾಗ ಪಾದರಕ್ಷೆಗಳು ಜಾರಿ ಅನಾಗ

ಕೆಳಗೆ ಬೀಳುವಂತೆ ಆಗುತ್ತಿದ್ದಿತು. ಆ ಸಮಯದಲ್ಲಿ ಒಬ್ಬರನ್ನೊಬ್ಬರು ಹಿಡಿದುಕೊಳ್ಳುವರು. ಪೂರ್ಣವಾಗಿ ಜಾರಿದಾಗ ಶಿಖರಾಗ್ರಕ್ಕೆ ಬೆನ್ನು ತಿರುಗಿಸಿ ಕೆಳಗೆ ನೋಡುತ್ತಾ ಕುಳಿತುಬಿಡುವರು. ಹೀಗೆ ಪ್ರಯತ್ನಪುರಸ್ಸರವಾಗಿ ಅವರು ಮೇಲೆ ಹೋದರು.

ಹೊತ್ತು ತಂದಿದ್ದ ಸಾಮಗ್ರಿಗಳನ್ನು ಕೆಳಗಿಟ್ಟ ನಂತರ ಅರಸು ರತ್ನೆಯು ನಿಂತುಕೊಂಡಿದ್ದವಳು ಹಾಗೆಯೇ ನಿಂತು "ಈಗ ಸರಿಯೇ, ಅನಿಲ" ಎಂದಳು.

ಅನಿಲನು ನಾಲ್ಕಾರು ಹೆಜ್ಜೆಗಳನ್ನು ಹಿಂದೆ ಸರಿದು ನಿಂತು ನೋಡಿದನು.

ದೂರದಲ್ಲಿ ಹಿಂದೆ ನಕ್ಷತ್ರಗಳಂತೆ ಮಿಣುಗುಟ್ಟುವ ಬೆಂಗಳೂರಿನ ಅಸಂಖ್ಯಾತ ವಿದ್ಯುದ್ದೀಪಗಳು. ಅವುಗಳಿಂದ ಹುಟ್ಟಿದ ದೇದೀಪ್ಯಮಾನವಾದ ಪ್ರಕಾಶವು ದಿಗಂತಕ್ಕೆ ಸ್ವರ್ಣ ಪ್ರಭೆಯನ್ನು ಕೊಟ್ಟಿದೆ. ಹತ್ತಿರದಲ್ಲಿ ಪ್ರಕಾಶಮಾನವಾದ ಬೆಳದಿಂಗಳು. ಆದರೆ, ಪ್ರಕಾಶದಲ್ಲಿ ಸೆಕೆಯಿಲ್ಲ. ಚೆನ್ನಾಗಿ ಆರಿದ ಹಾಲಿನ ಶೀತಲದಂತೆ ಸುಖವಾಗಿದೆ. ಅಲ್ಲಿ, ಆ ಜನಸ್ತೋಮಕ್ಕೆ ಬಹಳ ದೂರದಲ್ಲಿ, ಬಹಳ ಮೇಲೆ ಅರಸುರತ್ನೆಯು ನಿಂತಿದ್ದಾಳೆ ಬೀಸುವ ಗಾಳಿಯಿಂದ ಪತ್ತಲವು ಛಿದ್ರಛಿದ್ರವಾಗಿ ಹಾರಾಡುತ್ತಿವೆ. ಅವು ಹಿಂದಿರುವ ನೀಲಾಕಾಶವನ್ನು ನೆನಪಿಗೆ ತರುತ್ತವೆ. ಕುಚಬಂಧವು ತೇಲುವ ಕಾರ್ಮೋಡಗಳಂತಿದೆ. ಮಂದಹಾಸಪೂರಿತವಾದ ಮುಖಮಂಡಲವು ಚಂದ್ರನಂತಿದೆ.

ಆಗ ಅವಳನ್ನು ನೋಡಿದ ಅನಿಲಕುಮಾರನು ಇವಳು ಮಾನವ ಲೋಕದ ರೂಪಸಿಯಲ್ಲ. ಸ್ವರ್ಗಲೋಕದ ಸುಂದರಿ—ಎಂದುಕೊಂಡನು.

ಸ್ವಲ್ಪ ಹೊತ್ತಾದ ನಂತರ ಅವನಿಗೆ ಅರಸುರತ್ನೆಯು ಎರಡು ನಿಮಿಷಗಳ ಮೊದಲು ಕೇಳಿದ ಪ್ರಶ್ನೆಯು ಜ್ಞಾಪಕಕ್ಕೆ ಬಂದಿತು.

ಅವಳ ಕಡೆಗೆ ನೋಡಿದನು. ಅವಳಿನ್ನೂ ನಗುತ್ತಲೇ ಇದ್ದಳು. ಈಗ ಸರಿಯೇ ಎಂದು ಕೇಳುತ್ತಿದ್ದಂತೆ ಇದ್ದಿತು.

" ಒಂದು ಸಂದೇಹವು ಬಂದಿದೆ "

" ಏನದು ? "

“ನೀನು ಆ ದಿವ್ಯದೀಪರಾಶಿಯಿಂದ ಎದ್ದು ಬಂದ ದೇವಿಯೋ, ಅಥವಾ ಈ ಪ್ರಭಾಮಯ ಚಂದ್ರಿಕೆಯಲ್ಲಿ ಹುಟ್ಟಿ ಬಂದ ಚೆಲುವೆಯೋ ?”

ಆವಳು ಓಡಿ ಬಂದು ಅವನ ಮೇಲೆ ಮುತ್ತಿನ ಮಳೆಗರೆದು “ಅನಿಲ, ನೀನು ಕವಿಯು ಬೇರೆ ಆಗಿದ್ದೀಯೋ ” ಎಂದಳು.

ಅವರು ಅಂಗುಷ್ಟ ಮಾತ್ರ ಬೆಳೆದಿದ್ದ ಮೃದುವಾದ ಗರಿಕೆಯ ಹಸುರಿನ ಮೇಲೆ ಕುಳಿತುಕೊಂಡರು. ಮನದಣಿಯ ಮದಿರಾಪಾನ ಮಾಡತೊಡಗಿದರು. ಮೊದಮೊದಲು ನಡುವೆ ಏನಾದರೂ ತಿನ್ನುತ್ತಿದ್ದರು. ಕಡೆಗೆ ಅದು ಬೇಸರವಾಗಿ ಮದಿರೆಯೇ ಪ್ರಿಯವಾಯಿತು.

ಬಾಟಲಿನಲ್ಲಿ ನಾಲ್ಕು ಬೆರಳಿನಷ್ಟು ಮಾತ್ರ ಜಿನ್ ಉಳಿದಿದ್ದಿತು. ಕೈಯ್ಯಲ್ಲಿದ್ದ ಗ್ಲಾಸನ್ನು ಪಕ್ಕದಲ್ಲಿಟ್ಟು, ಅರಸುರತ್ನೆಯು ಮಲಗಿ ವೇಗ ವೇಗ ಧಾವಿಸುತ್ತಿದ್ದ ಚಂದ್ರನನ್ನು ನೋಡುವುದರಲ್ಲಿ ಆಸಕ್ತಳಾದಳು.

ಅನಿಲನಿಗೂ ಚಂದ್ರಿಕೆಯಲ್ಲಿಯೇ ಆಸಕ್ತಿಯುಂಟಾಯಿತೆಂದು ತೋರುತ್ತದೆ ಅವನೂ ಗ್ಲಾಸನ್ನು ಪಕ್ಕದಲ್ಲಿಟ್ಟು, ಅವಳ ತೋಳಿನ ಮೇಲೆ ತಲೆಯಿಟ್ಟು ಮಲಗಿದನು.

ಮೋಡವೊಂದು ಚಂದ್ರನನ್ನು ಆವರಿಸಿ, ಜ್ಯೋತ್ಸ್ನೆಯು ಕಾಂತಿಹೀನವಾಯಿತು.

ಮಾರನೆಯ ದಿನ ಬೆಳಗಾಗ ಅನಿಲಕುಮಾರನು ಮೈಸೂರಿಗೆ ಪ್ರಯಾಣ ಮಾಡಿದನು. ಗಾಡಿಯು ಮದ್ದೂರನ್ನು ದಾಟಿದ ನಂತರ ಅವನಿಗೆ ಅವನೂರಿನ ನೆನಪು ಬರತೊಡಗಿತು. ತನ್ನ ಬಾಲ್ಯದ ಜೀವನವೆಲ್ಲವೂ ಕಣ್ಣು ಮುಂದೆ ಸುಳಿಯಿತು. ಶ್ಯಾಮಲಮ್ಮ, ಮಂಜುಳಾ, ತನ್ನ ಅಕ್ಕ ಗೋದಾವರಿ, ತನ್ನ ತಂದೆ ಇವರೆಲ್ಲರೂ ಜ್ಞಾಪಕಕ್ಕೆ ಬಂದರು.

ಆ ಆಲೋಚನೆಗಳಲ್ಲಿ ಅವನಿರುವಾಗಲೇ ಮಂಡ್ಯವು ಬಂದಿತು. ಮಂಡ್ಯದಲ್ಲಿಳಿಯಬಾರದೆಂದೂ, ಹಾಗೆಯೇ ಮೈಸೂರಿಗೆ ಹೋಗುವುದೆಂದೂ ನಿಶ್ಚಯಿಸಿದ್ದನು. ಅನಂತರ ಬೇಕೆಂದು ತೋರಿದರೆ ಮಂಡ್ಯಕ್ಕೆ ಹೋಗಿ ತನ್ನವರೆಲ್ಲರನ್ನೂ ನೋಡಿಕೊಂಡು ಬರುವುದೆಂದುಕೊಂಡಿದ್ದನು.

ಅಲ್ಲಿ ಹೋಗಿ ಯಾರನ್ನು ನೋಡುವುದು ? ಶ್ಯಾಮಲಮ್ಮನನ್ನು ನೋ

ಡುವಂತಿಲ್ಲ. ಮಂಜುಳೆಯನ್ನು ನೋಡುವುದು ಸಾಧ್ಯವಿಲ್ಲ. ಆಕಸ್ಮಾತ್ ಕಣ್ಣಿಗೆ ಬಿದ್ದರೂ ಮಾತನಾಡುತ್ತಾರೆಯೋ ಇಲ್ಲವೋ ? ಇನ್ನು ಗೋದೆಯನ್ನೂ ತನ್ನ ತಂದೆಯನ್ನೂ ನೋಡಬಹುದು. ಅವರಿಗೆ ತನ್ನಮೇಲೆ ಪ್ರೀತಿಯಿಲ್ಲವೆಂದೂ ಅವರನ್ನು ನೋಡುವುದು ನಿರರ್ಥಕವೆಂದೂ ಅಂದುಕೊಂಡನು.

ಮರುಗಳಿಗೆಯಲ್ಲಿಯೇ ಗೋದೆಗೆ ತಾನಲ್ಲದೇ ಇನ್ಯಾರಿದ್ದಾರೆ ? ಹುಡುಗತನದಲ್ಲಿ ತುಂಟಾಟ ಮಾಡುತ್ತಿದ್ದುದರಿಂದ ಅವಳು ಅಸಮಾಧಾನವನ್ನು ವ್ಯಕ್ತಪಡಿಸುತ್ತಾ ಇದ್ದಿರಬಹುದು. ಆದರೆ ಈಗಲೂ ಹಾಗಿರುತ್ತದೆಯೇ ? ತನ್ನ ತಂದೆ ! ಮುದಿತನದಲ್ಲಿ ಕೊರಗುತ್ತಿರುತ್ತಾನೆ. ಎಷ್ಟಾದರೂ ಮಗ. ಮಗನ ಮೇಲೆ ಪ್ರೀತಿಯಿಲ್ಲದೆ ಇರುತ್ತದೆಯೇ ? ಅದರಲ್ಲಿಯೂ ಬೀದಿತಿರುಗುತ್ತಿದ್ದು ಓಡಿಹೋದ ಮಗನು ದೊಡ್ಡವನಾಗಿ, ಕೀರ್ತಿಶಾಲಿಯಾಗಿ ಮನೆಗೆ ವಾಪ್ಸು ಬಂದರೆ ಆದರಿಸದೇ ಇರುವನೇ ?

ತಾನು ಬೆಂಗಳೂರು ಮೈಸೂರಿಗೆ ಹೋದುದು ಅವರುಗಳಿಗೆ ತಿಳಿದೇ ತಿಳಿಯುತ್ತದೆ. ಅನಿಲಕುಮಾರನೆಂಬ ಹೆಸರು ಅವರಿಗೆ ಗೊತ್ತಿಲ್ಲದಿದ್ದರೂ ಯಾರಾದರೂ ಸಿನಿಮಾ ನೋಡಿದವರು " ನಿಮ್ಮ ಹನುಮಂತು " ಎಂದು ಹೇಳಿಯೇ ಹೇಳುತ್ತಾರೆ.

ಆಗ ಆ ಪ್ರಾಣಿಗಳಿಬ್ಬರೂ ಎಷ್ಟು ನೊಂದುಕೊಳ್ಳುತ್ತಾರೆಯೋ ? ಅಕ್ಕ, ತಂದೆ ಇವರಿಬ್ಬರನ್ನೂ ನೋಡಿಕೊಂಡೇ ಹೋಗುವುದೆಂದು ಅವನು ನಿರ್ಧರಿಸಿದನು.

ಅವನು ಇಳಿಯಬೇಕೆಂದಿರುವಾಗ ಎರಡನೆಯ ಬೆಲ್ ಹೊಡೆಯಿತು. ಆದರೂ ಕೆಳಗಿಳಿದುಬಿಟ್ಟನು.

ಸ್ಟೇಷನ್ನಿನಿಂದ ಊರಿನ ಕಡೆ ಹೊರಟನು. ಅವನ ಮನೆ ಇದ್ದುದು ಕಚೇರಿಯ ಬಳಿ. ಸ್ಟೇಷನ್ ದಾಟಿದರೆ ಪಾರ್ಕು. ಅದರ ಪಕ್ಕದಲ್ಲಿ ಮೈಸೂರು ಬೆಂಗಳೂರು ರಸ್ತೆ. ಅಲ್ಲಿ ಯಾರೂ ಅವನ ಪರಿಚಯಸ್ಥರು ಕಂಡುಬರಲಿಲ್ಲ. ಯಾರೂ ಅವನನ್ನು ಲಕ್ಷ್ಯ ಮಾಡಿದಂತೆ ಕಾಣಲಿಲ್ಲ. ಎಂದೋ ಯಾವಾಗಲೋ ಸ್ವಪ್ನದಲ್ಲಿ ನೋಡಿದ ಊರಿನಲ್ಲಿ ಹೋಗುತ್ತಿರುವಂತೆ ಹೋಗುತಿದ್ದನು.

ಸ್ವಲ್ಪ ದೂರ ನಡೆಯುತ್ತಲೂ ಬಲಗಡೆ ಟ್ರಾವಲರ್ಸ್ ಬಂಗಲೆ,

ಹಿಂದೆ ಅವನು ಅಲ್ಲಿನ ದೊಡ್ಡ ಮರಗಳಲ್ಲಿ ಮರಕೋತಿಯಾಡುತ್ತಿದ್ದುದು ಜ್ಞಾಪಕಕ್ಕೆ ಬರುತ್ತಲೂ ಅದನ್ನು ನೋಡುತ್ತಾ ನಿಂತುಕೊಂಡನು. ಆದರೆ ಮರುಕ್ಷಣದಲ್ಲಿಯೇ ಎದುರಿಗಿದ್ದ ಸಿನಿಮಾ ಬಳಿ ಬ್ಯಾನರ್ ಕಣ್ಣಿಗೆ ಬಿದ್ದಿತು. ಕಾಂಚನಲತೆಯೊಂದಿಗೆ ತಾನು ಯಾವುದೋ ಪ್ರಣಯ ಭಂಗಿಯಲ್ಲಿದ್ದಂತೆ ಅದರಲ್ಲಿ ಚಿತ್ರಿಸಲಾಗಿತ್ತು.

ಹೊಡೆದೆಬ್ಬಿಸಿದಂತೆ ಎಚ್ಚರಗೊಂಡು, ಸಿನಿಮಾದ ಪಕ್ಕದಲ್ಲಿ ಬೇಗ ಬೇಗ ನಡೆದುಕೊಂಡು ತನ್ನ ಮನೆಯ ಕಡೆಗೆ ಹೋದನು.

ನಾಡು ಹೆಂಚಿನ ಮನೆಯು ಅಂದಿನಂತೆಯೇ ಇಂದೂ ನಿಂತಿದ್ದಿತು. ಆದರೆ ಅಂದಿಗಿಂತಲೂ ಅದು ಪ್ರಕಾಶರಹಿತವಾಗಿದ್ದಿತು. ನಡುವೆಗೆ ಹೋಗುತ್ತಲೂ ಹಾಸಿಗೆಯ ಮೇಲೆ ಯಾರೋ ನರಳುತ್ತಾ ಮಲಗಿರುವುದು ಕಂಡು ಬಂದಿತು. ಮಲಗಿರುವವರು ತನ್ನ ತಂದೆಯೇನೋ ಎಂದು ಕೊಂಡನು. ಮಲಗಿದ್ದವರು ಕೆಮ್ಮುತ್ತಿದ್ದರು. ಆ ಧ್ವನಿಯನ್ನು ಕೇಳಿ ತನ್ನ ತಂದೆಯಲ್ಲವೆಂದು ಖಚಿತವಾಯಿತು.

ಹಾಸಿಗೆಯ ಮೇಲೆ ಮಲಗಿದ್ದವರು ಅವನಿಗೆ ಅಪರಿಚಿತರು.

ಅನಿಲನು ಒಳಗೆ ಹೋಗಲು ಮಲಗಿದ್ದಾತನು ಅರ್ಧ ಅರ್ಧವಾಗಿ ಎದ್ದು ಕುಳಿತುಕೊಂಡು " ನೀವು ಯಾರು ?" ಎಂದು ಕೇಳಿ, ಕೆಮ್ಮಲು ಮೊದಲು ಮಾಡಿದನು.

ಇದನ್ನು ಕೇಳಿ ಅಡಿಗೆಯ ಮನೆಯಲ್ಲಿದ್ದ ಗೋದಮ್ಮ ಹೊರಗೆ ಬಂದಳು. ಬಹುದಿನಗಳ ನಂತರ ತಮ್ಮನನ್ನು ನೋಡಿದುದರಿಂದ ಆನಂದವಾದರೂ ಒಂದು ಬಗೆಯ ಭಯವುಂಟಾಯಿತು. ವಾಸಮಾಡಲು ಇರುವ ಒಂದು ಸಣ್ಣ ಮನೆ, ಚೂರುಪಾರು ಜಮೀನುಗಳನ್ನು ಸಹ ಮಾರಿಹಾಕಲು ಬಂದಿರುವನೋ, ಇವನ ಆಗಮನದಿಂದ ತನ್ನ ಜೀವನದಲ್ಲಿ ಏನಾದರೂ ಅಲ್ಲಕಲ್ಲೋಲ ಉಂಟಾಗುತ್ತದೆಯೋ ಎಂದವಳಿಗೆ ಹೆದರಿಕೆಯಾಯಿತು.

ಆದರೂ ಅತೀವ ವಿಶ್ವಾಸವನ್ನು ತೋರುವ ದನಿಯಲ್ಲಿ "ಬಂದೆಯಾ ? ಬಾಪ್ಪ. ಈ ಜನ್ಮದಲ್ಲಿ ನಿನ್ನನ್ನು ನೋಡುವ ಋಣವಿದೆಯೋ ಇಲ್ಲವೋ ಎಂದಿದ್ದೆ" ಎಂದಳು.

[೧೮]

"ಅದಿರಲಿ, ಅಪ್ಪನೆಲ್ಲಿ ? ಗೋದಕ್ಕಾ !"

ಗೋದಕ್ಕನು ಕಣ್ಣಿನಲ್ಲಿ ನೀರು ಮಿಡಿಯುತ್ತಾ ಅವರು ಒಂದೂವರೆ ವರ್ಷದ ಮೊದಲು ಮೃತರಾದರೆಂದೂ, ಮಗನನ್ನು ಕಾಣಬೇಕೆಂದು ಮರು ಮರು ಮರಗಿದರೆಂದೂ, ಅವನೆಲ್ಲಿದ್ದಾನೆಯೋ ಹೆಣ್ಣು ಹೆಂಗಸು ತಾನು ಕಂಡು ಹಿಡಿಯಲಾಗಲಿಲ್ಲವೆಂದು ಹೇಳಿದಳು.

ತಂದೆಯು ಸತ್ತ ವಾರ್ತೆಯನ್ನು ಕೇಳಿ ಅನಿಲನಿಗೂ ದುಃಖವಾಯಿತು. ಅವನೂ ಒಂದೆರಡು ಹನಿ ಕಣ್ಣೀರು ಬಿಟ್ಟು "ನಾನು ವಾಪ್ಸು ಬರುವ ವೇಳೆಗೆ ಅಪ್ಪನಂತೂ ಇಲ್ಲ. ನೀನಾದರೂ ಇದ್ದೀಯಲ್ಲ." ಎಂದನು

"ನಾನಿದ್ದೇನಪ್ಪ,ನಾನಿದ್ದೇನೆ. ಈ ಪಾಪಿಯನ್ನು ಕೊಂಡು ಹೋಗಲು ಇನ್ನೂ ಏನೂ ಬಂದಿಲ್ಲ."

ಇನ್ನೂ ದುಃಖವು ಶಮನವಾಗದೇ ಕಂಪಿಸುವ ಸ್ವರದಿಂದ "ಹಾಗೆಲ್ಲಾ ಅನ್ನಬೇಡಕ್ಕ ? ನೀನೇಕೆ ಸಾಯಬೇಕು ? ನೀನೂ ಸತ್ತುಹೋದರೆ ನನಗಾರು ದಿಕ್ಕು?" ಎಂದನು.

ಮುಂದೆ ಯಾವ ಮಾತನ್ನು ಆರಂಭಿಸಬೇಕೆಂಬುದು ಯಾರಿಗೂ ಕೂಡಲೇ ತೋರಲಿಲ್ಲ. ಅಕ್ಕ ತಮ್ಮಂದಿರು ಒಬ್ಬರನ್ನು ಒಬ್ಬರು ನೋಡುತ್ತಾ ಗಳಿಗೆಯ ಕಾಲ ಮೌನವಾಗಿ ಕುಳಿತುಕೊಂಡರು.

ಅನಿಲನೇ ಹೊಸ ಮಾತು ತೆಗೆದು " ಇವರಾರು ಗೋದಕ್ಕಾ ! " ಎಂದನು.

"ಅವನು ನಮ್ಮ ಯಜಮಾನರ ದೂರದ ಸಂಬಂಧ. ಅಚ್ಯುತ ಅಂತ. ಅಪ್ಪನಿಗೆ ಮೈ ಚೆನ್ನಾಗಿಲ್ಲದಾಗ ಯಾರಾದರೂ ಜೊತೆಗಿರಲಿ ಅಂತ ಕರೆಸಿದೆ. ದಿನ ವಾರಗಳನ್ನೆಲ್ಲ ಅವನೇ ಮಾಡಿದ. ಅವನಿಗೂ ಹಿಂದು ಮುಂದಿಲ್ಲ. ಇಲ್ಲೇ ಇರು ಎಂದು ಹೇಳಿದೆ. ಇದೇ ಊರಿನದೊಂದು ಹೆಣ್ಣು ಕೊಡಿಸಿ ಇಲ್ಲಿಯೇ ಇಟ್ಟುಕೊಂಡಿದ್ದೇನೆ. ಕಂಪನಿಯಲ್ಲಿ ಲಾರೀ ಡ್ರೈವರ್ ಕೆಲಸ ಮಾಡಿಕೊಂಡ. ಏನೋ ಹಾಯಾಗಿರೋಣವೆನ್ನುವಾಗ ಗೂರಲುಬ್ಬಸ ಕಾಲು ಹಾಕಿಕೊಂಡಿದೆ. ಒಂದು ದಿನ ಕೆಲಸಕ್ಕೆ ಹೋದರೆ ನಾಲ್ಕುದಿನ ಹಾಸಿಗೆಯ ಮೇಲೆ ಬಿದ್ದುಕೊಂಡಿರುತ್ತಾನೆ "

ಈ ಕತೆಯನ್ನು ಕೇಳಿದ ಮೇಲೆ ಅನಿಲನು ಅಚ್ಯುತನ ಹೆಂಡತಿ ಯಾರು?

ಕಣ್ಣಿಗೆ ಬೀಳಲಿಲ್ಲವಲ್ಲ–ಎಂದುಕೊಂಡನು. ಅನಂತರ ಅವಳು ಯಾರಾದರೇ ನನಗೇನು ಎಂದು ಸಮಾಧಾನವನ್ನು ತಂದುಕೊಂಡನು.

ಅನಿಲನು ತಾನು ಹೊರಡುತ್ತೇನೆಂದು ಹೇಳುವಷ್ಟರಲ್ಲಿ ಗೋದಮ್ಮ "ಇಷ್ಟು ದಿನ ಎಲ್ಲಿದ್ದೆ, ಹನುಮಂತು, ಎಂದಳು.

"ಮದರಾಸಿನಲ್ಲಿದ್ದೆ."

" ಅಲ್ಲೇನು ಕೆಲಸಗಿಲಸ ಸಿಕ್ಕಿತೇ ? ಏನು ಮಾಡಿಕೊಂಡಿದ್ದೆ "

"ಇನ್ನೂ ಯಾವುದೂ ಗೊತ್ತಾಗಿಲ್ಲ, ಗೋದಕ್ಕ. ಹಾಗೇ ಓಡಿಯಾಡಿಕೊಂಡಿದ್ದೇನೆ."

ತಮ್ಮನ ಗಾಂಭೀರ್ಯ, ಅವನು ಮಾತನಾಡುವ ರೀತಿ ಇವುಗಳನ್ನು ನೋಡಿ, ಇವನ ಆಗಮನದಿಂದ ಯಾವ ಅನಾಹುತವೂ ಆಗುವುದಿಲ್ಲವೆಂದು ಅಷ್ಟು ಹೊತ್ತಿಗೆ ಗೋದಮ್ಮನಿಗೆ ಧೈರ್ಯ ಬಂದಿತ್ತು.

ಅವಳು ಮಾತೃವಾತ್ಸಲ್ಯದಿಂದ "ಹನುಮಂತು. ಹಾಗಿದ್ದರೆ ಎಲ್ಲಿಯೋ ಯಾಕೆ ಅಲೆದಾಡಿಕೊಂಡಿರಬೇಕು ? ಇಲ್ಲಿಗೇ ಬಂದುಬಿಡು. ಯಾರದೇನು ಶಾಶ್ವತ. ಏನೋ ಇರುವುದರಲ್ಲಿ ಒಬ್ಬೊಬ್ಬರು ಒಂದೊಂದು ತುತ್ತು ತಿಂದು ಕೊಂಡಿರೋಣ. ಇಲ್ಲಿಯೇ ಏನಾದರೂ ಮಾಡಿಕೊಳ್ಳುವೆಯಂತೆ" ಎಂದಳು.

ಅವಳಿಂದ ಅವನು ಅಷ್ಟೊಂದು ನಿರೀಕ್ಷಿಸಿರಲಿಲ್ಲ. ಅವನಿಗೆ ಎಂದೂ ಕಾಣದ ತಾಯಿಯನ್ನು ಕಂಡ ಹಾಗಾಯಿತು. ಅರೆಕ್ಷಣದಲ್ಲಿ ಅನೇಕ ಭಾವನೆಗಳು ಬಂದುವು. ಬಾಲ್ಯದಲ್ಲಿಯೇ ಗಂಡನನ್ನು ಕಳೆದುಕೊಂಡಳು. ತವರು ಮನೆಗೆ ಬಂದು ಸೇರಿದರೆ, ಅರೆಹೊಟ್ಟೆ ತಿಂದುಕೊಂಡು ತಂದೆ ತಮ್ಮನನ್ನು ಸಾಕಬೇಕಾಯಿತು. ತಮ್ಮ ದೂರವಾದ ನಂತರ, ತಂದೆಯು ಸತ್ತ ಮೇಲೆ, ಯಾರು ದಿಕ್ಕು ಎಂದು ಯಾರನ್ನೋ ತಂದಿಟ್ಟುಕೊಂಡರೆ ಅವನೂ ಅರ್ಧ ಸತ್ತು ಬಿದ್ದಿದ್ದಾನೆ. ಹೀಗೆ ಗೋದಕ್ಕನ ಜೀವನವು ಕಷ್ಟದಲ್ಲೇ ಪರ್ಯವಸಾನವಾಗಬೇಕೇ ಎಂದು ಮನಸ್ಸಿಗೆ ಬಂದಿತು.

ಹೋಗುವಾಗ ಅವಳಿಗೆ ಏನಾದರೂ ಸ್ವಲ್ಪ ಹಣವನ್ನು ಕೊಟ್ಟು ಹೋಗಬೇಕು ಎಂದುಕೊಂಡನು.

ಅಷ್ಟು ಹೊತ್ತಿಗೆ ಚಿರಪರಿಚಿತಳಾದ ಮಂಜುಳೆಯು ಒಂದು ಸೀಸಾಯಿ

ನಲ್ಲಿ ಔಷಧಿಯನ್ನೂ, ಒಂದು ಬ್ಯಾಗ್‌ನಲ್ಲಿ ಸಾಮಾನುಗಳನ್ನೂ ತೆಗೆದು ಕೊಂಡು ಬಂದಳು. ಅನಿಲನಿಗೆ ದಿಗ್ಭ್ರಾಂತಿಯಾಯಿತು. ಅವಳು ತಲೆ ತಗ್ಗಿಸಿಕೊಂಡು ಒಳಗೆ ಹೊರಟು ಹೋದಳು. ಅನಿಲನು ವಿಸ್ಮಯದಿಂದ ಅವಳು ಹೋದ ಕಡೆಗೇ ನೋಡಲಾರಂಭಿಸಿದನು.

ಅನಿಲ ಮತ್ತು ಮಂಜುಳೆಯ ಮನಸ್ಸಿನಲ್ಲಿ ಆದಂತಹ ಅಲ್ಲ ಕಲ್ಲೋಲವೊಂದೂ ಗೋದಕ್ಕನಿಗೆ ಗೊತ್ತಾಗಲಿಲ್ಲ.

ಅವಳು ಸಹಜವಾದ ರೀತಿಯಲ್ಲಿ " ಅವಳು ನಮ್ಮ ಅಚ್ಯುವಿನ ಹೆಂಡತಿ ಮಂಜುಳಾ" ಎಂದು ಹೇಳಿದಳು.

ಅನಿಲನು ಆ ಮಾತಿಗೇನೂ ಹೇಳಲಿಲ್ಲ. ಏನು ಹೇಳಬೇಕೆಂದು ತೋರಲೂ ಇಲ್ಲ.

ಸ್ವಲ್ಪ ಹೊತ್ತು ಹಾಗೆಯೇ ಕುಳಿತಿದ್ದು " ನಾನಿನ್ನು ಬರುತ್ತೇನಕ್ಕಾ" ಎಂದನು.

ಆಕೆ ಗಾಬರಿಯಿಂದ ''ಇದೇನೋ, ಬಂದವನು ಬರುವುದಕ್ಕೇ ಇಲ್ಲ, ಹಾಗೆಯೇ ಹೊರಟು ಹೋಗುತ್ತೀಯೆ. ಇದೆಲ್ಲಾ ಚೆನ್ನಾಗಿರುವುದಿಲ್ಲಪ್ಪ" ಎಂದಳು.

"ಚೆನ್ನಾಗಿರುವುದು ಏನು ಬಂತಕ್ಕ ?"

" ನಿನ್ನ ಮನೆ, ನಿನ್ನ ಬಾಗಿಲು. ನಿನಗೇ ಬೇಡವಾದ ಮೇಲೆ ನಾವು ಗೂಟ ಹೊಡೆದುಕೊಂಡು ಕೂತಿರಬೇಕೇ ?"

" ನಾನು ಮನೆ ಬಿಟ್ಟು ಹೋದ ಮಗ. ನೀನು ಮನೆಯಲ್ಲಿರುವ ಮಗಳು. ಇಲ್ಲಿರುವುದೆಲ್ಲಾ ನಿನ್ನದೇ ಅಕ್ಕಾ. ನಾನೂ ನಿನ್ನವನೇ "

" ಹಾಗಲ್ಲ, ಹನುಮಂತು! ಏನೇ ಆಗಲಿ, ಮಗನು ಮಗನೇ. ಮಗಳು ಹೊರಗಿನವಳೇ "

''ನೀನು ಆ ರೀತಿ ಮಾತನಾಡ ಬೇಡಕ್ಕಾ! ಹಾಗೆ ಮಾತನಾಡಿದರೆ ನನಗೆ ದುಃಖವಾಗುತ್ತದೆ''

ವಾಸ್ತವವಾಗಿ ತನ್ನ ಅಕ್ಕನ ಸ್ಥಿತಿ, ಅವಳ ಮಾತುಗಳು ಇವುಗಳನ್ನು ನೋಡಿ ಅನಿಲನ ಮನಸ್ಸಿಗೆ ನೋವಾಗಿತ್ತು. ಈ ದಾರುಣವಾದ ಜೀವನ

ವನ್ನು ನಡೆಸಲು ಮಂಜುಳೆಯೂ ಬಂದು ಸಿಕ್ಕಿ ಬಿದ್ದಳಲ್ಲ–ಎಂದು ಪರಿತಾಪ ಉಂಟಾಯಿತು. ಆದರೆ ಅದೊಂದನ್ನೂ ಅವನು ಪ್ರಸ್ತಾಪ ಮಾಡಲಿಲ್ಲ.

ಅವನಲ್ಲಿಯೇ ನಿಂತುಬಿಡುತ್ತಿದ್ದನೋ, ಏನೋ? ಆದರೆ ಆ ದಿನ ಮಧ್ಯಾಹ್ನದೊಳಗೆ ಮೈಸೂರಿಗೆ ಸೇರಲೇಬೇಕಾಗಿದ್ದಿತು. ನಿನ್ನೆಯೇ ಕಾಂಚನ ಲತೆಗೆ ಅಸಮಾಧಾನವಾಗಿದ್ದಿತು. ಈ ದಿನವೂ ಅವನು ಹೋಗದಿದ್ದರೆ ಚೆನ್ನಾಗಿರುವುದಿಲ್ಲ.

"ಬಹಳ ಮುಖ್ಯವಾದ ಕೆಲಸವಿದೆ. ನಾನು ಈ ದಿನವೇ ಮೈಸೂರಿಗೆ ಹೋಗಬೇಕು. ಮೈಸೂರಿಗೇ ನೇರವಾಗಿ ಟಿಕೆಟ್ ತೆಗೆದುಕೊಂಡಿದ್ದೆ. ನಿಮ್ಮಗಳ ನೆನಪು ಬಂದು ಇಳಿದುಬಿಟ್ಟೆ"

"ಹೋಗಲಿ, ಊಟ ಮಾಡಿಕೊಂಡು ಮಧ್ಯಾಹ್ನವಾದರೂ ಹೋಗು"

"ಈಗ ಬೇಡಕ್ಕಾ, ಇನ್ನು ವಾರದಲ್ಲಿಯೇ ಪುನಃ ಬರುತ್ತೇನೆ. ಆಗ ಮೂರು ನಾಲ್ಕು ದಿನವಿರುತ್ತೇನೆ"

ತಮ್ಮನು ಒಪ್ಪುವಂತೆ ಕಂಡುಬರಲಿಲ್ಲ. ಅವನನ್ನು ಹಾಗೆಯೇ ಕಳಿಸಲು ಅವಳಿಗೆ ಮನಸ್ಸಿರಲಿಲ್ಲ.

"ಒಂದು ಬಟ್ಟಲು ಹಾಲಾದರೂ ತಂದು ಕೊಡುತ್ತೇನೆ" ಎಂದು ಮೇಲೆದ್ದಳು.

ಅನಿಲನು ಅವಳ ಕಡೆಗೆ ನೋಡುತ್ತಾ "ಅಪ್ಪನ ವಿಷಯ ಕೇಳಿ ಈಗಲೇ———" ಎಂದು ಮಾತನ್ನು ಅರ್ಧದಲ್ಲಿಯೇ ನಿಲ್ಲಿಸಿದನು.

ಗೋದಮ್ಮನಿಗೆ ಚೇಳು ಕುಟುಕಿದಂತಾಯಿತು. ನೀನು "ಹುಡುಗ ನಾದರೂ ವಿವೇಕಿ, ಹನುಮಂತು· ಈಗೀಗಲಂತೂ ನನ್ನ ಬುದ್ಧಿಗೆ ಮಂಕು ಹಿಡಿದು ಹೋಗಿದೆ" ಎಂದಳು.

ಅನಂತರ "ಮಂಜುಳಾ, ನನ್ನ ತಮ್ಮ ಬಂದಿದ್ದಾನೆ. ಅವನಿಗೊಂದು ಲೋಟಾ ಕಾಫೀ ಮಾಡಿಕೊಡಮ್ಮಾ" ಎಂದಳು.

ಅನಂತರ "ನಿನ್ನನ್ನು ಕೇಳುವುದೇ ಮರೆತು ಹೋಯಿತು, ಹನುಮಂತು. ನಿನ್ನ ಸಾಮಾನುಗಳೆಲ್ಲಿ? ಹಾಸಿಗೆ ಬಟ್ಟೆಗಳನ್ನೇಕೆ ತರಲಿಲ್ಲ" ಎಂದಳು.

ಅನಿಲನು ತನ್ನ ಸ್ನೇಹಿತರು ಅದನ್ನು ಮೈಸೂರಿಗೆ ತೆಗೆದುಕೊಂಡು ಹೋಗಿದ್ದಾರೆಂದು ಹೇಳಿದನು.

ಅಕ್ಕ-ತಮ್ಮಂದಿರು ಹೊರಗಡೆ ಮಾತನಾಡುತ್ತಾ ಕುಳಿತಿದ್ದರು. ಒಳಗಡೆ ಮಂಜುಳೆಯು ಕಾಫಿಯನ್ನು ಮಾಡತೊಡಗಿದಳು. ಆಗವಳಿಗೆ ಶ್ಯಾಮಲಮ್ಮನ ಮನೆಯಲ್ಲಿ ತಾವಿಬ್ಬರೂ ಕಾಫೀ ಮಾಡಿದುದು ನೆನಪಿಗೆ ಬಂದಿತು.

ಮಂಜುಳೆಯು ಈ ಮನೆಗೆ ಬಂದು ಎರಡು ವರ್ಷದ ಹತ್ತಿರ ಹತ್ತಿರಕ್ಕೆ ಬಂದಿದ್ದಿತು. ಅವರ ಮನೆಯವರು ಅಷ್ಟೇನೂ ಅನುಕೂಲಸ್ಥರಲ್ಲ. ವಯಸ್ಸಾದ ಮಗಳಿಗೆ ವರ ಹುಡುಕುತ್ತಿದ್ದ ಅವರ ತಂದೆಯ ಕಣ್ಣಿಗೆ ಆಗ ತಾನೇ ಮಂಡ್ಯದಲ್ಲಿ ಬಂದು ನೆಲೆಸಿದ್ದ ಅಚ್ಯುತ ಬಿದ್ದನು. ಒಳ್ಳೆಯ ಕುಲ. ಹುಡುಗ ಲಕ್ಷಣವಾಗಿದ್ದ. ಕಂಪನಿಯಲ್ಲಿ ತೊಂಭತ್ತು ರೂಪಾಯಿ ಸಂಬಳವಿದ್ದಿತು. ಅವನಿಗೇನಿಲ್ಲದಿದ್ದರೂ ಗೋದೆಯು ತನಗಿರುವ ಅಲ್ಪ ಸ್ವಲ್ಪ ಹೊಲ ಗದ್ದೆಗಳನ್ನು ಅವನಿಗೇ ಕೊಡುತ್ತಾಳೆ. ಇದಕ್ಕಿಂತ ಒಳ್ಳೆಯ ಸಂಬಂಧವು ಸಿಕ್ಕಲಿಲ್ಲ. ಅವರು ಒಪ್ಪಿದರು.

ತಾಯಿತಂದೆಗಳು ಒಪ್ಪಿದುವರಲ್ಲಿ ಮಂಜುಳೆಗೂ ಹುಳುಕು ಕಂಡುಬರಲಿಲ್ಲ. ಅಚ್ಯುತ ಆಗ ಆರೋಗ್ಯವಾಗಿಯೇ ಇದ್ದನು. ಅವಳಿಗಿದ್ದುದು ತಾನು ಹನುಮಂತನ ಸಂಬಂಧೀಕರನ್ನು ಮದುವೆ ಮಾಡಿಕೊಳ್ಳಬೇಕಲ್ಲ – ಎಂದು. ಅದೇಕೋ ಅವಳ ಮನಸ್ಸು ಹಿಂತೆಗೆಯುತ್ತಿತ್ತು. ಹನುಮಂತನು ಅದೇ ಮನೆಯಲ್ಲಿದ್ದಿದ್ದರೆ ಅವಳು ಈ ಮದುವೆ ಬೇಡವೆಂದು ಹಟಹಿಡಿಯುತ್ತಿದ್ದಳೋ ಏನೋ ? ಓಡಿ ಹೋದವನ ಸುದ್ದಿಯೇ ಇಲ್ಲ. ಅವನು ವಾಪ್ಸು ಬರುತ್ತಾನೆಂದು ಅವಳಿಗೆ ನಂಬಿಕೆ ಇರಲಿಲ್ಲ.

ಹೀಗೆ ಮದುವೆಯಾಯಿತು. ಅನೇಕರಿಗಾಗುವಂತೆ ಅನತಿ ಕಾಲದಲ್ಲಿಯೇ ಅವಳ ಜೀವನದಲ್ಲಿಯೂ ಮೋಡಗಳು ಕವಿಯಲಾರಂಭವಾದುವು.

ಗೋದಮ್ಮ "ಮಂಜುಳಾ, ಕಾಫಿ ಆಯಿತೇ?" ಎಂದು ಹೊರಗಿನಿಂದ ಕೂಗಿದಳು.

" ಬರುತ್ತಿದ್ದೇನಕ್ಕಾ "

ಅಷ್ಟು ಹೊತ್ತಿಗೆ ಪುಡಿ ಹಾಕಿದ್ದಳು. ಬೇಗ ಸೋಸಿ, ಸಕ್ಕರೆ ಹಾಲು ಗಳನ್ನು ಬೆರೆಸಿ, ಗ್ಲಾಸಿನ ತುಂಬಾ ಕಾಫಿಯನ್ನು ತೆಗೆದುಕೊಂಡು ಬಂದಳು.

ಅನಿಲನನ್ನು ನೋಡಿದ ಕೂಡಲೇ ಅವಳ ಕಾಲುಗಳು ಬಿದ್ದು ಹೋ ದಂತಾದುವು. ಆದರೂ ಪ್ರಯಾಸದಿಂದ ಮುಂದೆ ಬಂದು ಅವನ ಮುಂದೆ ಗ್ಲಾಸು ಇಟ್ಟಳು. ಆಗ ಕೈ ಕಂಪಿಸಿ ಸ್ವಲ್ಪ ಕಾಫಿಯು ಚೆಲ್ಲಿತು.

ಗೋದಮ್ಮ " ಗಾಬರಿ ಪಡಬೇಡ, ಮಂಜುಳಾ. ಹನುಮಂತೂ ನಮ್ಮ ಮನೆಯವನೇ " ಎಂದಳು.

ಅರೆಕ್ಷಣ ನಿಂತುಕೊಂಡಂತೆ ಮಾಡಿ ಮಂಜುಳೆಯು ಒಳಗೆ ಹೊರಟು ಹೋದಳು.

ಅನಿಲನು ಕಾಫಿಯನ್ನು ಕುಡಿದು ಗ್ಲಾಸ್ ಕೆಳಗಿಟ್ಟು, ಜೇಬಿಗೆ ಕೈ ಹಾಕಿ ಪರ್ಸ್ ತೆಗೆದನು. ಅದರಿಂದ ಐನೂರು ರೂಪಾಯಿ ತೆಗೆದು ಅಕ್ಕನಿಗೆ ಕೊಡಲು ಹೋದನು.

ಗೋದಮ್ಮನ ಕಣ್ಣಿನಲ್ಲಿ ನೀರು ತುಂಬಿಕೊಂಡಿತು. ಅನಿರೀಕ್ಷಿತ ಘಟನೆಯಿಂದ ಅವಳಲ್ಲಿ ಸ್ಥಬ್ಧತೆಯು ಬಂದಿತು. ಅವಳ ಕೈ ಚಲಿಸಲಿಲ್ಲ.

"ನನ್ನ ಬಳಿ ತೆಗೆದುಕೊಳ್ಳಲು ನಿನಗೆ ಸಂಕೋಚವೇ, ಅಕ್ಕಾ ! ತೆಗೆ ದುಕೋ. ಏನಾದರೂ ಖರ್ಚಿಗೆ ಇರಲಿ. "

ನಡುಗುವ ಕೈನಿಂದ ಗೋದಮ್ಮ ಆ ಹಣವನ್ನು ತೆಗೆದುಕೊಂಡಳು. ಅವಳೆಂದೂ ಅಷ್ಟು ಹಣವನ್ನು ಒಟ್ಟಾಗಿ ಕೈಯಲ್ಲಿ ಹಿಡಿದುಕೊಂಡಿರಲಿಲ್ಲ.

## ೧೭

ಪ್ರವಾಸವೆಲ್ಲವನ್ನೂ ತೀರಿಸಿಕೊಂಡು ಅನಿಲಕುಮಾರನು ಮದರಾಸಿಗೆ ಬಂದನು. ಅನಂತರ ಚೆಟ್ಟಿಯಾರರನ್ನು ಹೋಗಿ ನೋಡಿದನು. ಅವರು ಪ್ರಿಯವಾಗಿ ಮಾತನಾಡಿದರೇ ಹೊರತು ಅವರಿಂದ ಸುಲಭವಾಗಿ ಹಣವು ಹೊರಡುವಂತೆ ಕಂಡು ಬರಲಿಲ್ಲ.

ಒಂದೊಂದು ಬಾರಿ ಅವರೊಡನೆ ಜಗಳ ಮಾಡಬೇಕೆಂದು ತೋರುವುದು. ಮತ್ತೆ ಕೆಲವು ಬಾರಿ ಬೇಡವೆಂದು ಕೊಳ್ಳುವನು. ಎರಡರ ಪೂರ್ವಾಪರಗಳನ್ನೂ ಸಹ ಸಾವಧಾನವಾಗಿ ಯೋಚಿಸಿದನು.

ಅವರೊಂದಿಗೆ ಜಗಳವಾಡಲು ಅವನ ಬಳಿ ಏನೂ ಇರಲಿಲ್ಲ. ಅರವತ್ತು ಸಾವಿರ ಕೊಡುತ್ತೇನೆಂದು ಹೇಳಿದ್ದರೇ ವಿನಾ ಅನಿಲನಿಗೆ ಅವರೊಂದು ತುಂಡು ಕಾಗದವಾದರೂ ಕೊಟ್ಟಿರಲಿಲ್ಲ. ಇತ್ತೀಚೆಗೆ ವೆಂಕಟಪ್ಪಯ್ಯನವರು ಆಗಾಗ ಅನಿಲನ್ನು ನೋಡಿ ಯೋಗಕ್ಷೇಮವಿಚಾರಿಸಿಕೊಂಡು ಹೋಗುತ್ತಿದ್ದರು. ಸಮಯ ಬಂದರೆ ಅರವತ್ತು ಸಾವಿರ ಕೊಡುವುದಾಗಿ ಹೇಳಿದ್ದುದುಂಟು ಎಂದು ಅವರೂ ಸ್ಪಷ್ಟವಾಗಿ ಹೇಳುವಂತೆ ಕಂಡುಬರಲಿಲ್ಲ. ಸಾಧಾರಣವಾಗಿ ಜಾರಿಕೊಳ್ಳುವುದು ಅವರ ಸ್ವಭಾವ.

ಇನ್ನು ಏನಿದೆ ಎಂದು ಚೆಟ್ಟಿಯಾರರೊಡನೆ ಜಗಳವಾಡುವುದು ?

ಹಣವಂತೂ ಬರುವುದಿಲ್ಲ. ಹಾಗಿರುವಾಗ ಸ್ನೇಹವನ್ನೂ ಯಾಕೆ

ಕೆಡಿಸಿಕೊಳ್ಳಬೇಕು ? ಅವರ ಸ್ನೇಹ ವಿಶ್ವಾಸಗಳಿದ್ದರೆ ಇಂದಲ್ಲ, ನಾಳೆಯಾದರೂ ಪ್ರಯೋಜನವಾಗಬಹುದೆಂದು ತೋರಿತು.

ಹೀಗೆ ಪಡಬಾರದ ಪಾಡು ಪಟ್ಟು, ಒಟ್ಟು ಹತ್ತುಸಾವಿರಕ್ಕೆ ಲೆಕ್ಕಾ ಚುಕ್ತಾ ಮಾಡಿಕೊಳ್ಳ ಬೇಕಾದರೆ ಸಾಕು ಸಾಕಾಗಿ ಹೋಯಿತು. ಲೆಕ್ಕಾಚಾರದ ಕಡೆಯಲ್ಲಿ ಅನಿಲನ ಕೈಗೆ ನಾಲ್ಕು ಸಾವಿರ ರೂಪಾಯಿಗಳು ಬಂದುವು.

ಅನಿಲನು ಕಿಲ್‌ಪಾಕ್‌ನಲ್ಲಿ ತಾನು ಬಾಡಿಗೆ ತೆಗೆದುಕೊಂಡಿದ್ದ ಪುಟ್ಟ ಬಂಗಲೆಯನ್ನೇ ಇಟ್ಟುಕೊಂಡಿದ್ದನು.

ವಾಸವದತ್ತಾ ಚಿತ್ರವು ಮುಗಿದೊಡನೆಯೇ ಅದನ್ನು ಬಿಟ್ಟುಬಿಡಬೇಕೆಂದಿದ್ದನು. ಆದರೆ ಮನೆಯ ಬಾಡಿಗೆಗಳು ದಿನ ದಿನಕ್ಕೆ ಏರುತ್ತಿರುವುದನ್ನು ನೋಡಿ ಹಾಗೆ ಮಾಡಿರಲಿಲ್ಲ. ಈಗ ಪುನಃ ಮದರಾಸಿನಲ್ಲಿ ಇರಬೇಕೆಂದುಕೊಂಡಾಗ ಅದು ಬಹಳ ಅನುಕೂಲವಾಯಿತು.

ಸಣ್ಣ ಬಂಗಲೆಯಿತ್ತು. ಮೋಟಾರು ಕಾರಿತ್ತು. ಕೈಯಲ್ಲಿ ಸ್ವಲ್ಪ ಹಣವಿತ್ತು. ವಾಸವದತ್ತಾ ಚಿತ್ರದಲ್ಲಿ ಆಗ ತಾನೇ ಆರ್ಜಿಸಿದ ಅಪಾರವಾದ ಕೀರ್ತಿಯಿತ್ತು. ರಾಜರತ್ನಂ ಚೆಟ್ಟಿಯಾರರು ಮೊಟ್ಟ ಮೊದಲನೆಯ ಬಾರಿ ಅರವತ್ತು ಸಾವಿರ ರೂಪಾಯಿಗೆ ಅವನನ್ನು ಬುಕ್ ಮಾಡಿದ್ದರೆಂಬ ಹೆಸರಿತ್ತು.

ಇದಿಷ್ಟನ್ನೂ ಇಟ್ಟುಕೊಂಡು ತನಗಾವುದಾದರೂ ಬುಕ್ಕಿಂಗ್ ಸಿಗುವುದೋ ಎಂದು ಕಾಯತೊಡಗಿದನು.

ಒಂದು ದಿನ ಮಾಮೂಲಿನಂತೆ ವೆಂಕಪ್ಪಯ್ಯನವರು ಒಂದು ಮಾತನಾಡುತ್ತಾ ಕುಳಿದ್ದರು. ಏನೇನೋ ವಿಷಯಗಳು ಬಂದುವು.

ಮಾತಿನ ನಡುವೆ ವೆಂಕಪ್ಪಯ್ಯನವರು "ಅನಿಲ್‌ಕುಮಾರ್. ಕನ್ನಮ್ಮನಿಗೆ ಯಾರೋ ಮಿಕವು ಸಿಕ್ಕಿರುವಂತಿದೆ. ಮಧುರೆಯಿಂದ ಹಿಡಿದುಕೊಂಡು

ಬಂದಿದ್ದಾಳೆ. ಅವನೊಂದು ಚಿತ್ರವನ್ನು ತಯಾರಿಸುತ್ತಾನಂತೆ" ಎಂದು ಹೇಳಿದರು.

"ಏನು ಚಿತ್ರ ?"

"ಚಂದ್ರವದನ ಅಂತ. ಫೋಕ್‌ಲೋರ್ ಎಂದು ಕಾಣುತ್ತದೆ."

"ಯಾವ ಸ್ಟುಡಿಯೋದಲ್ಲಿಯೋ ?"

"ಅದೇ, ನಮ್ಮ ಚೆಟ್ಟಿಯಾರರ ಬಳಿ."

"ಕಾಸ್ಟಿಂಗ್ ಆಗಿದೆಯೇನು ?"

"ಇನ್ನೂ ಇಲ್ಲ. ಅವಳೇ ಹೀರೋಯಿನ್. ಅದಂತೂ ಖಂಡಿತ. ಹೀರೋ ಯಾರೋ ನೋಡಬೇಕು. ನನಗೆ ತೋರುವಂತೆ ಅವಳು ಅಸ್ತು ಎಂದರಾಯಿತು."

ಅನಿಲನು ಮಾತನಾಡಲಿಲ್ಲ. ತಾನು ಅವಳಿಂದ ಅಸ್ತು ಎನ್ನಿಸಿಕೊಳ್ಳುವುದು ಹೇಗೆ–ಎಂದು ಯೋಚಿಸ ತೊಡಗಿದನು.

"ಏನು, ಯೋಚಿಸುತ್ತಿದ್ದೀರಿ" ಎಂದು ಮುಗುಳುನಗೆ ನಕ್ಕರು, ವೆಂಕಪ್ಪಯ್ಯನವರು.

ಸ್ವಲ್ಪ ತಡೆದು, "ನೀವು ಅವಳೊಂದಿಗೆ ಮಾತನಾಡಿ, ನನ್ನ ಹೆಸರು ಸೂಚಿಸಬಾರದೆ ?" ಎಂದನು.

"ಸೂಚಿಸಬಹುದು. ಅವಳೊಂದು ತರಹ ಹೆಂಗಸು. ನೀವೇ ಯಾಕೆ ಅವಳನ್ನು ನೋಡಿ ಕೇಳಬಾರದು ?"

"ನಿಮಗೆ ಅವಳ ಪರಿಚಯ ಚೆನ್ನಾಗಿರಬೇಕಲ್ಲ."

"ಇದೆ. ಆದರೆ ವಾಸವದತ್ತಾ ಕಾಲದಿಂದಲೂ ನನಗೇನೋ ಅವಳನ್ನು ಕಂಡರೆ ಆಗುತ್ತಿರಲಿಲ್ಲ. ನಾನು ದೂರ ದೂರವಾಗಿಯೇ ಇರುತ್ತಿದ್ದೆ. ಅವಳಿಗೆ ನನ್ನ ವಿಷಯದಲ್ಲಿ ಹೇಗಿದೆಯೋ ಎಂದು ಆಲೋಚನೆ."

"ಹಾಗಾದರೆ ಅದಕ್ಕೆ ಪ್ರಯತ್ನಪಟ್ಟರೂ ಪ್ರಯೋಜನವಿಲ್ಲ. ಕನ್ನಮ್ಮನಿಗೆ ಆಗುತ್ತದೆ ಎಂದರೆ ಆಗುತ್ತದೆ. ಇಲ್ಲವೆಂದರೆ ಇಲ್ಲ. ಅವಳದು ಹಿಡಿದಿದ್ದೇ ಹಠ" ಎಂದು ಬಿಟ್ಟರು.

ಅನಂತರ ಬೇರೇ ಮಾತೆತ್ತಿದರು. ಅನಿಲನಿಗೆ ಇನ್ನಾವ ಮಾತಿನಲ್ಲಿಯೂ ಆಸಕ್ತಿಯಿರಲಿಲ್ಲ. ಆದರೆ ತನ್ನ ಮನೋಭಾವವನ್ನು ತೋರಿಸಿ

ಕೊಳ್ಳದೇ ಸ್ವಲ್ಪ ಹೊತ್ತು ಮಾತನಾಡುತ್ತಿದ್ದು ಅವರನ್ನು ಕಳಿಸಿಬಿಟ್ಟನು.

ಮಾರನೆಯ ದಿನ ಬೆಳಗಾಗ ಅನಿಲ ಚಿತ್ರಾ ಸ್ಟುಡಿಯೋಸ್‌ಗೆ ಹೋದನು. ಚೆಟ್ಟಿಯಾರು ಇರಲಿಲ್ಲ. ಮ್ಯಾನೇಜರ್ ನಾರಾಯಣ್‌ರನ್ನು ಕಂಡನು. ಅವರು ವಿಶ್ವಾಸದಿಂದ ಕರೆದು ಮಾತನಾಡಿಸಿದರು. ಗೋಲ್ಡ್ ಫ್ಲೇಕ್ ಸಿಗರೇಟ್ ಟಿನ್, ಬೆಂಕಿಪಟ್ಟಣಗಳನ್ನು ಅವನ ಮುಂದಿಟ್ಟು, ಹುಡುಗ ನನ್ನು ಕರೆದು ಕಾಫೀ ತರುವುದಕ್ಕೆ ಹೇಳಿದರು.

ಅನಿಲನು ಕಾಂಚನ ಲತೆಯು ನಿರ್ಮಿಸಲಿರುವ ಚಿತ್ರದ ಮಾತನ್ನು ಎತ್ತಿದನು.

ವೆಂಕಪ್ಪಯ್ಯನವರಿಗಿಂತಲೂ ನಾರಾಯಣ್‌ಗೆ ಆ ಚಿತ್ರದ ವಿಷಯವು ಚೆನ್ನಾಗಿ ಗೊತ್ತಿತ್ತು.

"ಚಿತ್ರಕ್ಕೆ ಫೈನಾನ್ಸ್ ಮಾಡುವವರು ಪಳನಿಯಪ್ಪ ನಾಯಕರ್ ಎಂದೂ, ಕಬ್ಬಿಣದ ಬ್ಲಾಕ್ ಮಾರ್ಕೆಟ್ಟಿನಲ್ಲಿ ಲಕ್ಷಾಂತರ ರೂಪಾಯಿ ಮಾಡಿದ್ದಾರೆಂದೂ, ತಯಾರಿಸುವುದು ತಮಿಳು ಚಿತ್ರವೆಂದೂ, ಅದಕ್ಕಾಗಲೇ ತಮಗೆ ಅಡ್ವಾನ್ಸ್ ಕೊಟ್ಟಿದ್ದಾರೆಂದೂ, ಕಾಸ್ಟಿಂಗ್ ಮುಗಿದರೆ ಷೂಟಿಂಗ್ ಆರಂಭವಾಗುವುದೆಂದೂ ಹೇಳಿದರು.

"ಕಾಸ್ಟಿಂಗ್ ವಿಷಯವಾಗಿ ಕಾಂಚನ ಲತಾದೇವಿ ನಿಮ್ಮೊಡನೆ ಮಾತನಾಡಲಿಲ್ಲವೇ ?"

"ಮಾತನಾಡಿದರು. ನಾನೂ ನಾಲ್ಕೈದು ಮಂದಿ ಹೀರೋಗಳನ್ನು ಸೂಚಿಸಿದೆ. ಆಕೆ ಅದೊಂದನ್ನೂ ಒಪ್ಪಲಿಲ್ಲ"

ಅನಿಲನು ನಿರಾಶೆಯ ನಗುವನ್ನು ನಕ್ಕನು.

ನಗುವಿನ ಅರ್ಥವನ್ನು ಅರಿತ ನಾರಾಯಣ್ "ನಾನು ನಿಮ್ಮ ಹೆಸರು ಸೂಚಿಸಲಿಲ್ಲ, ಅನಿಲ್. ಆಕೆಯದು ವಿಚಿತ್ರ ಸ್ವಭಾವ. ಮೊದಲಿನಿಂದ ಆಕೆ ನಿಮ್ಮ ವಿಷಯದಲ್ಲಿ ಅಸಮಾಧಾನದಿಂದಲೇ ಇದ್ದರು. ಅದರಿಂದ ನಿಮ್ಮ ಮಾತು ಎತ್ತಲಿಲ್ಲ" ಎಂದರು.

ಸ್ವಲ್ಪ ಹೊತ್ತು ಮಾತನಾಡುತ್ತಿದ್ದರು.

ಕಡೆಯಲ್ಲಿ ಅವರು "ನೋಡಿ, ಮಿ॥ ಅನಿಲ್. ನೀವು ನಮ್ಮ ಸ್ಟಾರ್.

ಆಕೆ ನಿಮ್ಮನ್ನು ಆರಿಸಿದರೆ ನಮಗೆ ಬಹಳ ಸಂತೋಷ. ನನ್ನ ಕೈಲಾದು ದೆಲ್ಲವನ್ನೂ ಮಾಡುತ್ತೇನೆ. ಆದರೆ ನಿಮಗೆ ಅದನ್ನು ಕೊಡಿಸುತ್ತೇನೆಂದು ವಾಗ್ದಾನ ಮಾಡುವುದಿಲ್ಲ" ಎಂದರು.

"ನನ್ನ ವಿಷಯದಲ್ಲಿ ಮೊದಲಿನಿಂದಲೂ ಆಕೆಗೆ ಅಸಮಾಧಾನ ವೆಂದಿರಲ್ಲ"

"ಅದು ವಾಸವದತ್ತಾ ಕಾಲದ ಮಾತು. ಜೊತೆಯಲ್ಲಿ ಕೆಲಸ ಮಾಡುವವರೊಡನೆ ಆಕೆ ಎಂದೂ ಸರಿಯಾಗಿ ನಡೆದುಕೊಳ್ಳುವುದಿಲ್ಲ. ಆದರೆ ಅದು ದೊಡ್ಡದಲ್ಲ. ಆವಶ್ಯಕತೆ ಇದ್ದಾಗ ಇಂತಹ ಅಸಮಾಧಾನಗಳಿಗೆ ಬೆಲೆಯಿಲ್ಲ. ಪ್ರಯತ್ನ ಮಾಡಿ ನೋಡೋಣ"

ನಾರಾಯಣ್‌ರು ಪ್ರಯತ್ನ ಮಾಡುವುದಾಗಿ ಹೇಳಿದರೂ ಪೂರ್ಣವಾಗಿ ಅವರ ಪ್ರಯತ್ನವನ್ನು ನಂಬಿಕೊಂಡಿರಲು ಅನಿಲನಿಗೆ ಇಷ್ಟವಿರಲಿಲ್ಲ. ಅವನು ಚಿತ್ರಾ ಸ್ಟುಡಿಯೋಸ್‌ನಿಂದ ವಾಪ್ಸು ಬರುವಾಗ ಏನಾದರೂ ಮಾಡಿ ಈ ಚಿತ್ರದಲ್ಲಿ ತಾನು ಮುಖ್ಯ ಪಾತ್ರವನ್ನು ಪಡೆಯಲೇ ಬೇಕೆಂದು ನಿಶ್ಚಯ ಮಾಡಿಕೊಂಡನು.

ಅವನೆಂದೂ ಕಾಂಚಲತೆಗೆ ವಿರೋಧವಾಗಿ ನಡೆದುಕೊಂಡಿರಲಿಲ್ಲ. ಅವಳೆಂದುದಕ್ಕೆ ಎದುರು ಹೇಳಿರಲಿಲ್ಲ. ಜಗಳವಾಡಿರಲಿಲ್ಲ.

ಅದೀಗ ಮನಸ್ಸಿಗೆ ಸಂತೋಷಕರವಾಗಿದ್ದಿತು.

ಒಂದೇ ಒಂದು ಬಾರಿ ಬೆಂಗಳೂರಿನಲ್ಲಿ ಅರಸುರತ್ನೆಯೊಡನೆ ಅವನು ಹೊರಟು ಹೋದಾಗ ಅವಳಿಗೆ ಅಸಮಾಧಾನವಾಗಿದ್ದಿತೆಂದು ಗೊತ್ತಿತ್ತು. ಆದರೆ ಅದನ್ನು ಲಕ್ಷ್ಯ ಮಾಡುವ ಸ್ಥಿತಿಯಲ್ಲಿ ಅವನಾಗ ಇರಲಿಲ್ಲ. ಅದೂ ಅಲ್ಲದೇ ಚಿತ್ರ ತಯಾರಿಕೆಯಲ್ಲಿ ನಟಿಯರ ಕೈವಾಡ ಇಷ್ಟಿರಬಹುದೆಂದೂ, ಅವರ ಅನುಗ್ರಹಕ್ಕೆ ಕೈಕಾಯ ಬೇಕಾಗಬಹುದೆಂದೂ ಅವನು ಎಂದೂ ಊಹಿಸಲಾರದೇ ಹೋಗಿದ್ದನು.

ತಾನೇ ಹೋಗಿ ಕಾಂಚನಲತೆಯನ್ನು ನೋಡಬೇಕೆಂದು ನಿರ್ಧರಿಸಿದನು. ಪೂರ್ವಸಿದ್ಧತೆಗಾಗಿ ಆ ದಿನವೇ ಮದರಾಸು ಬಿಟ್ಟನು.

ಮೈಸೂರಿಗೆ ಬಂದು ಒಳ್ಳೆಯ ಮಲ್ಲಿಗೆ ಹೂಗಳನ್ನೂ, ಕೆಂಡಸಂಪಿಗೆ

ಹೂಗಳನ್ನೂ, ವೀಳೇದೆಲೆಯನ್ನೂ, ಕೊಂಡುಕೊಂಡನು. ಅದೊಂದು ಬುಟ್ಟಿ ಯಷ್ಟಾಯಿತು. ಮತ್ತೊಂದು ಬುಟ್ಟಿಯಷ್ಟು ಈರನಗೆರೆಯ ಎಳೆಯ ಬದನೇಕಾಯಿ ತೆಗೆದುಕೊಂಡನು. ನಂಜನಗೂಡು ರಸಬಾಳೆಯನ್ನು ತೆಗೆದು ಕೊಂಡನು. ವಾಪ್ಸು ಮದರಾಸಿಗೆ ಹೋಗುತ್ತಾ ಕೋಸು, ಟೊಮೊಟೋ, ಕ್ಯಾರೆಟ್ ಮೊದಲಾದ ಬೆಂಗಳೂರು ತರಕಾರಿಗಳನ್ನು ಮತ್ತೆರಡು ಬುಟ್ಟಿಗಳ ತುಂಬಾ ತುಂಬಿಸಿದನು. ಸೇಬು, ದ್ರಾಕ್ಷಿ, ಅಂಜೂರ, ಕಿತ್ತಳೆ, ದಾಳಿಂಬೆ ಮುಂತಾದ ಹಣ್ಣುಗಳನ್ನು ತೆಗೆದುಕೊಂಡನು.

ಮದರಾಸು ತಲುಪಿದ ಪ್ರಾತಃಕಾಲವೇ ಇವೆಲ್ಲವನ್ನೂ ತೆಗೆದು ಕೊಂಡು ಕಾಂಚನಲತೆಯ ಮನೆಗೆ ಹೋದನು. ಅವಳಿನ್ನೂ ಎದ್ದು ಹೊರಗೆ ಬಂದಿರಲಿಲ್ಲ. ಹೇಳಿ ಕಳುಹಿಸಿ ಹೊರಗಡೆ ಕಾಯುತ್ತಾ ಕುಳಿತನು.

ಅವಳು ಬರಲು ಅರ್ಧ ಗಂಟೆಯಾಯಿತು. ಹೊರಗೆ ಹೋಗಲನು ವಾಗಿಯೇ ಅವಳು ಹೊರಗೆ ಬಂದಿದ್ದಳು. ಅವಳ ಕಾರು ಬಾಗಿಲಿನಲ್ಲಿ ನಿಂತಿದ್ದಿತು.

ಜಾರ್ಜೆಟ್ ಸೀರೆಯುಟ್ಟು, ಹೈ ಹೀಲ್ಡ್ ಷೂ ಹಾಕಿಕೊಂಡು, ವ್ಯಾನಿಟೀ ಬ್ಯಾಗ್ ಹಿಡಿದು, ವಯ್ಯಾರದಿಂದ ಹೊರಗೆ ಬಂದಳು.

ಬಾಗಿಲಿನಿಂದ ನೇರವಾಗಿ ಕಾರಿನ ಕಡೆ ಹೊರಟದ್ದವಳು ಅಕಸ್ಮಾತ್ ನೋಡಿದಂತೆ ಅನಿಲನನ್ನು ನೋಡಿ ತಿರಸ್ಕಾರವನ್ನು ಒಳಗೊಂಡ ಮೃದು ಧ್ವನಿಯಿಂದ " ಏನು, ಅಪರೂಪವಾಗಿ ಬಂದಿರಿ ?" ಎಂದು ಹೇಳಿ, ನಿಂತು ಕೊಂಡಳು.

ಅನಿಲನು ಹಸನ್ಮುಖಿಯಾಗಿ ಎದ್ದು ಮುಂದೆ ಬಂದು, ಅವಳೆದುರಿಗೆ ವಿನಯವಾಗಿ ನಿಂತುಕೊಂಡು "ನಮ್ಮೂರಿಗೆ ಹೋಗಿದ್ದೆ. ಬರುವಾಗ ತಮ ಗಾಗಿ ಸ್ವಲ್ಪ ಹೂವು ತರಕಾರಿಗಳನ್ನು ತಂದಿದ್ದೇನೆ" ಎಂದು ಹೇಳಿ, ಅವಳ ಸಮ್ಮತಿಯನ್ನು ನಿರೀಕ್ಷಿಸದೇನೇ, ತನ್ನ ಕಾರಿನಲ್ಲಿ ಕರೆದುಕೊಂಡು ಬಂದಿದ್ದ ಹುಡುಗನ ಕಡೆಗೆ ನೋಡಿದನು.

ಅವನೂ, ಕಾಂಚನಲತೆಯ ಡ್ರೈವರೂ ಹೊರಲಾರದೇ ಆರು ಬುಟ್ಟಿ ಗಳನ್ನೂ ತಂದು ಜಗುಲಿಯ ಮೇಲಿಟ್ಟರು.

ಅಸಮಾಧಾನವಿದ್ದರೂ ಸ್ವಲ್ಪ ಪ್ರಸನ್ನಳಾಗಿ ಅವಳು "ಇಷ್ಟೊಂದು ತಂದಿರೇಕೆ ? ಇಷ್ಟೆಲ್ಲಾ ಏನು ಮಾಡಲಿ ?" ಎಂದಳು.

" ದೊಡ್ಡವರಿಗೆ ತರುವಾಗ ಸ್ವಲ್ಪ ತಂದರಾಗುತ್ತದೆಯೇ ?"

" ಆಗಲಿ, ನೀವು ತಂದನಂತರ ಬೇಡವೆಂದರಾಗುತ್ತದೆಯೇ?" ಎಂದು ಹೇಳಿ, ಒಳಗಿಡಲು ಡ್ರೈವರನಿಗೆ ಸೂಚಿಸಿದಳು.

ಅನಂತರ " ಮಿ!! ಅನಿಲ್ ಕುಮಾರ್. ಈ ದಿನ ನಾನು ಅರ್ಜಂಟಾಗಿ ಎಲ್ಲಿಗೋ ಹೋಗಬೇಕಾಗಿದ್ದಿತು. ಕ್ಷಮಿಸಿರಿ. ಮತ್ತಾವಾಗಲಾದರೂ ನಿಧಾನವಾಗಿ ಬಂದರೆ ಮಾತನಾಡೋಣ" ಎಂದು ಹೇಳಿ, ಹೋಗಿ ಕಾರಿನಲ್ಲಿ ಕುಳಿತುಕೊಂಡಳು.

ಅನಿಲನು ಕಾರು ಹೋಗುವವರೆವಿಗೆ ಕೆಳಗಡೆ ನಿಂತು ಮಾತನಾಡು ತ್ತಿದ್ದು, ಅದು ಹೋದ ನಂತರ ತಾನು ತನ್ನ ಕಾರಿನಲ್ಲಿ ಕುಳಿತು ಹಿಂತಿರು ಗಿದನು.

ಅಂದಿನಿಂದ ದಿನಕ್ಕೆ ಒಂದೆರಡು ಬಾರಿಯಾದರೂ ಹೋಗಿ ಕಾದಿದ್ದು ಕಾಂಚನಲತೆಯನ್ನು ನೋಡುವನು. ಒಂದು ಬಾರಿಯಾದರೂ ತಪ್ಪುತ್ತಲೇ ಇರಲಿಲ್ಲ. ಅವಳು ಅವನನ್ನು ನಿರ್ಲಕ್ಷ್ಯದಿಂದ ಕಾಣುತ್ತಿದ್ದಳು. ಮಾತ ನಾಡಿಸದೆಯೇ ಹೊರಟು ಹೋಗುತ್ತಿದ್ದಳು.

ಆದರೆ ಅವಳ ದೃಷ್ಟಿಯಲ್ಲಿ ಅವನೊಂದು ಆಸೆಯನ್ನು ಕಂಡನು. ಮೇಲಿನದೆಲ್ಲವೂ ತೋರಿಕೆ ಎಂದೂ,ಒಳಗೆ ತನ್ನ ಮೇಲೆ ಅವಳಿಗೆ ಅಭಿಮಾನ ಇದೆ ಎಂದೂ ಭಾವಿಸಿಕೊಂಡನು.

ಬರುಬರುತ್ತ ಸ್ವಲ್ಪ ಸ್ವಲ್ಪವಾಗಿ ಸರಿ ಹೋಗುತ್ತ ಬಂದಿತು. ಎರಡು ಮೂರು ದಿನಗಳ ನಂತರ ಒಮ್ಮೆ ಮಾತನಾಡಿಸಿದಳು. ಮನೆಯಲ್ಲಿ ಮಾಡಿದ ತಿಂಡಿ ತೀರ್ಥಗಳು ಬರಲಾರಂಭಿಸಿದುವು. ಕೆಲವು ಬಾರಿ ಅವಳು ಕಾಫೀ ತೆಗೆದುಕೊಳ್ಳುವಾಗ ಅವನನ್ನೂ ಕರೆದು ಕೂರಿಸಿಕೊಳ್ಳುತ್ತಿದ್ದಳು. ಊಟದ ಸಮಯದಲ್ಲಿ ಅವನಿದ್ದರೆ ಹೇಳಿ ಕಳುಹಿಸುವಳು. ವಾರದೊಳಗೆ ತಾನು ಹೋಗುವಾಗ ಅವನನ್ನೂ ಕಾರಿನಲ್ಲಿ ಕರೆದುಕೊಂಡು ಹೋಗುವಂತಾಯಿತು.

ಒಂದು ದಿನ ಕಾರಿನಲ್ಲಿ ಹೋಗುವಾಗ ಕಾಂಚನಲತೆಯು " ಅನಿಲ ಕುಮಾರ್. ನೀವು ದಿನವೂ ಬರುತ್ತಿದ್ದೀರಿ. ನಾನು ಆ ವಿಷಯವನ್ನೇ

ಮಾತನಾಡಲಿಲ್ಲ. ನೀವು ನನ್ನೊಂದಿಗೆ ಏನಾದರೂ ಹೇಳಬೇಕಾಗಿದೆ ಯೇನು ?" ಎಂದು ಕೇಳಿದಳು.

"ಅಂತಹದೇನೂ ಇಲ್ಲ. ಈಗ ಕೆಲಸವೇನೂ ಇಲ್ಲ. ಎಲ್ಲಿಯಾದರೂ ಹೊತ್ತು ಕಳೆಯುವುದನ್ನು ಇಲ್ಲಿಯೇ ಕಳೆಯುತ್ತಿದ್ದೇನೆ. ನಾನು ಬರು ವುದು ತಮಗೆ ಏನಾದರೂ ತೊಂದರೆಯಾಗಿದೆಯೇನು ?"

"ಇಲ್ಲ, ನಿಮ್ಮಿಂದ ಏನು ತೊಂದರೆ ?''

ಅನಂತರ ಬಹಳ ಹೊತ್ತು ಅವರು ಮಾತನಾಡಲಿಲ್ಲ.

ಕಾಂಚನಲತೆಯು ಪುನಃ "ಎಂದೂ ಇಲ್ಲದೇ ಒಮ್ಮೆಗೇ ನಿಮಗೆ ನನ್ನ ನೆನಪು ಬಂದಿತು. ನಿಮ್ಮೂರಿಗೆ ಹೋಗಿದ್ದವರು ಒಂದು ಗಾಡಿಯಷ್ಟು ಹೂವು ಹಣ್ಣುಗಳನ್ನು ತಂದಿರಿ. ಇದ್ದದ್ದು ಇದ್ದ ಹಾಗೆಯೇ ನಿಮಗಿಷ್ಟು ಆದರಾಭಿಮಾನಗಳು ಉಂಟಾದುದು ಆಶ್ಚರ್ಯಕರವಾಗಿದೆ" ಎಂದಳು.

"ಅಂತಹುದೇನೂ ಇಲ್ಲ, ಲತಾದೇವಿ. ನಾನು ಆಗಾಗ ಮಿ|| ನಾರಾ ಯಣ್‍ರನ್ನು ನೋಡುತ್ತಿರುತ್ತೇನೆ. ಹಾಗೆಯೇ ಈ ಬಾರಿ ಬೆಂಗಳೂರಿಗೆ ಹೋಗುವ ಮೊದಲು ಅವರನ್ನು ನೋಡಿದ್ದೆ. ಅವರು ನಿಮಗೆ ನನ್ನ ಮೇಲೆ ಯಾಕೋ ಅಸಮಾಧಾನವೆಂದು ಹೇಳಿದರು. ನಾನು ಅಂತಹದೇನು ಮಾಡಿ ದೆನೋ ಗೊತ್ತಾಗಲಿಲ್ಲ. ಮೈಸೂರಿನಲ್ಲಿದ್ದಷ್ಟು ದಿನವೂ ಅದೇ ಮನಸ್ಸಿನಲ್ಲಿ ಕೊರೆಯುತ್ತಿದ್ದಿತು. ಬಂದ ಕೂಡಲೇ ನಿಮ್ಮನ್ನು ನೋಡಿ ಮಾತನಾಡ ಬೇಕೆಂದುಕೊಂಡೆ. ಬರುವಾಗ ಬರಿಗೈಯ್ಯಲ್ಲಿ ಬರಬಾರದೆಂದು ಒಂದಿಷ್ಟು ಹಣ್ಣು ಹೂವುಗಳನ್ನು ತಂದೆ"

ಅವಳು ನಗುತ್ತಾ "ನನ್ನೊಡನೆ ಮಾತನಾಡಲು ಈ ಎಂಟು ದಿನದಿಂದ ಅವಕಾಶವಾಗಲಿಲ್ಲವೇನೋ ?" ಎಂದಳು.

"ಆಗದೇ ಏನೂ ಇಲ್ಲ. ಸಂದರ್ಭ ಬರಲಿಲ್ಲವೆಂದು ಹೇಳಲಿಲ್ಲ, ಅಷ್ಟೆ"

"ಈ ಮಾತುಗಳೆಲ್ಲವೂ ಪ್ರಯೋಜನವಿಲ್ಲ, ಅನಿಲ್. ಮಿ|| ನಾರಾ ಯಣ್ ನನ್ನೊಂದಿಗೆ ಮಾತನಾಡಿದರು. ನೀವು ಬರುತ್ತಿರುವುದು ಚಂದ್ರ ವದನದಲ್ಲಿ ಹೀರೋ ಪಾರ್ಟ್ ಹೊಡೆಯುವುದಕ್ಕೆ. ಹೌದೋ, ಇಲ್ಲವೋ ಹೇಳಿಬಿಡಿರಿ''

" ನನಗೂ ಈಗ ಕೆಲಸವಿಲ್ಲ. ಸಿಕ್ಕಿದರೆ ಬೇಡವೆನ್ನುವುದಿಲ್ಲ. ಆದರೆ ನಾನು ಇಲ್ಲಿಗೆ ಬರುತ್ತಿರುವುದು ಅಷ್ಟಕ್ಕಾಗಿಯೇ ಅಲ್ಲ "

" ಖಂಡಿತವಾಗಿ ನೀವು ಹೇಳುತ್ತಿರುವುದು ನಿಜವೇ ?"

" ಖಂಡಿತವಾಗಿ ನಿಜ"

" ಅಷ್ಟೇ ಅಲ್ಲ, ಎಂದಿರಲ್ಲ, ಇನ್ನೇಕೆ ಬರುತ್ತಿದ್ದೀರಿ" ಎಂದು ತುಂಟತನದ ನಗುವನ್ನು ನಗುತ್ತಾ ಕೇಳಿದಳು.

" ಸಮಯ ಬರಲಿ, ಹೇಳುತ್ತೇನೆ" ಎಂದವನು ಉತ್ತರವಿತ್ತನು.

ಆ ಸಮಯವು ನಾಲ್ಕಾರು ದಿನಗಳಲ್ಲಿಯೇ ಬಂದಿತು.

ಮಧ್ಯಾಹ್ನ ನಾಲ್ಕು ಗಂಟೆಯ ಸಮಯದಲ್ಲಿ ಅನಿಲನು ಕಾಂಚನಲತೆಯ ಮನೆಗೆ ಬಂದನು.

ಅವಳು ಹಜಾರದಲ್ಲಿ ಉಯ್ಯಾಲೆಯ ಮೇಲೆ ಕುಳಿತು ತೂಗಿಕೊಳ್ಳುತ್ತಿದ್ದಳು. ನೀರು ಹಾಕಿಕೊಂಡಿದ್ದಳೆಂದು ಕಾಣುತ್ತದೆ. ತೊಳೆದ ತಲೆಗೂದಲು ಬಿಡಿಬಿಡಿಯಾಗಿ ಹಿಂಭಾಗವನ್ನೆಲ್ಲಾ ಮುಚ್ಚುವಂತೆ ಬಿದ್ದಿದ್ದಿತು. ತೆಳುವಾದ ಸಿಲ್ಕ್ ಸೀರೆಯನ್ನು ಉಟ್ಟಿದ್ದಳು. ತೂಗಿಕೊಳ್ಳುತ್ತಿದ್ದ ರಭಸಕ್ಕೂ, ತಿರುಗುತ್ತಿದ್ದ ಫ್ಯಾನಿನ ಗಾಳಿಗೂ, ಸೀರೆಯ ಸೆರಗೂ ಕೇಶರಾಶಿಯೂ ಹಾರುತ್ತಿದ್ದುವು. ನೀಳವಾದ ತೋಳುಗಳು ಉಯ್ಯಾಲೆ ಮಣೆಯ ಮೇಲಿದ್ದುವು. ಪಾದಗಳು ಒಮ್ಮೆ ನೆಲವನ್ನು ಘಾತಿಸುತ್ತಲೂ ಮತ್ತೊಮ್ಮೆ ಮೇಲೇಳುತ್ತಲೂ ಇದ್ದುವು. ತಲೆಯು ಮದವತಿಯರಿಗಿರುವಂತೆ ಹಿಂದಕ್ಕೆ ಬಾಗಿದ್ದಿತು.

ಕಾಂಚನ ಲತೆಯು ಆಭರಣ ಭೂಷಿತೆಯಾಗಿಲ್ಲದಿದ್ದರೂ ಕೈಯಲ್ಲಿ ಎರಡೆರಡು ಬಳೆಗಳೂ, ಕೊರಳಲ್ಲಿ ಚಿನ್ನದ ಒಂದೆಳೆಯ ಸರವೂ ಇದ್ದವು. ಕಿವಿಯಲ್ಲಿ ವಜ್ರದೋಲೆಗಳು ಪ್ರಕಾಶಿಸುತ್ತಿದ್ದವು. ಮೂಗಿನಲ್ಲಿ ಬೊಟ್ಟು, ತುಟಿಗಳ ಮೇಲೆ ಬುಲಾಕು ಕಂಗೊಳಿಸುತ್ತಿದ್ದವು.

ತಿದ್ದಿಕೊಳ್ಳದಿದ್ದರೂ ಹುಬ್ಬುಗಳು ನೀಳವಾಗಿದ್ದವು. ಬಣ್ಣ ಹಾಕದಿದ್ದರೂ ತುಟಿಗಳು ಅರುಣವರ್ಣವಾಗಿದ್ದವು. ಮುಖದ ಮೇಲೆ ಮಂದಹಾಸವಿದ್ದಿತು.

ಅವಳು ಸ್ವಲ್ಪ ಸ್ಥೂಲಾಂಗಿ. ಆದರೂ ರೂಪಸಿ. ಕುಂಭಸ್ತನಿ. ಚಂದ್ರಮುಖಿ.

ಅವಳನ್ನು ನೋಡುತ್ತಾ ನೋಡುತ್ತಾ ಇಂತಹವಳನ್ನು ತಮಿಳು ನಾಡು ಮೋಹಿಸುವುದರಲ್ಲಿ ಆಶ್ಚರ್ಯವಿಲ್ಲವೆಂದು ಕೊಂಡನು.

ಅನಿಲನನ್ನು ನೋಡಿದೊಡನೆಯೇ ಕಾಂಚನ ಲತೆಯು " ಅನಿಲ್. ಬೆಳಗಿನಿಂದ ನೀವು ಬರಲಿಲ್ಲವೆಂದು ಯೋಚಿಸುತ್ತಿದ್ದೆ. ಬಹಳ ಮುಖ್ಯವಾದ ವಿಷಯ ಮಾತನಾಡಬೇಕಾಗಿತ್ತು, ಬನ್ನಿ" ಎಂದು ಹೇಳಿ, ಉಯ್ಯಾಲೆಯನ್ನು ತಡೆದು, ಕುಳಿತುಕೊಳ್ಳುವಂತೆ ನಿರ್ದೇಶ ಮಾಡಿದಳು.

ಅವನು ಕುಳಿತುಕೊಂಡನು.

ಅನಂತರ ಮೆಲ್ಲನೆ ಉಯ್ಯಾಲೆಯನ್ನು ಆಡಿಸುತ್ತಾ "ನಾವು ಈಗೊಬ್ಬ ಹೀರೋವನ್ನು ಆರಿಸಲೇ ಬೇಕಾಗಿದೆ. ಈ ದಿನವೋ ನಾಳೆಯೋ ನಾಯಕರು ಊರಿಗೆ ಬಂದೊಡನೆಯೇ ಗೊತ್ತು ಮಾಡಿಬಿಡುತ್ತೇವೆ. ಈಗಲಾದರೂ ಖಂಡಿತವಾಗಿ ಹೇಳಿ. ನೀವು ನನ್ನ ಬಳಿಗೆ ಬರುತ್ತಿರುವುದು ಅದಕ್ಕಾಗಿ ಯಲ್ಲವೇ ? ಮಿಂಚಿಹೋದ ನಂತರ ಹೇಳಿ ಫಲವಿಲ್ಲ" ಎಂದಳು.

"ಇಲ್ಲ. ನಾನು ಅದಕ್ಕಾಗಿ ಬರುತ್ತಿಲ್ಲ."

"ನಿಜ ಹೇಳುತ್ತೀರಾ ?"

"ನಿಜವಾಗಿ ಹೇಳುತ್ತೇನೆ. ನನಗದು ಬೇಡ. ನೀವಾರಿಗೆ ಬೇಕೋ ಅವರಿಗೆ ಕೊಟ್ಟುಕೊಳ್ಳಿ. "

ಕಾಂಚನಲತೆಯು ಸ್ವಲ್ಪ ಹೊತ್ತು ಯೋಚಿಸಿದಳು. ಅನಂತರ "ಅನಿಲ ಕುಮಾರ್. ಸಾವಿರ ಹೇಳಿದರೂ ನೀವು ಅದಕ್ಕೋಸ್ಕರವಾಗಿಯೇ ಬರುತ್ತಿದ್ದೀರೆಂದು ನನ್ನ ಭಾವನೆ. ಒಂದು ಬಾರಿ, ಒಂದು ಬಾರಿ ನಿಜವನ್ನು ಹೇಳಿ, ಕೇಳುತ್ತೇನೆ. ಹೇಳಿ, ನೀವು ಪಾರ್ಟಿಗಾಗಿ ಅಲ್ಲವೇ ಬ ರು ತ್ತಿ ರು ವು ದು" ಎಂದಳು.

"ಲತಾದೇವಿ. ಆ ಪಾಳು ಪಾರ್ಟಿನ ವಿಷಯ ಎತ್ತಬೇಡಿ. ಅದನ್ನು ಮರೆತು ಬಿಡಿ" ಎಂದು ಗದ್ದರಿಸಿ ಅವನು ಹೇಳಿದನು.

ಕಾಂಚನಲತೆಯು ವಿಸ್ಮಯದಿಂದ ನೋಡತೊಡಗಿದಳು.

[೨೦]

ಅನಿಲನು ಮೃದುವಾಗಿ "ಒಂದು ವಿಧವಾಗಿ ನೀವು ಹೇಳುವುದು ನಿಜ. ನಾನು ಮಿ|| ನಾರಾಯಣ್‌ರನ್ನು ಕಂಡುದೂ ಅದಕ್ಕಾಗಿಯೇ. ಅನಂತರ ನಿಮ್ಮ ಬಳಿಗೆ ಬಂದುದೂ, ಇಲ್ಲಿ ಬಂದು ಕಾಯುತ್ತಿದ್ದುದೂ ಅದಕ್ಕಾಗಿಯೇ. ಆದರೆ ಈಗ ಅದು ನನ್ನ ಉದ್ದೇಶವಲ್ಲ. ಅದಕ್ಕಾಗಿ ಬರತೊಡಗಿದರೂ ಅದು ನಿಮ್ಮ ಪ್ರೇಮದಲ್ಲಿ ಪರ್ಯವಸಾನವಾಯಿತು" ಎಂದನು.

ಅವಳಿಗೆ ಅದು ನಿಜವೆಂದು ತೋರಿತು. ಆದರೂ ಸಂದೇಹದ ಸುಳಿವು ಇದ್ದೇ ಇದ್ದಿತು.

"ನಾನು ನಿಮ್ಮನ್ನು ನೋಡಿದಾಗಲೇ ಪ್ರೀತಿಸ ತೊಡಗಿದೆ. ವಾಸವದತ್ತಾ ಕಾಲದಿಂದಲೂ ನಿಮ್ಮ ವಿಷಯದಲ್ಲಿ ಹುಚ್ಚನಂತಾಗಿದ್ದೇನೆ."

ದೃಢಮಾಡಿಕೊಳ್ಳಲು "ನಿಜವನ್ನು ಹೇಳುತ್ತಿದ್ದೀರಾ, ಅ ನಿ ಲ್. ಹಾಗಾದರೆ ಆಗೆಲ್ಲಾ ದೂರ ದೂರವಾಗಿ ಯಾಕೆ ಇದ್ದಿರಿ ?" ಎಂದಳು.

"ನೀವೆಷ್ಟು ಬುದ್ಧಿವಂತರಾದರಾದರೂ ಗಂಡಸರ ಸ್ಥಿತಿಯು ನಿಮಗೆ ಅರ್ಥವಾಗುವುದಿಲ್ಲ. ಒಬ್ಬ ಗಂಡಸು ಒಬ್ಬ ಹೆಂಗಸನ್ನು ಪ್ರೀತಿಸುತ್ತಾನೆಂದು ಕೊಳ್ಳಿರಿ. ಅವಳು ತನಗೆ ಅಲಭ್ಯಳೆಂದು ಅವನ ಮನಸ್ಸಿಗೆ ಬಂದರೆ ಅವನು ದೂರ ದೂರವಾಗಿಯೇ ಇರುತ್ತಾನೆ."

ಅವನು ಹೇಳಿದುದು ನಿಜವೋ, ಸುಳ್ಳೋ ? ಅಂತೂ ಆ ನಿಮಿಷದಲ್ಲಿ ಅದು ನಿಜವಾಗಿತ್ತು. ಉಯ್ಯಾಲೆಯ ಮೇಲೆ ಕುಳಿತುಕೊಂಡು ತೂಗಿಕೊಳ್ಳುತ್ತಿದ್ದ ಆ ಸುಂದರಿಯನ್ನು ನೋಡಿದಾಗಲಂತೂ ಅವನ ಮನಸ್ಸು ಚಡಪಡಿಸುತ್ತಿತ್ತು. ಹೇಳುವ ಮಾತುಗಳಲ್ಲಿ ಸಹಜತೆಯಿತ್ತು. ಮನಸ್ಸಿನಿಂದ ನೇರವಾಗಿ ಬರುವಂತೆ ಆ ಮಾತುಗಳು ಬಂದುವು.

ಅವಳು ಅದನ್ನು ನಂಬಿದಳು. ನಂಬುವುದು ಅವಳ ಮನಸ್ಸಿಗೂ ಆಪ್ಯಾಯಮಾನವಾಗಿದ್ದಿತು.

ಅವನು ಅವಳನ್ನು ಬಾಚಿ ತಬ್ಬಿಕೊಂಡನು. ಆ ದಿನ ಉಯ್ಯಾಲೆಯ ಮೇಲೆ ಕುಳಿತಿದ್ದ ಕನ್ನಮ್ಮನನ್ನು ನೋಡಿದಾಗಿನಿಂದಲೂ ಅವಳ ಕುಂಭಸ್ತನಗಳನ್ನು ಎದೆಗೆ ಒತ್ತಿಕೊಂಡು, ಆ ಸ್ಪರ್ಶವು ಹೇಗಿರುತ್ತದೆಯೋ ಅನುಭವಿಸಿ ನೋಡಬೇಕೆಂದು ಕೊಳ್ಳುತ್ತಿದ್ದನು. ಈಗ ಆ ಅನುಭವವನ್ನು ಪಡೆದನು. ಆದರಿಂದ ಅವನು ಉದ್ರೇಕಿತನಾದನು.

ಮೊದಲು ಅವಳ ದೇಹವು ಸುಪ್ತವಾಗಿದ್ದಿತು. ಅವಳ ತುಟಿಗಳು ಸ್ತಬ್ಧವಾಗಿದ್ದುವು. ಬರುಬರುತ್ತಾ ಅವನ ಆಲಿಂಗನದಲ್ಲಿ ಅವುಗಳಿಗೆ ಚೇತನವು ಬರತೊಡಗಿತು. ಕೆಳಗೆ ಬಿದ್ದಿದ್ದ ಅವಳ ತೋಳುಗಳು ಅವನ ದೇಹವನ್ನು ಆವರಿಸಿದುವು. ತನ್ನ ಗುಂಗುರು ಕೂದಲುಗಳ ನಡುವೆ ಅವಳ ಮೃದುವಾದ ಕೈ ಬೆರಳುಗಳು ಆಡುತ್ತಿರುವುದು ಅವನಿಗೆ ಯಾವಾಗಲೋ ಗೊತ್ತಾಯಿತು. ಹಾಗೆ ಅವು ಬಲು ಹೊತ್ತು ಆಡುತ್ತಿದ್ದುವು.

ಅವರ ತುಟಿಗಳು ಬಲು ಹೊತ್ತು ಚುಂಬನದಲ್ಲಿ ಮಿಲನವಾದುವು. ಪುನಃ ಅಗಲಿದುವು. ಆ ಅಗಲಿಕೆಯು ಪುನಃ ಕೂಡುವುದಕ್ಕಾಗಿಯೇ ಆಗಿದ್ದಿತು.

ಕಡೆಯಲ್ಲಿ ಅನಿಲನ ಮೊಳಕೈ ಕೆಳಭಾಗವನ್ನು ಹಿಡಿದುಕೊಂಡು "ನೀನು ಒಳ್ಳೆಯ ಬಲವಾದ ಆಳು, ಅನಿಲ" ಎಂದಳು.

ಅವನು ನಕ್ಕುಬಿಟ್ಟನು.

ಕಾಂಚನಲತೆಯು ಅವನ ತಲೆಗೂದಲಿನ ನಡುವೆ ಕೈಯಾಡಿಸಿ, ಸಿಕ್ಕು ಬಿಡಿಸುವಂತೆ ನೇವರಿಸುತ್ತಿದ್ದಾಗ ಅನಿಲನ ತಲೆಯು ಅವಳ ತೊಡೆಯ ಮೇಲಿದ್ದಿತು.

ಕೆನ್ನೆಯನ್ನು ಅಂಗೈಯಿಂದ ಸವರುತ್ತಾ ಅವಳು "ಅನಿಲ, ಪಾರ್ಟಿಗಾದರೂ ಬಂದಿರು. ನನಗಾಗಿಯಾದರೂ ಬಂದಿರು. ಅಥವಾ ಎರಡಕ್ಕೂ ಬಂದಿರು. ಅದರಿಂದ ನನಗಾವ ವ್ಯತ್ಯಾಸವೂ ಕಂಡುಬರುವುದಿಲ್ಲ. ಒಟ್ಟಿನಲ್ಲಿ ನೀನು ನನ್ನ ಬಳಿಗೆ ಬಂದಿದ್ದೀಯೆ. ಇನ್ನು ಈ ಜೀವನದಲ್ಲಿ ನಾವಿಬ್ಬರೂ ಒಟ್ಟಿಗೇ ಇದ್ದುಬಿಡೋಣ" ಎಂದು ಹೇಳಿದಳು.

ತಾನಾಡಿದ ಮಾತಿನಿಂದ ಅವಳ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು.

ಅವನ ಭುಜ ಮತ್ತು ಕೊರಳುಗಳನ್ನು ಸ್ಪರ್ಶ ಮಾಡಿ ಅವನನ್ನು ಚುಂಬಿಸಿದಳು

ಆಮೇಲೆ ಅವರೇನೂ ಮಾತನಾಡಲಿಲ್ಲ. ಮಾತನಾಡುವುದಕ್ಕೆ ಮಾತುಗಳೂ ಇರಲಿಲ್ಲ.

ನಾಯಕರ್ ಬಂದೊಡನೆಯೇ ಕಾಂಚನಲತೆಯು ಹೀರೋವನ್ನು ಆರಿಸಿರುವುದಾಗಿ ತಿಳಿಸಿದಳು. ಸಾಂಪ್ರದಾಯಿಕವಾಗಿ ಅವರು ಅವನನ್ನು ನೋಡಿದರು. ಅವರು ನೋಡಿ ಒಪ್ಪುವುದೇನೂ ಇರಲಿಲ್ಲ. ಕಾಂಚನ ಲತೆಯು "ಹೂ" ಎಂದ ಮೇಲೆ ಅದು ಮುಗಿದು ಹೋಗಿದ್ದಿತು.

ಈ ಬಾರಿ ಚಂದ್ರವದನದಲ್ಲಿ ಅಭಿನಯಿಸಲು ಮಾಡಿದ ಕರಾರು ಕರಾರುವಾಕಾ ಇದ್ದಿತು. ನಾಯಕರು ಮೂವತ್ತು ಸಹಸ್ರ ರೂಪಾಯಿ ಗಳನ್ನು ಕೊಡಲೊಪ್ಪಿ ಬರೆದು ಕೊಟ್ಟರು. ಅನಿಲನಿಗೆ ಹತ್ತು ಸಾವಿರ ರೂಪಾಯಿಗಳ ಅಡ್ವಾನ್ಸ್ ಸಹ ಸಿಕ್ಕಿತು.

ಪುನಃ ದೊಡ್ಡದೊಂದು ತಮಿಳು ಚಿತ್ರದಲ್ಲಿ ಅನಿಲಕುಮಾರನೂ ಕಾಂಚನಲತೆಯೂ ನಾಯಕ ನಾಯಕಿಯರಾಗಿ ಅಭಿನಯಿಸುತ್ತಾರೆಂದು ಫಿಲಿಂ ಪತ್ರಿಕೆಗಳು ಸುದ್ದಿಯನ್ನು ಪ್ರಕಟಿಸಿದುವು. ಆಗ ಆ ಯುವಕ ಯುವತಿಯರಿಗಾದ ಆನಂದವನ್ನು ವರ್ಣಿಸಲಸದಳ.

ನಾಯಕರ್ ಮದರಾಸಿನಲ್ಲಿರುವ ದಿನಗಳನ್ನು ಬಿಟ್ಟರೆ ಉಳಿದ ದಿನ ಗಳಲ್ಲಿ ಹೆಚ್ಚುಕಡಿಮೆ ಒಟ್ಟಿಗೇ ಇರುವರು. ಷೂಟಿಂಗ್ ಆರಂಭವಾದ ಮೇಲಂತೂ ಅವರು ಅಗಲಿರುತ್ತಲೇ ಇರಲಿಲ್ಲ. ಸ್ಟುಡಿಯೋದಲ್ಲಿ ಇಬ್ಬರಿಗೂ ಕೆಲಸವಿದ್ದ ದಿನ ಬರುವುದಂತೂ ಸರಿ. ಒಬ್ಬರ ಷೂಟಿಂಗ್ ಇದ್ದರೂ ಇನ್ನೊಬ್ಬರು ಜೊತೆಯಲ್ಲಿ ಬರುವರು. ಹೊರಗಡೆ ಕೆಲಸವಿಲ್ಲದಾಗ ಇಬ್ಬರೂ ಕಾಂಚನಲತೆಯ ಡ್ರೆಸಿಂಗ್ ರೂಂನಲ್ಲಿಯೇ ಇರುವರು. ಅನೇಕ ಬಾರಿ ಆ ಕೋಣೆಯ ಬಾಗಿಲು ಚಿಲುಕ ಹಾಕಲಾಗುತ್ತಿತ್ತು. ಕೆಲವು ಸಲವಂತೂ ಡೈರೆಕ್ಟರು, ಕ್ಯಾಮರಾಮ್ಯಾನ್ ಮುಂತಾದವರು ಆ ಕೋಣೆಯ ಬಾಗಿಲು ತೆಗೆ ಯುವುದನ್ನು ಕಾಯಬೇಕಾಗಿ ಬರುತ್ತಿತ್ತು.

ನಾಯಕನ ಕಷ್ಟ, ಅವನ ವಿರಹ ಪ್ರದರ್ಶನ ಇಂತಹ ಕೆಲವು ಭಾಗ ಗಳನ್ನು ಬಿಟ್ಟರೆ ಚಂದ್ರವದನಾ ಚಿತ್ರವು ಸರಳವಾದ ಶೃಂಗಾರ ಕತೆ. ಚಿತ್ರದ ಪ್ರಣಯ ದೃಶ್ಯಗಳಂತೂ ಅಮೋಘವಾಗಿದ್ದುವು. ಅವು ವಾಸ್ತವಿಕತೆಯ ಪ್ರತೀಕಗಳಾಗಿದ್ದುವು.

ಒಮ್ಮೆ ಒಬ್ಬರನ್ನೊಬ್ಬರು ಹುಡುಕಿಕೊಂಡು ಅಲೆಯುವಾಗ ಮುಚ್ಚಿ ಟ್ಟುಕೊಂಡವರು ಸಿಕ್ಕಿ ಬಿದ್ದು ಪರಸ್ಪರ ನಗುವರು. ಮತ್ತೊಮ್ಮೆ ಪುಷ್ಪ

ವನದ ತಟಾಕದ ಬಳಿ ಕುಳಿತು ಯಾರ ಮುಖದಲ್ಲಿ ಮೊದಲು ಪ್ರಣಯಾತುರವು ಕಂಡುಬರುವುದೋ ಎಂಬುದನ್ನು ತಿಳಿನೀರಿನಲ್ಲಿ ನೋಡುವರು. ಮಗದೊಮ್ಮೆ ಕಾದು ಕುಳಿತಿರುವ ನಾಯಕನು ತಲೆಯೆತ್ತಿ ಹೂವುಗಳೊಡನೆ ಹೂವಾಗಿ ಕಂಡು ಬರುತ್ತಿರುವ ನಾಯಕಿಯ ಮುಖವನ್ನು ಮರದ ಮೇಲೆ ನೋಡುವನು.

ಕಮಲಗಳೊಡನೆ ಒಂದಾಗಿ ಕಾಣುವ ಮುಖ ಕಮಲವನ್ನೂ, ಹಂಸಗಳೊಡನೆ ಒಂದಾಗಿ ಎದೆ ಎತ್ತಿ ಈಜಿ ಬರುವುದನ್ನೂ ಪರಸ್ಪರ ಅವಲೋಕಿಸುವರು.

ಇಬ್ಬರೂ ಸ್ವಲ್ಪ ಹಿಂದೆ ಮುಂದೆ ನಿಂತು, ಒಬ್ಬರ ಭುಜದ ಮೇಲೆ ಮತ್ತೊಬ್ಬರು ತಲೆಯನ್ನಿಟ್ಟು, ಮನೋನ್ಮತ್ತತೆಯನ್ನು ಅಭಿನಯಿಸುವರು.

ಸಿದ್ಧವಾದ ಚೂರುಗಳನ್ನು ಸ್ಟುಡಿಯೋದಲ್ಲಿ ಪ್ರೊಜೆಕ್ಟ್ ಮಾಡಿದಾಗ ಆ ಪ್ರಣಯಿಗಳಿಬ್ಬರೂ ತಮ್ಮ ಛಾಯೆಗಳನ್ನು ನೋಡಿ ಆನಂದಿಸುತ್ತಾ ಪರಸ್ಪರ ಕೈಗಳನ್ನು ಹಿಸುಕಿಕೊಳ್ಳುವರು.

ಚಿತ್ರದ ಬಹುಭಾಗವು ಮುಗಿದು ಹೋಗಿತ್ತು. ಎಲ್ಲೋ ಅಲ್ಪ ಸ್ವಲ್ಪ ತಿಂಗಳ ಕೆಲಸವು ಮಾತ್ರವಿತ್ತು. ಆಗೊಂದು ಅಘಟನ ಘಟನಾವಳಿಯು ನಡೆಯಿತು.

ಅದು ಸ್ವಲ್ಪ ಸ್ವಲ್ಪವಾಗಿ ಮಂಜಿನಂತೆ ಇಳಿದು ಬರಲಿಲ್ಲ. ಹಟಾತ್ತನೆ ಇಳಿಯುವ ಸಿಡಿಲಿನಂತೆ ಹೊಡೆಯಿತು. ಅವನ ಹೃದಯದಲ್ಲಿದ್ದ ಕಾಂಚನಲತೆಯ ಮೇಲಿನ ಪ್ರೇಮವು ಒಮ್ಮಿಂದ ಒಮ್ಮೆಗೇ ಬತ್ತಿಹೋಯಿತು.

ಹಾಗಾದುದು ಒಂದು ದಿನ ಅರ್ಧ ರಾತ್ರಿಯಲ್ಲಿ. ಅವನು ಕಾಂಚನಲತೆಯ ಮನೆಯಲ್ಲಿ ಅವಳ ಹಾಸಿಗೆಯ ಮೇಲೆ ಮಲಗಿದ್ದನು. ಅವಳೂ ಪಕ್ಕದ್ದಲ್ಲಿ ಬಿದ್ದಿದ್ದಳು. ಆದರೂ ಅನಿಲನಿಗೆ ಅವಳು ಬೇಕಾಗಲಿಲ್ಲ. ಅವಳ ಸ್ಪರ್ಶವು ಅವನಿಗೆ ಅಸಹ್ಯವಾಯಿತು.

ಅವಳು ಅವನಿಗಾಗಿ ಇನ್ನೂ ಹಾತೊರೆಯುತ್ತಿದ್ದಳು. ಆದರವನಿಗೆ ಅವಳಲ್ಲಿ ಕಂಡುಬರುತ್ತಿದ್ದ ಆಕರ್ಷಣೆಯು ಮಾಯವಾಗಿತ್ತು.

ತನ್ನಲ್ಲಿ ಆದ ಈ ಬದಲಾವಣೆಯನ್ನು ಕುರಿತು ಅನಿಲನು ಸಾವಧಾನ

ವಾಗಿ ಆಲೋಚನೆ ಮಾಡಿದನು. ತನ್ನದೇ ತಪ್ಪು ಎಂದು ಕಾಣಲು ತೊಡಗಿತು. ಆದರೆ ಅವನೇನು ಮಾಡಬಲ್ಲ ? ಅದು ಅವನ ಶಕ್ತಿಗೆ ಮೀರಿತ್ತು.

ನಡೆದು ಹೋದ ಕಾರ್ಯಕ್ಕೆ ಮನಸ್ಸು ಕಾರಣಗಳನ್ನು ಹುಡುಕು ವುದಂತೆ. ಅವಳು ತನಗಿಂತಲೂ ವಯಸ್ಸಾದವಳು. ಮೂವತ್ತೈದು ವರ್ಷಗಳು ಮೀರಿದ ಮುದುಕಿ. ಆದರಿಂದ ಪ್ರೇಮವು ಬತ್ತಿ ಹೋಯಿತು ಎಂದುಕೊಂಡನು. ತಾನು ಇವಳಿಗಾಗಿ ಬರಲಿಲ್ಲ. ಬಂದುದು ಚಿತ್ರದಲ್ಲಿ ಹೀರೋ ಪಾರ್ಟು ಸಂಪಾದಿಸುವುದಕ್ಕಾಗಿ. ಸಂಪಾದಿಸಿ ಅಭಿನಯಿಸಿದ ಮೇಲೆ ಆಕರ್ಷಣೆ ಎಲ್ಲಿರುತ್ತದೆ–ಎಂದುಕೊಂಡನು.

ಹೀಗೆ ಅನಿಲನು ಮನಸ್ಸಿಗೆ ಸಮಾಧಾನವನ್ನು ತಂದುಕೊಳ್ಳಲು ಪ್ರಯತ್ನ ಮಾಡಿದನು.

ಆದರೆ ಇವೊಂದನ್ನೂ ಅವಳಿಗೆ ತೋರಿಸಿಕೊಳ್ಳಲಿಲ್ಲ. ಅದೇ ಹಿಂದಿನ ಪ್ರೇಮ, ಅನುರಾಗಗಳಿರುವಂತೆ ಪ್ರದರ್ಶಿಸುತ್ತಿದ್ದನು. ಸಮಯ ಸಿಕ್ಕಿದಾಗ ನುಣುಚಿಕೊಂಡು ಹೊರಟು ಹೋಗುತ್ತಿದ್ದನು.

ಕಾಂಚನಲತೆಯು ಬುದ್ಧಿಶಾಲಿ. ಅವನಲ್ಲಿ ತಪ್ಪು ಹೇಳುವುದಕ್ಕಾಗ ದಂತೆ ಇದ್ದರೂ ಏನೋ ಬದಲಾವಣೆಯಾಗಿದೆ ಎಂದು ಕಂಡುಕೊಂಡಳು. ಅವನ ಪ್ರೇಮ, ಅನುರಾಗಗಳು ಮೊದಲಿನಂತೆ ರಸಮಯವಾಗಿರದೇ ಬರಡು ಅಭಿನಯವಾಗಿರುವುದನ್ನು ಗುರ್ತಿಸಿದಳು. ಅದನ್ನೆಲ್ಲಾ ಸಹಿಸಿಕೊಂಡಿರಲು ಅವಳಿಗೆ ಇಷ್ಟವಿರಲಿಲ್ಲ. ದಿನ ದಿನಕ್ಕೆ ಅವಳ ಸಂದೇಹವು ಬಲವಾಗುತ್ತ ಬಂದಿತು.

ಒಂದು ದಿನ ರಾತ್ರಿ ಅನಿಲನು ಚುಂಬಿಸಿದ ನಂತರ ಕಾಂಚನಲತೆಯು "ಅನಿಲಾ, ಈ ಚುಂಬನದಿಂದ ಮೊದಲಿನಂತೆ ಸುಖವಾಗುವುದಿಲ್ಲ" ಎಂದಳು.

"ಯಾಕೆ! ಏನು ವಿಷಯ ?"

"ಅದು ನನಗಿಂತಲೂ ನಿನಗೆ ಚೆನ್ನಾಗಿ ಗೊತ್ತಿದೆ"

ಆ ಮಾತಿನಲ್ಲಿ, ಆ ಮಾತು ಹೇಳಲ್ಪಟ್ಟ ಧ್ವನಿಯಲ್ಲಿ, ತನ್ನಲ್ಲಾ ಗಿರುವ ಬದಲಾವಣೆಯು ಅವಳಿಗೆ ಗೊತ್ತಾಗಿ ಹೋಗಿದೆ ಎಂದು ಅವನು

ಕಂಡುಕೊಂಡನು. ಇನ್ನು ಏನು ಹೇಳಿದರೂ ಪ್ರಯೋಜನವಿಲ್ಲ. ಆದದ್ದು ಆಗಿ ಹೋಗಿದೆ.

ಸ್ಪಷ್ಟವಾಗಿ ಹೇಳಿಬಿಡುವುದೇ ಉತ್ತಮವೆಂದು ಅವನಿಗೆ ತೋರಿತು'

" ಲತಾ——"

" ಏನು ?"

" ನಿನ್ನಲ್ಲಿ ಏನು ದೋಷವನ್ನೂ ಹೇಳಲಾಗುವುದಿಲ್ಲ. ನೀನು ರೂಪವತಿ. ಗಂಡಸು ಹೆಂಗಸಿನಿಂದ ಅಪೇಕ್ಷಿಸುವುದೆಲ್ಲವನ್ನೂ ನೀನು ಕೊಡಬಲ್ಲೆ. ಆದರೆ ನನ್ನ ಮನಸ್ಸಿನಲ್ಲಿ———

ಅವಳು ಗಮನವಿಟ್ಟು ಕೇಳುತ್ತಿದ್ದಳು.

"———ಮೊದಲಿನಂತೆ ಬಯಕೆಗಳೇ ಏಳುತ್ತಿಲ್ಲ "

ಆ ವಿಷಯವು ಅವನಿಗೂ ಗೊತ್ತಿತ್ತು. ಅವಳೂ ತಿಳಿದುಕೊಳ್ಳುತ್ತಿದ್ದಳು. ಬಾಯಿ ಬಿಟ್ಟು ಹೇಳಿದ್ದರಿಂದ ಇಬ್ಬರ ನಡುವೆಯೂ ಸಿಡಿಲು ಬಿದ್ದ ಹಾಗಾಯಿತು.

ಸ್ವಲ್ಪ ಹೊತ್ತು ಸುಮ್ಮನಿದ್ದು ಕಾಂಚನಲತೆಯು " ಬಯಕೆಯಾಗುವುದಿಲ್ಲ, ಯಾಕೆ ಬಯಕೆಯಾಗುವುದಿಲ್ಲ ?" ಎಂದಳು.

ಅವನು ತಲೆ ತಗ್ಗಿಸಿಕೊಂಡು ಕುಳಿತಿದ್ದನು.

" ಯಾಕೆ ಬಯಕೆಯಾಗುವುದಿಲ್ಲ ಎಂದು ನಾನು ಹೇಳುತ್ತೇನೆ, ಕೇಳು. ನೀನು ಮೊದಲಿನಿಂದ ನನಗೆ ಮೋಸ ಮಾಡುತ್ತಾ ಬಂದಿದ್ದೀಯೆ. ನನ್ನನ್ನು ಪ್ರೀತಿಸುವುದಾಗಿ ಹೇಳಿದೆ. ಪಾರ್ಟಿ ಬೇಡವೆಂದೂ ಬೇಕಾಗಿರುವುದು ನಾನೆಂದೂ ಬೊಗಳಿದೆ. ಸತ್ಯವನ್ನು ಹೇಳುತ್ತೇನೆಂದೆ. ಅಕಸ್ಮಾತ್ ನಾನು ನಿನ್ನ ಮಾತನ್ನು ನಂಬಿದೆ. ಆದರೆ ಅವೆಲ್ಲಾ ಸುಳ್ಳು! ಸುಳ್ಳು! ಸುಳ್ಳು ಹೇಳಿ ನೀನು ನನ್ನನ್ನು ಪಡೆದೆ. ನಿನಗೆ ನಾನು ಬೇಕಾಗಿರಲಿಲ್ಲ. ಬೇಕಾಗಿದ್ದುದು ಪಾರ್ಟಿ. ಅದಕ್ಕಾಗಿ ನನ್ನನ್ನು ಉಪಯೋಗಿಸಿದೆ. ನೀನ್ನು ಸುಳ್ಳುಗಾರ, ವಂಚಕ, ಕತ್ತೆ———"

ಕಾಂಚನಲತೆಯು ಹತ್ತಿರ ಬಂದು ಅವನ ತಲೆಯನ್ನು ಹಿಡಿದು ಅಲ್ಲಾಡಿಸಿದಳು. ಅವನ ಗುಂಗುರು ಕೂದಲನ್ನು ಬೆರಳುಗಳಿಂದ ಹಿಡಿದೆಳೆದು ನೋಯಿಸಿದಳು.

ಅನಿಲಕುಮಾರನು ಸುಮ್ಮನೆ ಕುಳಿತಿದ್ದನು. ಆಗ ಉಯ್ಯಾಲೆಯ ಮೇಲೆ ಕುಳಿತುಕೊಂಡು ತನ್ನ ತಲೆಗೂದಲುಗಳ ನಡುವೆ ಬೆರಳಾಡಿಸುತ್ತಿದ್ದುದೂ, ಈಗ ಅದೇ ಬೆರಳುಗಳಿಂದ ಕೂದಲುಗಳನ್ನು ಹಿಡಿದೆಳೆಯುತ್ತಿರುವುದೂ ನೆನಪಿಗೆ ಬಂದಿತು.

ಆದರಿಂದ ಅವನಿಗೆ ಆ ಸಮಯದಲ್ಲಿಯೂ ಭಾವರಹಿತವಾದೊಂದು ನಗೆಯು ಬಂದಿತು.

ಆ ನಗುವಿನಿಂದ ಅವಳು ಮತ್ತಷ್ಟು ಕೆರಳಿದಳು. ಅವನ ಮುಖ ಮೈಗಳನ್ನು ಪರಚಿದಳು. ಕೂಗುತ್ತಾ ಹೊಡೆಯಲಾರಂಭಿಸಿದಳು.

ಅನಿಲನಿಗೆ ಇನ್ನು ತಡೆಯಲಾಗಲಿಲ್ಲ. ಅವಳನ್ನು ಹಿಂದೆ ತಳ್ಳಿ, ಬಿಡಿಸಿಕೊಂಡನು. ಅವಳು ಕೂಗುತ್ತಾ ಮೇಲೆ ಬಂದಳು. ಅವನು ಮನೆಯಿಂದ ಹೊರಗೆ ಓಡಿಹೋದನು.

ಅವಳು ಕಿರಚಿಕೊಂಡು, ರಾಕ್ಷಸಿಯಂತೆ ಕತ್ತಲಲ್ಲಿ ಬೀದಿಗೆ ಬಂದುದನ್ನು ಆ ರಾತ್ರಿ ಯಾರೂ ನೋಡಲಿಲ್ಲ.

ಸಾಧ್ಯವಾಗಿದ್ದಿದ್ದರೆ ಅವನಿರುವ ಭಾಗವನ್ನು ಕತ್ತರಿಸಿ ಹಾಕಿ, ಅವನಿಲ್ಲದೆಯೇ ಕಾಂಚನಲತೆಯು ಚಿತ್ರವನ್ನು ಮಾಡಿಸುತ್ತಿದ್ದಳು. ಆದರೆ ಆ ಸ್ಥಿತಿಯು ಮೀರಿ ಹೋಗಿದ್ದಿತು. ಅದುವರೆವಿಗೆ ಅನಿಲನು ಆ ಚಿತ್ರದಲ್ಲಿ ಹಾಸುಹೊಕ್ಕಾಗಿ ಬೆರೆತುಕೊಂಡಿದ್ದನು. ಅವನಿಲ್ಲದೆ ಚಿತ್ರವನ್ನು ಮುಗಿಸುವುದೆಂದರೆ ಇದುವರೆವಿಗೆ ಸಿದ್ಧವಾಗಿರುವುದೆಲ್ಲವನ್ನೂ ಸುಟ್ಟು ಹಾಕಿ, ಮತ್ತೆ ಹೊಸದಾಗಿ ಆರಂಭ ಮಾಡಬೇಕಾಗಿತ್ತು.

ಆದರಿಂದ ಆ ಚಿತ್ರದಲ್ಲಿ ಅನಿಲನು ಉಳಿದುಕೊಂಡನು.

ಇನ್ನೂ ಚಿತ್ರದ ಕಡೆಯ ಭಾಗಗಳು ತಯಾರಾಗ ಬೇಕಾಗಿದ್ದಿತು. ಈ ಗಲಾಟೆಗಳಲ್ಲಿ ನಿಂತು ಹೋದ ಷೂಟಿಂಗ್ ಪುನಃ ಆರಂಭವಾಗ ಬೇಕಾಗಿದ್ದರೆ ವಾರ ಹತ್ತು ದಿನಗಳಾದುವು.

ಪುನಃ ಅವರಿಬ್ಬರೂ ಸೆಟ್ಟಿನ್ಮೇಲೆ ಬಂದಾಗ ಬಹಳ ಕಷ್ಟವಾಗತೊಡಗಿತು

ಅನಿಲನನ್ನು ನೋಡಿದಾಗಲೆಲ್ಲಾ ಕಾಂಚನಲತೆಯು ಉದ್ವಿಗ್ನಳಾಗು

ತ್ತಿದ್ದಳು. ಅದು ಹತೋಟಿಗೆ ಬರಬೇಕಾಯಿತು. ಆಡುವ ಮಾತಿನಲ್ಲಿ, ನೋಡುವ ದೃಷ್ಟಿಯಲ್ಲಿ,ಮೃದುತ್ವವು ಬರಬೇಕಾಯಿತು. ಎಷ್ಟೋ ಪ್ರಯಾಸದಿಂದ ಅವುಗಳನ್ನೆಲ್ಲಾ ಸಾಧಿಸಿ ಚಿತ್ರದ ಷೂಟಿಂಗ್ ಮುಂದವರಿಯುತ್ತಿತ್ತು.

ತಾರ ತಾರೆಯರ ಜಗಳವು ಪುಂಖಾನುಪುಂಖವಾಗಿ ಊರಿನಲ್ಲಿಯೆಲ್ಲಾ ಹರಡಿತು. ಆ ವದಂತಿಗಳಲ್ಲಿ ಸತ್ಯವೂ ಅಸತ್ಯವೂ ಬೆರೆತುಕೊಂಡಿದ್ದವು. ಫಿಲಿಂ ಪತ್ರಿಕೆಗಳಲ್ಲಿ ಈ ವಿಷಯವು ಬಗೆ ಬಗೆಯಾಗಿ ವರದಿ ಮಾಡಲ್ಪಟ್ಟಿತು.

# ೧೮

ಚಂದ್ರವದನಾ ಚಿತ್ರವು ಮುಗಿಯಿತು.

ಪ್ರತಿಗಳು ಸಿದ್ಧವಾಗುತ್ತಿದ್ದ ಹಾಗೆಯೇ ಜಾಹೀರಾತುಗಳ ಸುರಿಮಳೆಯು ಮೊದಲಾಯಿತು. ಅನಿಲನಿರುವಂತಹ ದೃಶ್ಯಗಳನ್ನು ಬ್ಯಾನರು, ಪೋಸ್ಟರು ಮತ್ತು ಹಸ್ತ ಪತ್ರಿಕೆಗಳಲ್ಲಿ ಹಾಕ ಕೂಡದೆಂದು ಕಾಂಚನಲತೆಯು ಹಠ ಹಿಡಿದಳು. ಅದಿಲ್ಲದೇ ಸರಿಯಾಗಿ ಜಾಹೀರಾತು ಮಾಡುವುದು ಅಸಾಧ್ಯವಾಗಿದ್ದಿತು. ನಿರ್ಮಾತೃಗಳೂ, ಜಾಹಿರಾತು ಏಜಂಟರುಗಳೂ ಕಾಂಚನಲತೆಯನ್ನು ಸಮಾಧಾನಗೊಳಿಸಿ ಒಪ್ಪಿಸಬೇಕಾದರೆ ಸಾಕುಸಾಕಾಗಿ ಹೋಯಿತು.

ಸುಂದರ ಪ್ರಣಯ ಭಂಗಿಗಳೇನೋ ಚಿತ್ರಿಸಲ್ಪಟ್ಟವು. ಆದರೆ ಅವುಗಳಲ್ಲೆಲ್ಲಾ ಕಾಂಚನಲತೆಯ ಹೆಸರೇ ದೊಡ್ಡದಾಗಿ ಶೋಭಿಸುತ್ತಿದ್ದಿತು. ಅನಿಲನ ಹೆಸರಿದ್ದರೆ ಸಣ್ಣದಾಗಿ ಎಲ್ಲಿಯಾದರೂ ಇರುತ್ತಿತ್ತು. ಇಲ್ಲದಿದ್ದರೆ ಅದೂ ಇರುತ್ತಿರಲಿಲ್ಲ. ಚಿತ್ರದ ಟೈಟಲ್‌ನಲ್ಲಿ ಅವನ ಹೆಸರು ಕಂಡೂ ಕಾಣದಷ್ಟು ಚಿಕ್ಕದಾಗಿದ್ದಿತು.

ಅನಿಲಕುಮಾರನ ಕೀರ್ತಿ ಲತೆಯನ್ನು ಜಿಗುಟಿ ಹಾಕಲು ಯಾರೆಷ್ಟು ಪ್ರಯತ್ನಮಾಡಿದರೂ ಅದು ಸಾಧ್ಯವಾಗಲಿಲ್ಲ. ಚಿತ್ರವು ಪ್ರದರ್ಶಿಸಲ್ಪಟ್ಟ ನಂತರ ಅವನ ಹೆಸರೇ ಮೇಲೆ ಬರಲು ಆರಂಭವಾಯಿತು.

ಪತ್ರಿಕೆಗಳು ಅವನನ್ನು ಶ್ಲಾಘಿಸಿ ಬರೆದುವು. ಅವನಿಲ್ಲದಿದ್ದರೆ ಚಿತ್ರವು

ಕಳೆಕಟ್ಟುತ್ತಿರಲಿಲ್ಲವೆಂದೂ, ಅಂತಹವರಲ್ಲಿ ನಿರ್ಮಾತೃಗಳು ಅವನ ಹೆಸರನ್ನು ಮುಚ್ಚಲು ಪ್ರಯತ್ನಿಸಿ ಕಲೆಗಾರನಿಗೆ ಅನ್ಯಾಯಮಾಡಿ ವಿಫಲ ಮನೋರಥ ರಾದರೆಂದೂ ಬರೆದುವು.

ಜನಗಳು ಅವನ ಅಭಿನಯವನ್ನು ಮೆಚ್ಚಿಕೊಂಡರು. ಅನುರಾಗ ಪೂರಿತವಾದ ಅವನ ರಾಗಗಳು ಎಲ್ಲರ ಬಾಯಲ್ಲಿಯೂ ನುಡಿಯಲಾರಂಭವಾದುವು. ರೇಡಿಯೋಗಳಲ್ಲಿಯೂ, ಹೋಟೆಲ್ ಲೌಡ್ ಸ್ಪೀಕರುಗಳಲ್ಲಿಯೂ ಅವನ ಹಾಡುಗಳೇ ಕೇಳಿ ಬರುತ್ತಿದ್ದವು.

ಸಿಲೋನ್ ರೇಡಿಯೋವಂತೂ ಅವನ ರಿಕಾರ್ಡುಗಳನ್ನು ಹಾಕುವುದರಲ್ಲಿ ಬೇಸರವನ್ನೇ ತೋರುತ್ತಿರಲಿಲ್ಲ. ಒಂದೆರಡು ಬಾರಿ ಅವನು ಕೊಲಂಬೋಗೆ ಹೋಗಿ ತಾನು ಉಪಯೋಗಿಸದಿರುವ ಸೋಪುಗಳನ್ನೂ, ಸ್ನೋಗಳನ್ನು ಉಪಯೋಗಿಸುತ್ತಿರುವುದಾಗಿ ಸುಳ್ಳು ಹೇಳಬೇಕಾಗಿ ಬಂದಿತು.

ಸುಳ್ಳು ಹೇಳುವುದು ಅವನಿಗೆ ಕಷ್ಟವಾಗಿರಲಿಲ್ಲ.

ಚಂದ್ರವದನ ಚಿತ್ರದ ಪ್ರದರ್ಶನಾನಂತರದಲ್ಲಿ ಅನಿಲಕುಮಾರನ ಸ್ಥಿತಿಯೇ ಬದಲಾಯಿಸಿ ಹೋಯಿತು.

ಕಾಂಚನಲತೆಯು ಹದಿನೈದು ವರ್ಷಗಳಿಂದಲೂ ತಮಿಳು ದೇಶದ ತಾರೆ. ಅನೇಕ ಸಂದರ್ಭಗಳಲ್ಲಿ ತೆಲಗು, ಕನ್ನಡ, ಚಿತ್ರಗಳಲ್ಲಿಯೂ ಅಭಿನಯಿಸಿದ್ದಳು. ತ್ರಿಭಾಷಾ ತಾರೆ ಎಂದು ಪ್ರಖ್ಯಾತಿ ಪಡೆದಿದ್ದಳು.

ಆದರೆ ವಾಸವದತ್ತಾ ಮತ್ತು ಚಂದ್ರವದನ ಚಿತ್ರಗಳಷ್ಟು ಯಾವ ಚಿತ್ರವೂ ಕಳೆದ ಹತ್ತು ವರ್ಷಗಳಿಂದ ಹಣವನ್ನು ತಂದಿರಲಿಲ್ಲ. ಅದರಿಂದ ಆ ಚಿತ್ರಗಳಿಗೆ ಹಣ ಬಂದುದು ಅನಿಲಕುಮಾರನಿಂದಲೇ ಎಂದು ನಿರ್ಮಾತೃಗಳು ಭಾವಿಸಲಾರಂಭಿಸಿದರು. ಫಿಲಂ ಪತ್ರಿಕೆಗಳೂ ಅದನ್ನೇ ಬರೆದುವು.

ಚಲಚಿತ್ರ ವರ್ತುಲಗಳು ಇವುಗಳನ್ನೆಲ್ಲಾ ಕೂಲಂಕಶವಾಗಿ ವಿಮರ್ಶಿಸುವ ಗೋಜಿಗೆ ಹೋಗಲಿಲ್ಲ. ಅನಿಲಕುಮಾರನು ಅದೃಷ್ಟವಂತನೆಂದೂ ಅದರಿಂದಲೇ ಈ ಎರಡು ಚಿತ್ರಗಳೂ ಅನದೃಶವಾದ ಹಣವನ್ನು ತಂದುವೆಂದೂ ಪ್ರತೀತಿಯು ಬೆಳೆಯಿತು.

ಚಂದ್ರವದನ ಪ್ರದರ್ಶಿತವಾದ ಎರಡು ವಾರಗಳಲ್ಲಿಯೇ ಅನಿಲನಿಗೆ

ಮತ್ತೆರಡು ಚಿತ್ರಗಳ ಬುಕ್ಕಿಂಗ್ ಸಿಕ್ಕಿತು. ಮೂರು ತಿಂಗಳುಗಳಲ್ಲಿ ಏಳು ಚಿತ್ರಗಳಿಗೆ ಕಂಟ್ರಾಕ್ಟ್ ಆಗಿ ದಿನವೆಲ್ಲವೂ ಕೆಲಸ ಮಾಡುತ್ತಿರಬೇಕಾಗಿ ಬಂದಿತು.

ಮನೆ ಬಿಟ್ಟು ಹೋದರೆ ಪುನಃ ಮನೆಗೆ ಯಾವಾಗ ಬರುತ್ತೇನೆಂಬುದು ಅವನಿಗೇ ಗೊತ್ತಿರಲಿಲ್ಲ. ಅನೇಕ ದಿನಗಳು ಮನೆಗೆ ಬರಲು ಸಹ ಸಾಧ್ಯವಾಗುತ್ತಿರಲಿಲ್ಲ. ಹಗಲೂ ರಾತ್ರಿ ಸ್ಟುಡಿಯೋದಿಂದ ಸ್ಟುಡಿಯೋಗೆ ಹೋಗುವುದರಲ್ಲಿಯೇ ಎಂಟು ಹತ್ತು ದಿನಗಳು ಕಳೆದು ಹೋಗುತ್ತಿದ್ದವು. ಅನೇಕ ಬಾರಿ ಮೂರು ನಾಲ್ಕು ದಿನಗಳಾದರೂ ಬಟ್ಟೆ ಬದಲಾಯಿಸಲೂ ಅವಕಾಶವಾಗುತ್ತಿರಲಿಲ್ಲ. ಸ್ನಾನ, ಊಟ, ನಿದ್ದೆಗಳನ್ನು ಬಿಡುವಾದಾಗ ಅಲ್ಲಲ್ಲೇ ಮಾಡಬೇಕಾಗುತ್ತಿದ್ದಿತು.

ಅಕಸ್ಮಾತ್ ಬಿಡುವಾದಾಗ ಅಥವಾ ಷೂಟಿಂಗ್ ಇಲ್ಲದ ದಿನಗಳಲ್ಲಿ ಮನೆಗೆ ಬಂದವನು ಸ್ನಾನಮಾಡಿ, ಬಟ್ಟೆ ಬದಲಾಯಿಸಿ, ಹಾಸಿಗೆಯ ಮೇಲೆ ಬಿದ್ದು ಬಿಡುವನು. ನಿದ್ದೆ ಬರದೇ ಹೊರಳಾಡುವಂತಾಗಲು ಹೆಚ್ಚಾಗಿ ವಿಸ್ಕಿಯನ್ನೋ ಬ್ರಾಂದಿಯನ್ನೋ ಕುಡಿದು ಮೈಮರೆಯುವನು.

ಈ ಜೀವನವು ಚರ್ವಿತಚರ್ವಣದಂತೆ ಕಂಡು ಆಗಾಗ ಬಹಳ ಬೇಜಾರಾಗುತ್ತಿತ್ತು. ಆದರೂ ವಿಪರೀತವಾಗಿ ದುಡ್ಡು ಸೇರುತ್ತಿತ್ತು. ದಕ್ಷಿಣ ಭಾರತ ಪ್ರಮುಖ ಅಭಿನೇತನೆಂದು ಕೀರ್ತಿಯು ಬಂದಿತ್ತು.

ಆದರಿಂದವನು ಆ ಜೀವನಕ್ಕೇ ಅಂಟಿಕೊಂಡಿದ್ದನು. ಅದು ಪ್ರಿಯವಾಗಿಯೇ ಇದ್ದಿತು.

ಕೋಡಂಬಾಕಂನಲ್ಲಿ ಒಂದು ಸಣ್ಣ ಸ್ಟುಡಿಯೋ. ಅನಿಲನು ಅಭಿನಯಿಸುತ್ತಿದ್ದ ಚಿತ್ರದ ಷೂಟಿಂಗ್ ಅಲ್ಲಿದ್ದಿತು. ಅಲ್ಲಿ ಕೆಲಸ ನಡೆಯುತ್ತಿರುವಾಗ ಅರವಿಂದನ ಬಂಗಲೆಯು ಖರೀದಿಗೆ ಇದೆ ಎಂದು ಯಾರೋ ಮಾತನಾಡಿಕೊಂಡುದು ಕಿವಿಗೆ ಬಿದ್ದಿತು. ಕಾರು ಹಾಕಿಕೊಂಡು ಅತ್ತಕಡೆಗೆ ಹೋದನು.

ಅವನು ಕೇಳಿದ್ದ ಮಾತು ನಿಜ. ಕಾಂಪೌಂಡು ಗೇಟಿನ ಬಳಿ "ಫಾರ್ ಸೇಲ್" ಎಂದು ಬೋರ್ಡು ಹಾಕಿತ್ತು.

ಮಾರನೆಯ ದಿನವೇ ಅನಿಲನು ವೆಂಕಪ್ಪಯ್ಯನವರನ್ನು ಕಂಡು ಅದ

ವಿಂದನ ಮನೆಯು ಖರೀದಿಗೆ ಬಂದಿದೆ ಎಂದೂ, ಮಾತನಾಡಿ ತನಗೆ ಆ ಮನೆಯನ್ನು ಕೊಡಿಸಬೇಕೆಂದೂ ಕೇಳಿದನು.

ಅವರು "ಅದನ್ನು ಕೊಂಡುಕೊಳ್ಳಬೇಕೆಂದು ನಿಶ್ಚಯ ಮಾಡಿಬಿಟ್ಟಿದ್ದೀರಾ ? ಅನಿಲ್‌ಕುಮಾರ್ " ಎಂದರು.

"ಯಾಕೆ ಹೀಗೆ ಕೇಳುತ್ತೀರಿ. ?"

"ಏನೂ ಇಲ್ಲ. ಬೇಕಾದರೆ ಈಗ ನೀವು ಕಿಲ್‌ಪಾಕಿನಲ್ಲಿರುವ ಮನೆಯನ್ನೇ ತೆಗೆದುಕೊಳ್ಳಬಹುದು. ಸಣ್ಣದಾದರೂ ಆ ಬಂಗಲೆಯು ಚೆನ್ನಾಗಿಯೇ ಇದೆ. ಇಲ್ಲದಿದ್ದರೆ ಮತ್ತಾವುದಾದರೂ ಮದರಾಸಿನಲ್ಲಿಯೇ ನೋಡಬಹುದು."

"ಹಾಗಲ್ಲ, ವೆಂಕಪ್ಪಯ್ಯನವರೇ! ವಿಶಾಲವಾದ ಎಸ್ಟೇಟು. ಅದರ ನಡುವೆ ದೊಡ್ಡ ಬಂಗಲೆ. ಅಂತಹ ಸ್ಥಳದಲ್ಲಿರಬೇಕೆಂದು ನನಗೆ ಮೊದಲಿನಿಂದಲೂ ಆಸೆ"

"ಹಾಗಾದರೆ ಇನ್ನಾವುದಾದರೂ ಎಸ್ಟೇಟು ತೆಗೆದುಕೊಂಡು ನೀವೇ ಒಂದು ಮನೆಯನ್ನು ಕಟ್ಟಿಕೊಳ್ಳಬಹುದಲ್ಲ."

"ನೀವು ಆ ಮನೆಯ ವಿಷಯ ಮಾತನಾಡುವುದೇ ಇಲ್ಲವೇಕೆ ?"

"ನಾನು ಮೊದಲೇ ಆ ಮನೆಯ ವಿಷಯವನ್ನು ಕೇಳಿದ್ದೆ. ಬೆಲೆ ಬಹಳ ಹೇಳುತ್ತಾರೆ. ಒಂದೂವರೆ ಲಕ್ಷ ಹೇಳುತ್ತಾರೆ."

"ನೀವು ಸ್ವಲ್ಪ ಚೌಕಾಸೀ ಮಾಡಿ ಕೊಡಿಸಿಕೊಡಿ ಎಂದೇ ನಾನು ಕೇಳುತ್ತಿರುವುದು. ಏನಿಲ್ಲವೆಂದರೂ ಆ ಬಂಗಲೆಗೆ ಐವತ್ತು ಅರವತ್ತು ಸಾವಿರ ರೂಪಾಯಿ ಆಗುತ್ತದೆ. ಅಲ್ಲೊಂದು ಸ್ವಿಮಿಂಗ್ ಪೂಲ್ ಇದೆ. ಅಂತಹದೊಂದು ಮಾಡಬೇಕೆಂದರೆ ಏನಿಲ್ಲವೆಂದರೂ ಹತ್ತು ಸಾವಿರ ರೂಪಾಯಿಯಾದರೂ ಬೇಕು."

"ಏನೋ ಹಾಗೆ ಹೀಗೆ ಮಾಡಿ ಗಿಟ್ಟಿಸುತ್ತೇನೆ, ಎನ್ನಿ. ಕೊಂಡುಕೊಳ್ಳುವಷ್ಟು ಹಣವಿದೆಯೆ ?"

"ಪೂರಾ ಇಲ್ಲ. ಏನೋ ಸ್ವಲ್ಪ ಕೊಡುವುದು. ಮಿಕ್ಕದನ್ನು ಯಾವುದಾದರೂ ಬ್ಯಾಂಕ್‌ನಲ್ಲಿ ನೀವೇ ಏರ್ಪಾಟು ಮಾಡಬೇಕು. ಈ ವರ್ಷ ನನಗೆ

ಒಂಬತ್ತು ಚಿತ್ರಗಳ ಕಂಟ್ರಾಕ್ಟ್ ಇದೆ. ಹಣಕ್ಕೆ ಸ್ವಲ್ಪವೂ ಕಷ್ಟವಾಗು ದಿಲ್ಲ."

ವೆಂಕಪ್ಪಯ್ಯನವರು ಏನೋ ಚಿಂತಿಸ ತೊಡಗಿದರು.

"ಏನು, ಯೋಚಿಸುತ್ತಿದ್ದೀರಿ! ನಿಮ್ಮನ್ನು ನಾನು ಮರೆಯುವುದಿಲ್ಲ."

"ಅದಲ್ಲ–ನನ್ನ ಯೋಚನೆ."

"ಹಾಗಾದರೇನು ?"

ಅವರು ಹೇಳಿಯೇ ಬಿಡಬೇಕೆಂದು ಕೃತ ನಿಶ್ಚಯ ಮಾಡಿಕೊಂಡು "ಹೇಳು ಎಂದರೆ ಹೇಳಿಬಿಡುತ್ತೇನೆ" ಎಂದರು.

"ಹೇಳಿ. ಅದಕ್ಕೇಕೆ ಸಂಕೋಚ."

"ನೋಡಿ, ಅನಿಲ್. ಇರುವ ವಿಷಯ ಹೇಳಿಬಿಡುತ್ತೇನೆ. ಆ ಬಂಗ ಲೆಗೆ ಐವತ್ತು ಅರವತ್ತು ಸಾವಿರವೆಂದು ಹೇಳುತ್ತೀರಿ. ಇನ್ನೂ ಹೆಚ್ಚು ಬಾಳುತ್ತದೆ. ಈ ಕಾಲದಲ್ಲಿ ಲಕ್ಷ ರೂಪಾಯಿ ಖರ್ಚು ಮಾಡಿದರೂ ಅಂತಹ ಬಂಗಲೆಯಾಗುವುದಿಲ್ಲ. ಅದೆಲ್ಲಾ ಸರಿ. ಆದರೆ ಆ ಮನೆಯಾ ರಿಗೂ ಆಗಿ ಬರುವುದಿಲ್ಲ. ಅದರಿಂದಲೇ ಅದಕ್ಕೆ ಯಾವ ಗಿರಾಕಿಯೂ ಬಂದಿಲ್ಲ."

"ಆಗಿ ಬರುವುದಿಲ್ಲ, ಎಂದರೇನು? ಸ್ವಲ್ಪ ವಿಷದವಾಗಿ ಹೇಳಿರಿ"

"ಅದು ಮೊದಲು ಯಾರೋ ಫರಂಗಿಯುವನದು. ಆಗ ಬಂಗಲೆ ಇರ ಲಿಲ್ಲ. ಸಣ್ಣ ಮನೆ ಇತ್ತು. ಅವನು ಬೇಜಾರಾದಾಗ ಬಂದು ಇರುತ್ತಿದ್ದ. ಅದರ ಮೇಲೆ ನಮ್ಮ ಆಂಧ್ರ ದೇಶದ ಜಮೀನ್ದಾರರೊಬ್ಬರ ಕಣ್ಣು ಬಿತ್ತು. ಯುವಕರಾಗಿದ್ದ ಅವರು ಮದರಾಸಿಗೆ ದೂರವಾಗಿ ತಮ್ಮ ಓಡಿಯಾಟಕ್ಕೆ ಇರಲೆಂದು ಈ ಎಸ್ಟೇಟು ತೆಗೆದುಕೊಂಡು, ಬಂಗಲೆ, ಅದರ ಬಳಿ ಸ್ವಿಮಿಂಗ್ ಪೂಲ್ ಕಟ್ಟಿಸಿದರು. ಈ ಮನೆ ಕಟ್ಟಿದ ಮೇಲೆ ಅವರು ಪಾಪರಾದರು. ಅನಂತರ ಮದರಾಸಿನ ಮೂರು ನಾಲ್ಕು ಮಂದಿ ಶ್ರೀಮಂತರು ಅದನ್ನು ಕೊಂಡುಕೊಂಡು ಬಿಸೀ ಮಡಿಕೆಯನ್ನು ಕೈ ಬಿಟ್ಟಂತೆ ಎಷ್ಟಕ್ಕೆ ಗಿರಾಕಿ ಬಂದರೆ ಅಷ್ಟಕ್ಕೆ ಕೈ ತೊಳೆದುಕೊಂಡರು. ಕಡೆಗೀಗ ಅರವಿಂದನ ಕೈಗೆ ಬಂದಿದೆ. ಅಲ್ಲಿರಲಾರಂಭಿಸಿದ ನಂತರ ಅವನೂ ಕೆಳಗಿಳಿಯುತ್ತ ಅದನ್ನು

ಮಾರುವ ಸ್ಥಿತಿಗೆ ಬಂದ. ನೀವು ಇನ್ನೂ ಮುಂದೆ ಬರಬೇಕಾದವರು. ನೀವ ದನ್ನು ತೆಗೆದುಕೊಳ್ಳುವುದು ನನಗೆ ಸುತರಾಂ ಇಷ್ಟವಿಲ್ಲ"

ಅನಿಲಕುಮಾರನು ನಗುತ್ತಾ

"ಅಷ್ಟೇ ಆದರೆ ವಿಚಾರಿಸಿ ಅದನ್ನು ಗೊತ್ತುಮಾಡಿಬಿಡಿ. ಅದೆಲ್ಲಾ ಅವರವರ ಗ್ರಹಚಾರ. ಮನೆಗೂ ಅದಕ್ಕೂ ಸಂಬಂಧವೇನು?"

ವೆಂಕಪ್ಪಯ್ಯನವರಿಗೆ ಏನು ಹೇಳಬೇಕೋ ತೋರಲಿಲ್ಲ.

"ನೀವು ಗೊತ್ತುಮಾಡಿಬಿಡಿ, ಸ್ವಾಮಿ. ನಾನು ನಿಶ್ಚಯ ಮಾಡಿ ಬಿಟ್ಟಿದ್ದೇನೆ"

"ಹಾಗಾದರೆ ಆಗಲಿ, ಹೇಳಬೇಕಾದ್ದನ್ನು ಹೇಳಿಬಿಟ್ಟಿದ್ದೇನೆ"

ಎಂದು ಹೇಳಿ ವೆಂಕಪ್ಪಯ್ಯ ಹೊರಟರು.

ಅನಿಲ ಅಷ್ಟಕ್ಕೆ ಬಿಡಲಿಲ್ಲ. ದಿನಕ್ಕೆ ನಾಲ್ಕು ಸಲ ಟೆಲಿಫೋನ್ ಮಾಡು ತ್ತಿದ್ದ. ಪುರಸತ್ತಾದಾಗ ಅವರ ಕಚೇರಿಗೆ ಹೋಗಿ ಕುಳಿತು "ಏನಾಯಿತು?" ಎಂದು ಜಾಂಡಾ ಹಾಕುತ್ತಿದ್ದ.

ಆದರೆ ಆ ಮನೆಯನ್ನು ಕೊಡಿಸಲು ವೆಂಕಪ್ಪನಯ್ಯನವರಿಗೆ ವಾಸ್ತವ ವಾಗಿ ಇಷ್ಟವಿರಲಿಲ್ಲ. ಅನಿಲ ಅವರೇ ಕರೆದು ತಂದ ಸ್ಟಾರ್. ಸಮಯ ಎಂದರೆ, ಪತ್ರಿಕೆಗೆ ಆಪತ್ತು ಬಂದಿದೆ–ಎಂದರೆ, ಧಾರಾಳವಾಗಿ ಏನಾದರೂ ಕೊಡುತ್ತಿದ್ದ. ಅಂತಹವನಿಗೆ ಕಷ್ಟ ಬರುವುದು ಅವರಿಗೆ ಇಷ್ಟವಿರಲಿಲ್ಲ- ಯಾವುಯಾವುದೋ ನೆವ ಹೇಳಿ, ಮುಂದೆ ತಳ್ಳುತ್ತಾ ಬಂದರು. ಆದರೆ ಅನಿಲನು ಬಿಡದೇ ನಿಷ್ಠುರ ಮಾಡತೊಡಗಿದ.

ಕಡೆಗೆ ವಿಧಿಯಿಲ್ಲದೇ ಹೋಗಿ ಮಾತನಾಡಿಕೊಂಡು ಬಂದರು. ಐವತ್ತು ಸಾವಿರ ರೂಪಾಯಿಗೆ ಅದನ್ನು ಗೊತ್ತುಮಾಡಿದರು.

ಮುಂದಿನ ಕೆಲಸಗಳು ಕಷ್ಟವಾಗಲಿಲ್ಲ. ಅನಿಲ ಹಣವಿಡುತ್ತಿದ್ದ ಬ್ಯಾಂಕ್‌ನ ಮೇನೇಜರು ಮಾಧವ ಪೈಗಳು ವೆಂಕಪ್ಪಯ್ಯನವರಿಗೆ ಬಹಳ ಸ್ನೇಹಿತರು. ಇತ್ತೀಚೆಗೆ ಅನಿಲನು ವಿಪರೀತವಾಗಿ ಸಂಪಾದಿಸುತ್ತಿರುವುದೂ, ಅವನಿಗೆ ಸಿಕ್ಕಿರುವ ಬುಕ್ಕಿಂಗ್‌ಗಳೂ ಅವರಿಗೆ ಗೊತ್ತಿತ್ತು. ಅದೂ ಅಲ್ಲದೇ ಒಂದೇ ಚಕ್ ಕೊಟ್ಟು ಆ ಮನೆಯನ್ನು ಕೊಂಡುಕೊಳ್ಳುವುದಕ್ಕಿಂತಲೂ ಹೆಚ್ಚು ಹಣವು ಅವರ ಬ್ಯಾಂಕಿನಲ್ಲಿ ಅನಿಲನ ಹೆಸರಿನಲ್ಲಿಯೇ ಇದ್ದಿತು.

ಆದರಿಂದವರು ಆ ಬಂಗಲೆಯ ಮೇಲೆ ಸುಲಭವಾಗಿ ಅಡ್ವಾನ್ಸ್ ಮಾಡಲು ಒಪ್ಪಿಕೊಂಡರು.

ತೆಗೆದುಕೊಳ್ಳುವಾಗ ಪೂರಾ ಹಣ ಕೊಟ್ಟು ತೆಗೆದುಕೊಳ್ಳಬೇಕೆಂದೂ, ಅದರ ಮೇಲೆ ಸಾಲ ಉಳಿಸಬಾರದೆಂದೂ, ಹಾಗಾದರೆ ಮನೆ ಉಳಿಯುವುದಿಲ್ಲವೆಂದೂ ವೆಂಕಪ್ಪಯ್ಯನ ಅಭಿಪ್ರಾಯ.

ಅದ್ದರಿಂದವರು ಅನಿಲನನ್ನು ನೋಡಿ ತಮ್ಮ ಮನಸ್ಸಿನ ಅಭಿಪ್ರಾಯವನ್ನು ತಿಳಿಸಿದರು.

ಅವರು ಹೇಳುವುದನ್ನು ಸಾವಧಾನವಾಗಿ ಕೇಳಿದ, ಅವನು

"ಇರುವ ಹಣವನ್ನು ಪೂರಾ ಅದರ ಮೇಲೆ ಹಾಕಿ ಮಾಡುವುದೇನು, ವೆಂಕಪ್ಪಯ್ಯನವರೇ. ಬ್ಯಾಂಕಿನವರಿಂದ ಅರ್ಧ ತೆಗೆದುಕೊಳ್ಳೋಣ"

ವೆಂಕಪ್ಪಯ್ಯನವರು ಹಾಗೆಯೇ ಹೋಗಿ ಮಾತನಾಡಿದರು. ಅನಿಲನು ಅರ್ಧ ಹಣವನ್ನು ಕೊಡುವುದೆಂದೂ, ಅದೇ ಮನೆಯನ್ನು ದೀಡು ಮಾಡಿಕೊಂಡು ಬ್ಯಾಂಕಿನವರು ಮತ್ತರ್ಧ ಹಣವನ್ನು ಕೊಡುವುದಾಗಿಯೂ ಗೊತ್ತಾಯಿತು

ತಮ್ಮ ಸ್ನೇಹಿತರಾದ ವಕೀಲ ಶಿವರಾಮ ಅಯ್ಯರ್‌ರಿಂದ ವೆಂಕಪ್ಪಯ್ಯ ಯಥೋಚಿತವಾಗಿ ಕಾಗದ ಪತ್ರಗಳನ್ನು ಮಾಡಿಸಿದರು.

ಮನೆಯು ಅನಿಲನದಾಯಿತು.

ಮನೆಯನ್ನು ಕೊಂಡು ಕೊಂಡನಂತರ ಮಾಡಬೇಕಾದ ಕೆಲಸಗಳು ಬಹಳವಿದ್ದುವು.

ಮುಂದುಗಡೆ ಬೀದಿಯ ಮಗ್ಗುಲಲ್ಲಿದ್ದ ಕಾಂಪೌಂಡು ಗೋಡೆಯು ಅರ್ಧ ಮುರಿದು ಬಿದ್ದಿತ್ತು. ಅದನ್ನು ಕೆಡವಿ ಹೊಸದಾಗಿ ಕಟ್ಟಲು ಏರ್ಪಾಟು ಮಾಡಿದನು. ಗೇಟು ಹೊಸದನ್ನೇ ಹಾಕಬೇಕಾಯಿತು. ಅಮೃತಶಿಲೆಯಲ್ಲಿ ಕೆತ್ತಿದ್ದ ಅನಂದ ವಿಲಾಸ ಎಂಬುದನ್ನು ತೆಗೆದುಹಾಕಿ, ಅನಿಲ ನಿವಾಸವೆಂದು ಕೆತ್ತಿ, ಬಂಗಾರದ ಮುಲಾಮು ಕೊಡುವುದಕ್ಕೆ ಆರ್ಡರ್ ಮಾಡಿದ.

ಮನೆಯ ಸುತ್ತಲೂ ಇದ್ದ ತೋಟವನ್ನು ಗಮನಿಸಿ ಬಹಳ ದಿನಗಳಾಗಿದ್ದವು. ಬಂಗಲೆಗೆ ಬಣ್ಣ ಸುಣ್ಣಗಳಿರಲಿಲ್ಲ. ಅದನ್ನು ಗಮನಿಸಬೇಕಾಗಿ

ಬಂದಿತು. ಆ ಕೆಲಸಗಳಿಗೆಲ್ಲಾ ತೋಟದ ಕೆಲಸಗಾರರನ್ನೂ, ಗಾರೆಯುವ ರನ್ನೂ ನೇಮಿಸಿದ.

ಮದರಾಸಿನಲ್ಲಿ ಒಳ್ಳೆಯ ಫ್ಲೋರಿಸ್ಟ್ಸ್ ಇಲ್ಲದ್ದರಿಂದ ಸುಪ್ರಸಿದ್ಧ ರಾದ ಓಬಲಪ್ಪ ಅಂಡ್ ಸನ್ಸ್ ರವರನ್ನು ಬೆಂಗಳೂರಿನಿಂದ ಕರಿಸಿ, ಅವರಿಗೆ ತೋಟದ ಕೆಲಸವನ್ನು ಒಪ್ಪಿಸಿದ.

ಮೊದಲು ಅಲ್ಲಿದ್ದ ದೊಡ್ಡ ರಸ್ತೆಗಳನ್ನೂ, ಪುಟ್ಟ ಕಾಲುದಾರಿಗಳನ್ನೂ ದುರಸ್ತು ಮಾಡಲಾಯಿತು. ವಿಪರೀತವಾಗಿ ಬೆಳೆದಿದ್ದ ಹುಲ್ಲನ್ನೂ, ಕಸ ಕಡ್ಡಿ, ಗಿಡಗಳನ್ನೂ ಕತ್ತರಿಸಲಾಯಿತು. ದೊಡ್ಡ ದೊಡ್ಡ ಮರಗಳ ಒಣಗಿದ ರೆಂಬೆಕೊಂಬೆಗಳನ್ನು ಕತ್ತರಿಸಿ, ಕೆಳಗೆ ಹುಲ್ಲುಗಾವಲು ಮಾಡಿ, ಅದರ ಕೆಳಗೆ ಸಿಮೆಂಟ್ ಮತ್ತು ಕಲ್ಲು ಬೆಂಚುಗಳನ್ನು ಹಾಕಿದರು. ಕೆಲವು ವೃಕ್ಷಗಳ ಕೆಳಗೆ ಮಣ್ಣು ಪೇರಿಸಿ, ಅಲ್ಲಲ್ಲಿ ಗುಂಡು ಕಲ್ಲುಗಳನ್ನು ಇಟ್ಟು, ಕಲ್ಲು ಸಂದಿಯಲ್ಲಿ ಅಗಲವಾದ ಎಲೆ ಬಿಡುವ ಸಣ್ಣ ಗಿಡಗಳನ್ನು ನೆಟ್ಟರು. ಯಥೋಚಿತವಾದ ಕಡೆಗಳಲ್ಲೆಲ್ಲಾ ಕುಂಡಗಳನ್ನು ತೂಗುಬಿಟ್ಟು, ಇಳಿ ಬೀಳುವ ಲತೆಗಳನ್ನು ಅವುಗಳಲ್ಲಿ ಹಾಕಲಾಯಿತು.

ಮೊದಲೇ ಹಾಕಿದ್ದ ಫಲ ಪುಷ್ಪಗಳ ಗಿಡಗಳನ್ನೂ ಅಲಂಕಾರಕ್ಕಾಗಿ ನೆಟ್ಟಿದ್ದ ಗಿಡಗಳನ್ನೂ ಅಚ್ಚುಕಟ್ಟಾಗಿ ಕತ್ತರಿಸಿ, ಗೊಬ್ಬರ ಹಾಕಿ, ಪಾತಿ ಗಳನ್ನು ಮಾಡಿದರು.

ಸ್ವಿಮಿಂಗ್ ಪೂಲ್ ದುರಸ್ತು ಮಾಡುವುದು ದೊಡ್ಡ ಕೆಲಸವಾಯಿತು. ಬಿದ್ದಿದ್ದ ಕಲ್ಲು ಮಣ್ಣು ತೆಗೆದು, ತೊಳೆದು, ಜಖಂ ಆದ ಕಡೆ ಸಿಮೆಂಟ್ ನಿಂದ ರಿಪೇರಿ ಮಾಡಿದರು. ನೀರು ತುಂಬುವ ಮತ್ತು ತೆಗೆಯುವ ಪಂಪು ಗಳನ್ನೂ, ಅದರ ವಿದ್ಯುತ್ ಸಾಧನಗಳನ್ನೂ ಸರಿಪಡಿಸಿದರು.

ಅದಕ್ಕೆ ನೀರು ಬರುವಂತಹ ದೊಡ್ಡ ಕೊಳವು ಮನೆಯ ಹಿಂದುಗಡೆ ಇತ್ತು. ಅದೊಂದು ಕೆರೆಯಂತಿತ್ತು. ಅಲ್ಲಿ ಕೆಸರು ತೆಗೆದು, ಜೊಂಡು ಕಿತ್ತು ಹಾಕಿ, ಅದರ ನೀರನ್ನು ಶುದ್ಧಿಪಡಿಸಲಾಯಿತು. ಕೊಳದ ಸುತ್ತಲೂ ಸಿಮೆಂಟಿನ ದಿಂಡು ಕಟ್ಟಿ, ಅದರ ಮೇಲೆ ಕಲ್ಲು ಜೋಡಿಸಿ, ಸಂದಿಗಳಲ್ಲಿ ಸಣ್ಣ ಪುಟ್ಟ ಗಿಡಗಳನ್ನು ಬೆಳೆಸಿದ್ದರು. ಅದೆಲ್ಲವನ್ನೂ ರಿಪೇರಿ ಮಾಡಲಾಯಿತು,

ಅದರ ಮುಗ್ಗುಲಲ್ಲಿದ್ದ ರಸ್ತೆಯನ್ನೂ, ಕೆಳಗಿಳಿಯುವುದಕ್ಕಿದ್ದ ಪಾವಟಿಗೆಗಳನ್ನೂ ಸರಿಪಡಿಸಿದರು.

ಮನೆಯ ಬಳಿ ಇದ್ದ ಟೆನ್ನಿಸ್ ಕೋರ್ಟಿನಲ್ಲಿ ಸಣ್ಣಪುಟ್ಟ ಗಿಡಗಳು ಬೆಳೆದು, ಒಣಗಿ, ಕಡ್ಡಿಯಾಗಿ ನಿಂತಿದ್ದವು. ಅವುಗಳನ್ನು ಕಿತ್ತು ಸರಿಪಡಿಸಿ ಬೇರೆಯ ವೈರ್ ನೆಟ್ಟುಗಳನ್ನು ಹಾಕಿ, ಅದರ ಬಳಿ ಹೊಸ ಬಳ್ಳಿಗಳನ್ನು ನೆಡಲಾಯಿತು.

ಅಲ್ಲಲ್ಲಿ ಏರ್ಪಡಿಸಿದ್ದ ವಿವಿಧಾಕಾರದ ಸಣ್ಣ ಸಿಮೆಂಟ್ ತೊಟ್ಟಿಗಳನ್ನೂ ಅವುಗಳ ನಡುವೆ ನೀರು ಹಾಕುವ ಫೌಂಟೇನುಗಳನ್ನೂ ರಿಪೇರಿ ಮಾಡಿ, ಹೊಸದಾಗಿ ಬಣ್ಣದ ಮೀನುಗಳನ್ನು ತಂದು ಬಿಟ್ಟರು.

ಸಾವಿರಾರು ಕುಂಡಗಳನ್ನು ತಂದು, ಅವುಗಳಲ್ಲೆಲ್ಲಾ ಸಸಿಗಳನ್ನಿಟ್ಟು, ಮನೆಯನ್ನೂ ಉದ್ಯಾನವನವನ್ನೂ ಶೃಂಗರಿಸಲಾಯಿತು.

ಹೀಗೆಯೇ ಬಂಗಲೆಯ ರಿಪೇರಿಯ ಕೆಲಸವೂ ನಡೆಯಿತು. ಮನೆಯಲ್ಲಿ ಗಾರೆ ಸಿಮೆಂಟ್‌ಗಳ ಕೆಲಸ ಮಾಡಿದರು. ಒಡೆದ ಬಾಗಿಲು, ಕಿಟಕಿಗಳನ್ನು ಬೇರೆಯಾಗಿ ಹಾಕಿದರು. ಸುಣ್ಣ ಬಣ್ಣಗಳನ್ನು ಮಾಡಿದರು. ಹಳೆಯ ಎಲೆಕ್ಟ್ರಿಕ್ ಫಿಟಿಂಗುಗಳನ್ನು ಕಿತ್ತು ಹಾಕಿ, ಅತ್ಯಾಧುನಿಕವಾದ ದೀಪಗಳನ್ನೂ ಫ್ಯಾನುಗಳನ್ನೂ ಹಾಕಿದರು.

ಮನೆಗೆ ಹೊಸ ರತ್ನಕಂಬಳಿಗೂ ಫರ್ನೀಚರುಗಳೂ ಬಂದುವು. ರೇಬೆನೆಟ್ ಕಂಪನಿಯವರೇ ಅವುಗಳನ್ನು ತಂದು ಜೋಡಿಸಿದರು.

ಎಷ್ಟೇ ಭರದಿಂದ ಕೆಲಸ ಕಾರ್ಯಗಳು ನಡೆದರೂ ಅರವಿಂದ ವಿಲಾಸವು ಅನಿಲ ನಿವಾಸವಾಗಲು ಒಂದೂವರೆ ತಿಂಗಳು ಹಿಡಿಯಿತು.

# ೧೯

ಅನಿಲನು ಕಿಲ್ ಪಾಕ್ ಮನೆಯನ್ನು ಬಿಟ್ಟು ಹೊಸ ಬಂಗಲೆಗೆ ಹೋಗಬೇಕೆಂದು ಯೋಚಿಸಿದನು.

ಮನೆಯನ್ನು ಕೊಂಡಾಗಲೇ ಅದನ್ನು ಅರಸುರತ್ನಿಗೆ ತೋರಿಸಬೇಕೆಂದು ಅವನಿಗೆ ಮನಸ್ಸಾಗಿದ್ದಿತು. ಅರವಿಂದನು ಬಿಟ್ಟು ಹೋದ ಮನೆಗೆ ಹಾಗೆಯೇ ಅವಳನ್ನು ಕರೆದುಕೊಂಡು ಹೋದರೆ "ರಿಪೇರಿ ಮಾಡುವುದಕ್ಕೆ ಸಹ ಇಲ್ಲದೇ ಇದನ್ನು ಯಾಕೆ ತೆಗೆದುಕೊಂಡೆ?" ಎಂದು ಆಕ್ಷೇಪಿಸುತ್ತಾಳೆಂದು ಸಂಕೋಚ ಪಡುತ್ತಾ ರಿಪೇರಿಯನ್ನು ಆರಂಭಿಸಿದನು.

ಮೊದಲು ಸಾಧಾರಣವಾಗಿ ರಿಪೇರಿಯಾಗಲಿ ಎಂದಿದ್ದವನು, ಅನಂತರ ಅರಸುರತ್ನಿಯ ಮನಸ್ಸಿಗೊಪ್ಪುವಂತೆ ಮಾಡಿಸಲು ತೊಡಗಿದನು. ಅದು ವಿಪರೀತಕ್ಕೆ ಇಟ್ಟುಕೊಂಡಿತು.

ರಿಪೇರಿಗಳು ಮುಗಿದು ಆ ಬಂಗಲೆಗೆ ಹೋಗಬೇಕೆಂದಿದ್ದಾಗ ವಿಷಯವನ್ನು ತಿಳಿಸಿ, ಕೂಡಲೇ ಹೊರಟು ಬರಬೇಕೆಂದು ಅರಸುರತ್ನಿಗೆ ತಂತಿಯನ್ನು ಕೊಟ್ಟನು. ಅವಳು ಬರುವುದಾಗಿ ಒಪ್ಪಿ ಉತ್ತರ ಕೊಟ್ಟಳು.

ಆದರೆ ಅವಳು ಬರುವುದಕ್ಕೆ ಇನ್ನೂ ವಾರವಿದ್ದಿತು.

ಈ ನಡುವೆ ಮತ್ತೊಂದು ಆಲೋಚನೆಯು ಬಂದಿತು. ಸ್ನೇಹಿತರ

ನ್ನೆಲ್ಲಾ ಕರೆದು ಹೊಸ ಜಾಗದಲ್ಲಿ ಒಂದು ಊಟ ಕೊಡಬೇಕೆಂದು ತೋರಿತು. ವೆಂಕಪ್ಪಯ್ಯನವರನ್ನು ಕರೆದು ಮಾತನಾಡಿದನು.

ಅವರು "ಅದಕ್ಕೇನು, ಆಗಬಹುದು. ಅದರಿಂದ ನಿಮಗೆ ಒಳ್ಳೆಯ ಪಬ್ಲಿಸಿಟಿಯೂ ಸಿಕ್ಕುತ್ತದೆ" ಎಂದು ಒಪ್ಪಿಕೊಂಡರು.

ಉತ್ತಮವಾದ ಆಹ್ವಾನ ಪತ್ರಿಕೆಗಳನ್ನು ಮಾಡಿಸಬೇಕೆಂದೂ, ಯಾರು ಯಾರನ್ನು ಕರೆಯಬೇಕೋ ಪಟ್ಟಿಮಾಡಬೇಕೆಂದೂ ಹೇಳಿದನು.

ಯಾವ ದಿನ, ಎಷ್ಟು ಹೊತ್ತಿಗೆ, ಎಲ್ಲಿ ಊಟವೆಂದು ಮಾತನಾಡಿದರು. ಏನು ಅಡಿಗೆ, ಅಡಿಗೆಗೆ ಯಾರನ್ನು ಕರೆಯುವುದು, ಬಡಿಸಲು ಏನು ಏರ್ಪಾಟು ಮುಂತಾದುವುಗಳನ್ನೆಲ್ಲಾ ಮಾತನಾಡಿ ನಿರ್ಧರಿಸಿದರು.

ತಾವು ಹೊರಡುವ ಮೊದಲು ವೆಂಕಪ್ಪಯ್ಯನವರು–

"ನೀವಲ್ಲಿಗೆ ಯಾವತ್ತು ಹೋಗಬೇಕೆಂದು ಕೊಂಡಿದ್ದೀರಿ ?"

"ನಾಳೆಯೋ ನಾಡಿದ್ದೋ ಹೋಗುತ್ತೇನೆ. ಅಲ್ಲಿಯೇ ಇದ್ದರೆ ಏರ್ಪಾಟುಗಳಿಗೂ ಅನುಕೂಲವಲ್ಲವೇ ?"

"ಹೌದು. ಆದರೆ ಪುಣ್ಯಾವರ್ಚನೆ, ಗ್ರಹಶಾಂತಿಗಳನ್ನು ಮಾಡದೇನೇ ಹೋಗುವುದೇ ?"

"ಅದನ್ನು ಬೇರೇ ಇಟ್ಟುದ್ದೀರೇನು ?"

ನಗುತ್ತಾ ಅನಿಲನು ವಿಚಾರಿಸಿದನು.

"ಅದಿಲ್ಲದಿದ್ದರೆ ಆಗುತ್ತದೆಯೆ ? ಒಂದಿಷ್ಟು ಶಾಂತಿಗೀಂತಿ ಮಾಡಿ, ನಾಲ್ಕು ಜನಕ್ಕೆ ಅನ್ನ ಹಾಕಬೇಕು. ಅನಂತರ ಹೋಗುವಿರಂತೆ. ನನ್ನ ಮಾತು ಕೇಳಿ."

"ಅದೇನೋ ನೀವು ಮಾಡಿಸಿಕೊಳ್ಳಿ. ನನಗೆ ತಂಟೆ ಕೊಡಬೇಡಿ."

ಎಂದವನು ಖರ್ಚಿಗೆಲ್ಲಾ ಚೆಕ್ ಬರೆದು ಕೊಟ್ಟನು.

ಹೊಸ ಬಂಗಲೆಯಲ್ಲಿ ಹೋಗಿರುವ ಅನಿಲನ ಅವಸರವನ್ನು ಗಮನಿಸಿದ ವೆಂಕಪ್ಪಯ್ಯ ಎರಡು ಮೂರು ದಿನಗಳೊಳಗೆ ಒಳ್ಳೆಯ ದಿನವನ್ನು ನೋಡಿ, ಪುಣ್ಯಾ ಕಾರ್ಯಕ್ಕೆ ಏರ್ಪಾಟು ಮಾಡಿದರು.

ಆ ದಿನ ಪ್ರಾತಃಕಾಲವೇ ವೈದಿಕ ಬ್ರಾಹ್ಮಣರು ಬಂದು ಮನೆಗೆಲ್ಲಾ

ಪುಣ್ಯಾವರ್ಚನೆಯನ್ನು ಮಾಡಿದರು. ಅನಿಲನಿಗೆ ಇಷ್ಟವಿಲ್ಲದಿದ್ದರೂ ವೆಂಕಪ್ಪಯ್ಯ ಅವನನ್ನು ಹಿಡಿದು ಕರೆತಂದರು.

ಕಡೆಯಲ್ಲಿ ಸಣ್ಣದೊಂದು ಆಚಾತುರ್ಯವು ನಡೆಯಿತು.

ಪೂರ್ಣಾಹುತಿಯನ್ನು ಕೊಡುವಾಗ ಹೋಮಕುಂಡದಲ್ಲಿ ಜ್ವಲಿಸುತ್ತಿದ್ದ ಅಗ್ನಿಯು ಆರಿಹೋಯಿತು. ವಾಧ್ಯಾಯರು ಬೆಂಕಿಯನ್ನು ಸರಿಯಾಗಿ ನೋಡಿಕೊಳ್ಳಲಿಲ್ಲವೆಂದು ಜೊತೆಯಲ್ಲಿ ಬಂದಿದ್ದ ಬಡ ವೈದಿಕನನ್ನು ಬೈದು, ಬೆಂಕಿಯನ್ನು ಹೊತ್ತಿಸಿ, ಕಾರ್ಯವನ್ನು ನೆರವೇರಿಸಿದರು.

ಆದರಿಂದ ವೆಂಕಪ್ಪಯ್ಯನವರು ಖಿನ್ನರಾದರು. ವಾಧ್ಯಾಯರು ಅದಕ್ಕೆ ಯೋಚಿಸ ಬೇಕಾಗಿಲ್ಲವೆಂದೂ, ಅದರಿಂದ ಶಾಂತಿಃಕಾರ್ಯದಲ್ಲಿ ಯಾವ ಕುಂದೂ ಬರಲಿಲ್ಲವೆಂದೂ ಹೇಳಿದರು. ಆದರೆ ಆ ಮಾತುಗಳಿಂದ ವೆಂಕಪ್ಪಯ್ಯನವರಿಗೆ ಸಮಾಧಾನವಾಗಲಿಲ್ಲ.

ಅನಿಲನಂತೂ ಆ ವಿಷಯವನ್ನು ಮನಸ್ಸಿಗೆ ತಂದುಕೊಳ್ಳಲಿಲ್ಲ.

ಮುಂದಿನ ಕೆಲಸಗಳು ಸಾಂಗೋಪಾಂಗವಾಗಿ ನೆರವೇರಿದುವು. ಬ್ರಾಹ್ಮಣ ಸುವಾಸಿನಿಯರಿಗೆ ತೃಪ್ತಿಯಾಗುವಂತೆ ಭೋಜನವಾಯಿತು. ಪಂಚೆಗಳನ್ನೂ ಸೀರೆಗಳನ್ನೂ ದಾನಮಾಡಲಾಯಿತು. ಧಾರಾಳವಾಗಿ ದಕ್ಷಿಣೆ ಇಟ್ಟು ತಾಂಬೂಲವನ್ನು ಕೊಟ್ಟರು.

ವಾಧ್ಯಾಯರು ತೃಪ್ತರಾಗಿ ಗೃಹ ಸ್ವಾಮಿಗೆ ಇತೋಪ್ಯತಿಶಯವಾದ ಅಭಿವೃದ್ಧಿಯಾಗಲೆಂದೂ, ಗೃಹದಲ್ಲಿ ನೂರಾರು ಮಂಗಳ ಕಾರ್ಯಗಳು ನಡೆಯಲೆಂದೂ ವೇದೋಕ್ತವಾಗಿ ಆಶೀರ್ವಾದ ಮಾಡಿದರು.

ಇದಿಷ್ಟೂ ಆದ ನಂತರ ಅನಿಲನು ಕೋಡಂಬಾಕಂನಲ್ಲಿ ಅನಿಲ ನಿವಾಸದಲ್ಲಿ ಬಂದಿರಲು ಆರಂಭ ಮಾಡಿದನು. ಸಂತರ್ಪಣೆಯ ಅಡಿಗೆಗೆ ಬಂದಿದ್ದ ರಾಮ ಐತಾಳನೇ ಅನಿಲನ ಊಟ ಉಪಚಾರಗಳಿಗೆ ನಿಂತನು.

ಮುಂದೆ ಕ್ಷಿಪ್ರದಲ್ಲಿಯೇ ನಡೆಯಬೇಕಾಗಿದ್ದ ಔತಣದ ಏರ್ಪಾಟುಗಳ ಸಡಗರದಲ್ಲಿ ಮನೆಯು ಗಲಿಗಲಿಯಾಗಿಯೇ ಇದ್ದಿತು.

ಈ ನಡುವೆ ಅನಿಲನು ಕನಕಂಳನ್ನು ಕಂಡು ವಿಷಯವೆಲ್ಲವನ್ನೂ ಹೇಳಿದನು. ತಾರೆ ತಾರೆಯರನ್ನು ಆಹ್ವಾನಿಸುವ ಕೆಲಸವನ್ನು ಅವಳು ಒಪ್ಪಿಕೊಳ್ಳಬೇಕೆಂದು ಕೇಳಿದನು.

ಅವಳು ಸಂತೋಷದಿಂದ ಒಪ್ಪಿಕೊಂಡುದೇ ಅಲ್ಲದೇ ಆ ದಿನದಿಂದ ಅನಿಲ ನಿವಾಸದಲ್ಲಿಯೇ ಬಿಡಾರ ಮಾಡಿದಳು.

ಒಂದು ದಿನ ಸಾಯಂಕಾಲ ಕನಕಂ ತನ್ನ ಕೆಲಸ ಕಾರ್ಯಗಳನ್ನು ತೀರಿಸಿಕೊಂಡು ಕೊಡಂಬಾಕಂಗೆ ಹೋಗುವುದಕ್ಕಾಗಿ ಅನಿಲನು ಕೆಲಸಮಾಡುತ್ತಿದ್ದ ಸ್ಟುಡಿಯೋಗೆ ಬಂದಳು. ಅವನು ಅವಳಿಗಾಗಿ ಕಾಯುತ್ತಿದ್ದನು.

ಈ ಹೊಸ ಮನೆಗೆ ಬಂದನಂತರ ಅನಿಲನು ಹೊರಗಡೆ ಬಾರುಗಳಿಗೆ ಹೋಗುತ್ತಿರಲಿಲ್ಲ. ಅಲ್ಲಿಯೇ ಕುಳಿತು ಕುಡಿಯುತ್ತಿದ್ದನು. ಆದರಿಂದ ಇಬ್ಬರೂ ಕಾರಿನಲ್ಲಿ ಹೊರಟರು.

"ನೀವು ಆ ಬಂಗಲೆಯನ್ನು ತೆಗೆದುಕೊಂಡದ್ದೂ, ಅದನ್ನು ರಿಪೇರಿ ಮಾಡಿಸಿದ್ದೂ ಎಲ್ಲವೂ ಸರಿ. ಆದರೆ ಈ ಒಡಕಲು ಕಾರಿನಲ್ಲಿಯೇ ಓಡಿಯಾಡುತ್ತೀರಲ್ಲ. ಮನೆಗೆ ತಕ್ಕ ಕಾರು ಇರಬೇಡವೇ?"

ಅರಸು ರತ್ನಿಯು ತೆಗೆದುಕೊಟ್ಟಿದ್ದ ಕಾರನ್ನೇ ಅನಿಲನು ಉಪಯೋಗಿಸುತ್ತಿದ್ದನು. ಕಾರು ಚೆನ್ನಾಗಿ ಕೆಲಸ ಮಾಡುತ್ತಿತ್ತು. ಒಳ್ಳೆಯ ಮೈಲೇಜ್ ಕೊಡುತ್ತಿತ್ತು. ಆದರೆ ಅನಿಲ ನಿವಾಸದ ಸ್ವಾಮಿಯ ಘನತೆಗೆ ತಕ್ಕ ಹಾಗಿರಲಿಲ್ಲ.

ಕನಕಂ ಹೇಳಿದುದು ಅವನಿಗೆ ಸರಿಯಾಗಿ ಕಂಡು ಬಂದಿತು. ಅದೂ ಅಲ್ಲದೇ ಅರಸು ರತ್ನಿ ಬರುತ್ತಾಳೆ. ಅವಳು ಈ ಬಂಗಲೆಯನ್ನು ನೋಡಿ ಅದಕ್ಕೆ ತಕ್ಕ ಕಾರಿಲ್ಲದಿದ್ದರೆ ಏನೆಂದುಕೊಳ್ಳುತ್ತಾಳೆ?

ಅವಳ ಮಾತು ಹಾಗಿರಲಿ ! ನೋಡಿದವರು ಏನೆಂದು ಕೊಳ್ಳುತ್ತಾರೆ.

ಕ್ಷಿಪ್ರದಲ್ಲಿಯೇ ಅ ನಿ ಲ ನು ದೊಡ್ಡದೊಂದು ಡಾಡ್ಜ್ ಕಾರನ್ನು ಇನ್‌ಸ್ಟಾಲ್‌ಮೆಂಟಿನ ಮೇಲೆ ತೆಗೆದುಕೊಂಡನು. ಆ ದಿನ ಸಾಯಂಕಾಲ ಅವನೂ ಕನಕಂಳೂ ಹೊಸಕಾರಿನಲ್ಲಿಯೇ ಕೊಡಂಬಾಕಂಗೆ ಬಂದರು.

ಎರಡು ದಿನಗಳ ಮೊದಲೇ ಅರಸು ರತ್ನಿ ಮದರಾಸಿಗೆ ಬಂದಳು. ಅನಿಲನ ಹೊಸ ಬಂಗಲೆ, ಕಾರುಗಳನ್ನು ನೋಡಿ ಸಂತೋಷಪಟ್ಟಳು. ಬಂಗಲೆಯನ್ನೂ ಅದರ ಸುತ್ತಲೂ ಇದ್ದ ಉದ್ಯಾನವನ್ನು ನೋಡಿ ಮೆಚ್ಚಿಕೊಂಡಳು.

ಮನೆಯ ಹಿಂದಿನ ಕೊಳವಂತೂ ಅವಳ ಮನಸ್ಸಿಗೆ ಬಹಳ ಹಿಡಿಸಿತು. ಎಷ್ಟು ಹೊತ್ತು ಅದರ ಬಳಿ ಕುಳಿತಿದ್ದರೂ ಅವಳಿಗೆ ತೃಪ್ತಿಯಾಗುತ್ತಿರಲಿಲ್ಲ.

ಕನಕಂ ಸೂಕ್ಷ್ಮಮತಿ. ಯಾರೂ ಹೇಳದಿದ್ದರೂ ಅರಸು ರತ್ನೆ, ಅನಿಲನ ಸಂಬಂಧವನ್ನು ಅವಳು ಊಹಿಸಿದ್ದಳು. ವಾಸವದತ್ತಾ ಕಾಲದಿಂದಲೂ ಈ ಸಂದೇಹವು ಅವಳಿಗಿತ್ತು. ಅರಸು ರತ್ನೆ ಕೋಡಂಬಾಕಂಗೆ ಬಂದೊಡನೆಯೇ ಅತಿಥಿಗಳನ್ನು ಆಹ್ವಾನಿಸುವ ನೆಪ ಹೇಳಿ ಮದರಾಸಿನಲ್ಲಿಯೇ ಇರತೊಡಗಿದಳು.

ಅನಿಲನು ಡೈರೆಕ್ಟರುಗಳೊಡನೆ ಮಾತನಾಡಿ ತನ್ನ ಷೂಟಿಂಗ್ ಕಾಲವನ್ನು ಅನುಕೂಲವಾಗಿ ಏರ್ಪಾಟು ಮಾಡಿಕೊಂಡನು.

ಔತಣವನ್ನು ಏರ್ಪಡಿಸಿದ್ದುದು ಶನಿವಾರ ರಾತ್ರಿ. ಮಾರನೆಯದಿನ ಭಾನುವಾರ. ಅಕಸ್ಮಾತ್ ಕರೆಂಟ್ ಇರಲಿಲ್ಲ. ಅದು ಹೆಚ್ಚುಮಂದಿ ಅತಿಥಿಗಳಿಗೆ ಪ್ರಿಯವಾಗಿತ್ತು. ಶನಿವಾರ ಮಧ್ಯಾಹ್ನದಿಂದಲೇ ಅತಿಥಿಗಳು ಬರುವುದಕ್ಕೆ ಆರಂಭವಾಯಿತು. ಸಂಜೆಯ ವೇಳೆಗೆ ಹೆಚ್ಚುತ್ತಾ ಬಂದು, ಕತ್ತಲಾಗುವ ವೇಳೆಗೆ ಎಲ್ಲರೂ ಬಂದು ತುಂಬಿಕೊಂಡರು.

ಬಂದ ನಟನಟಿಯರು, ನಿರ್ಮಾತೃಗಳೂ, ಸ್ಟುಡಿಯೋ ಮಾಲೀಕರು. ಫಿಲಂ ಸಾಧನಗಳ ವ್ಯಾಪಾರಿಗಳು, ಫಿಲಿಂ ಹಂಚಿಕೆಗಾರರು, ಜಾಹಿರಾತು ಏಜೆಂಟರು, ಪತ್ರಿಕಾ ಪ್ರತಿನಿಧಿಗಳು, ಫಿಲಂ ಕತೆಗಾರರು, ಸಂಗೀತ ಹಾಗೂ ವಾದ್ಯಗಾರರು ಬಂದರು. ಅವರೆಲ್ಲರಿಗೂ ಕುಂದಿಲ್ಲದಂತೆ ಆದರೋಪಚಾರಗಳು ನಡೆದುವು.

ಶಾಖಾಹಾರಿ, ಮಾಂಸಾಹಾರಿಗಳಿಗೆ ಪ್ರತ್ಯೇಕವಾದ ಏರ್ಪಾಟುಗಳಾಗಿದ್ದುವು.

ಕೊಳದ ಬಳಿ ಇದ್ದ ವಿಸ್ತಾರವಾದ ಬಯಲಿನಲ್ಲಿ ನಾಲ್ಕು ಕಡೆಯೂ ಪುಷ್ಪಶೋಭಿತವಾದ ಕುಂಡಾಗಳನ್ನಿಟ್ಟು, ಪ್ರಕಾಶಮಾನವಾದ ವಿದ್ಯುದ್ದೀಪಗಳನ್ನು ಹಚ್ಚಿ, ಭೋಜನಕ್ಕೆ ಜಾಗವನ್ನು ಮಾಡಲಾಗಿತ್ತು. ಹುಲ್ಲಿನ ಮೇಲೆ ಒಂದರ ಎದುರಿಗೆ ಮತ್ತೊಂದು ಮಣೆಗಳನ್ನು ಹಾಕಿದ್ದರು. ಮುಂದಿನ ಸಾಲು ಮಣೆಗಳ ಮೇಲೆ ದೊಡ್ಡ ಬಾಳೆಯ ಎಲೆಗಳನ್ನು ಹಾಕಿದರು. ಅತಿಥಿಗಳು ಕುಳಿತು ಕೊಳ್ಳುವ ಮೊದಲೇ ಚಟ್ನಿ, ಉಪ್ಪಿನಕಾಯಿ, ಪಲ್ಯಗಳು,

ಹಪ್ಪಳ ಸಂಡಿಗೆಗಳನ್ನೂ ಬಡಿಸಲಾಗಿತ್ತು. ಅತಿಥಿಗಳು ಬಂದು ಕುಳಿತು ಕೊಂಡ ಕೂಡಲೇ ಬಗೆಬಗೆಯ ಪಕ್ವಾನ್ನಗಳನ್ನೂ, ವಿವಿಧ ಖಾದ್ಯಗಳನ್ನೂ ತಂದು ಬಡಿಸಲು ಪರಿಚಾರಕರು ಸಿದ್ಧವಾಗಿದ್ದರು.

ಬಂಗಲೆಯ ಬಿಸಿಲು ಮಾಡದಲ್ಲಿ ಮೇಜು ಕುರ್ಚಿಗಳನ್ನು ಹಾಕಲಾ ಗಿತ್ತು. ಅಲ್ಲಿ ಬೇಕಾದ ಹಾಗೆ ವಿವಿಧ ಮದ್ಯಗಳನ್ನೂ, ರುಚಿ ರುಚಿಯಾದ ಮಾಂಸದ ತಿಂಡಿಗಳನ್ನೂ ಒದಗಿಸುವ ಏರ್ಪಾಟಾಗಿತ್ತು.

ಈ ಎಲ್ಲ ಸಿದ್ಧತೆಗಳನ್ನೂ ಸ್ಪೆನ್ಸರ್‌ನವರಿಗೆ ವಹಿಸಿದ್ದರು.

ಕಡೆಯಲ್ಲಿ ನೋಡಲು ಎಲ್ಲರೂ ಟೆರೇಸ್ ಮೇಲೆಯೇ ಸೇರಿದರು. ವೆಂಕಪ್ಪಯ್ಯನವರು ನಾಲ್ಕಾರು ಮಂದಿಯೊಡನೆ ಕುಳಿತು ಕೆಳಗಡೆ ವನ ಭೋಜನವನ್ನು ಮಾಡಬೇಕಾಗಿ ಬಂದಿತು.

ಭೋಜನಾ ನಂತರದಲ್ಲಿ ವಿಶ್ರಮಿಸಿಕೊಳ್ಳಲು ಬಂಗಲೆಯ ಪಕ್ಕದ ಲ್ಲಿಯೂ ಮುಂದುಗಡೆಯೂ ಉದ್ಯಾನವನದಲ್ಲಿ ವಿವಿಧ ವರ್ಣದಿಂದ ಕೂಡಿದ ಅಗಲವಾದ ಚತ್ರಗಳನ್ನ ನೆಟ್ಟು, ಮಂದವಾದ ದೀಪವನ್ನು ಹಚ್ಚಲಾಗಿತ್ತು. ಅಲ್ಲೆಲ್ಲಾ ಬೆಳ್ಳಿಯ ತಟ್ಟೆಗಳಲ್ಲಿ ಚಿಗುರು ವೀಳೆಯದೆಲೆ, ಬಣ್ಣ ಕಟ್ಟಿದ ಅಡಿಕೆ, ಕೇಸರಿ ಸುಣ್ಣಗಳನ್ನು ಇಡಲಾಗಿತ್ತು.

ಅತಿಥಿಗಳು ತಾಂಬೂಲ ಚರ್ವಣ ಮಾಡುವ ಎಡೆಯಲ್ಲಿ ಮರಗಿಡಗ ಳಲ್ಲಿ ಬಣ್ಣ ಬಣ್ಣದ ವಿದ್ಯುದ್ದೀಪಗಳು ನಕ್ಷತ್ರಗಳಂತೆ ಮಿಣುಗುಟ್ಟುತ್ತಿದ್ದವು ಸುಖ ಸಂಗೀತವು ಕೇಳಿಬರುವಂತೆ ಎಲ್ಲೆಲ್ಲಿಯೂ ಲೌಡ್‌ಸ್ಪೀಕರುಗಳನ್ನು ಅಳವಡಿಸಲಾಗಿತ್ತು.

ಹತ್ತು ಗಂಟೆಯ ವೇಳೆಗೇ ಅತಿಥಿಗಳ ಮೇಲೆ ಮದಿರೆಯ ಪ್ರಭಾವವು ಕೆಲಸಮಾಡಲು ತೊಡಗಿತು. ಮನೆಯ ಟೆರೇಸ್‌ಗಿಂತಲೂ ಕೆಳಗಡೆಯ ಉದ್ಯಾನವು ಅವರಿಗೆ ಪ್ರಿಯವಾಗಿ ಕಂಡಿತು. ಸುತ್ತಲೂ ಮಿಣಗುಟ್ಟುವ ದೀಪಗಳು ಅವರಿಗೆ ನಕ್ಷತ್ರಗಳಂತೆಯೂ, ಅಲ್ಲಲ್ಲಿ ಹಾಕಿದ್ದ ಬಣ್ಣ ಬಣ್ಣದ ಚತ್ರಗಳು ತಾರಾಲೋಕದಲ್ಲಿ ತೇಲುವ ವಿಮಾನಗಳಂತೆಯೂ ಅವರ ಕಣ್ಣಿಗೆ ಕಂಡು ಬಂದುವು.

ಅವರೆಲ್ಲರೂ ಕೆಳಗಿಳಿದು ಬಂದು ವರ್ಣ ಚತ್ರಗಳ ಆಶ್ರಯವನ್ನು ಪಡೆ

ದರು. ತಾಂಬೂಲ ತಟ್ಟೆಗಳನ್ನು ಪಕ್ಕಕ್ಕೆ ತಳ್ಳಿ, ಅಲ್ಲಿಗೇ ಬಾಟಲುಗಳನ್ನೂ ಗ್ಲಾಸುಗಳನ್ನೂ ತರಿಸಿಕೊಂಡರು.

ಭೋಜನ ಕಾಲದಲ್ಲಿಯೂ, ತದನಂತರದಲ್ಲಿಯೂ ಅನಿಲನೂ, ಅರಸು ರತ್ನೆಯೂ, ಕನಕಂಳೂ ಎಲ್ಲರನ್ನೂ ಕಂಡು ಮಾತನಾಡಿಸಿ, ಉಪ ಚಾರೋಕ್ತಿಗಳನ್ನು ಹೇಳಿದರು.

ಹೊತ್ತಾಗುತ್ತಾ ಬಂದಂತೆಲ್ಲಾ ಆ ನಕ್ಷತ್ರ ಲೋಕದಲ್ಲಿ ಕುಡಿತದ ಹುಚ್ಚು ಹೊಳೆಯು ಹರಿಯ ತೊಡಗಿತು. ಎಲ್ಲೆಲ್ಲಿಯೂ ನಗುಗಳೂ, ಕೇಕೆಗಳೂ, ಕೇಳಬಂದಿತು. ಗಟ್ಟಿಯಾಗಿ ಮಾತನಾಡುವುದೂ, ಕೂಗುವುದೂ ಆರಂಭ ವಾಯಿತು. ಲೌಡ್‌ಸ್ಪೀಕರುಗಳಲ್ಲಿ ಕೇಳಿ ಬರುತ್ತಿದ್ದ ಸಂಗೀತದ ಛಾಯೆಯು ಬದಲಾವಣೆ ಹೊಂದಿ, ತಾಳಲಯಗಳು ಕೆಟ್ಟು, ರಾಗವು ವಿರಾಗವಾಗಿ ತೊದಲು ನುಡಿಗಳು ಕೇಳಿ ಬರುತ್ತಿತ್ತು.

ಆ ರಾತ್ರಿ ನರ್ತನಕ್ಕಾಗಿ ದಕ್ಷಿಣ ಭಾರತದ ಸುಪ್ರಸಿದ್ಧ ಅಕ್ಕತಂಗಿ ಯರಾದ ಸುಜಾತಾ ಸುನೀತಿಯರನ್ನು ನರ್ತನಕ್ಕಾಗಿ ಆಹ್ವಾನಿಸಿದ್ದರು. ಆ ನರ್ತನವೂ ಸರಿಯಾಗಿ ನಡೆಯಲಿಲ್ಲ. ಅವರೂ ಮದಿರಾ ಮತ್ತರಾಗಿ ತತ್ತರಿಸುತ್ತಾ ಅಲ್ಲಲ್ಲಿ ಓಡಿಯಾಡುತ್ತಿದ್ದರು.

ರಾತ್ರಿ ಒಂದು ಗಂಟೆಯ ನಂತರ ಅತಿಥಿಗಳು ಹೊರಡುವುದಕ್ಕೆ ಆರಂಭವಾಯಿತು.

ರಾಜರತ್ನಂ ಚೆಟ್ಟಿಯಾರೂ, ನಾರಾಯಣ್‌ರೂ ತಮ್ಮ ವಾಸವ ದತ್ತಾಸ್ಟಾರ್ ಇಷ್ಟು ಪ್ರವರ್ಧಮಾನವಾದುದಕ್ಕೆ ಸಂತೋಷವನ್ನು ವ್ಯಕ್ತ ಪಡಿಸಿದರು.

ಅನೇಕ ಅತಿಥಿಗಳು ಅನಿಲನಿಗೆ ಧನ್ಯವಾದಗಳನ್ನು ಹೇಳಿ, ತಮ್ಮ ಕಾರು ಗಳಲ್ಲಿ ಹೊರಟು ಹೋದರು. ಮತ್ತೆ ಹಲವರನ್ನು ಕಾರು, ಟ್ಯಾಕ್ಸಿಗಳಲ್ಲಿಯೂ ಸ್ಟುಡಿಯೋ ವ್ಯಾನುಗಳಲ್ಲಿಯೂ ಕಳಿಸಿ ಕೊಡಲಾಯಿತು. ಅತಿಥಿಗಳನ್ನು ಬಿಟ್ಟು ಬರಲು ಅನಿಲನ ಕಾರುಗಳೂ ಅವನ ಸ್ನೇಹಿತರ ಕಾರುಗಳೂ ಎಷ್ಟೋ ಬಾರಿ ಓಡಿಯಾಡಿದುವು.

ಕೆಲವು ಮಂದಿ ಆ ರಾತ್ರಿ ಆನಿಲ ನಿವಾಸದಲ್ಲಿಯೇ ಮಲಗಿಕೊಂಡರು. ಶಾಖಾಹಾರಕ್ಕಾಗಿ ವನ ಭೋಜನದ ಎಡೆಗೆ ಬಂದು ಮಣೆಗಳ ಮೇಲೆಯೇ ಮೈ ಮರೆತು ಬಿದ್ದಿದ್ದವರನ್ನು ಒಳಗೆ ಕರೆದುಕೊಂಡು ಹೋಗಿ ಮಲಗಿಸಲಾಯಿತು. ಬೆಳಗಾದಾಗ ಎಷ್ಟೋ ಮಂದಿ ಮರಗಳ ಕೆಳಗೆ ಹುಲ್ಲಿನ ಮೇಲೆಯೇ ಪವಡಿಸಿದ್ದರು.

## ೨೦

ಔತಣವು ಮುಗಿದ ನಂತರ ಅನಿಲನಿಗೆ ಆ ಮನೆಯು ಬಿಕೋ ಎನ್ನಿಸ ತೊಡಗಿತು.

ಅರಸು ರತ್ನೆಯು ಇರುವವರೆವಿಗೆ ಹೇಗೋ ಕಾಲವು ತಳ್ಳಿತು. ಎರಡು ದಿನವಿದ್ದು ಅವಳೂ ಹೊರಟು ಹೋದಳು.

ಅನಿಲನು ಬೆಳಗಾಗ ಎದ್ದು ಸ್ಟುಡಿಯೋಗಳಿಗೆ ಹೋದರೆ ಯಾವಾಗಲೋ ವಾಪ್ಸು ಬರುತ್ತಿದ್ದನು. ಮನೆಗೆ ಬಂದ ರಾತ್ರಿ ದೇಗುಲದಂತಹ ಮನೆಯಲ್ಲಿ ಅವನೊಬ್ಬನೇ !

ಷೂಟಿಂಗ್ ಇಲ್ಲದ ದಿನಗಳಲ್ಲಿ ಅವನು ಮನೆಯನ್ನು ಬಿಟ್ಟು ಹೋಗುತ್ತಲೇ ಇರಲಿಲ್ಲ.

ಆ ದಿನಗಳಲ್ಲಿ ಹೊತ್ತು ಕಳೆಯುವುದೇ ಕಷ್ಟವಾಗುತ್ತಿತ್ತು. ಆ ಹೂ ತೋಟದಲ್ಲಿ ಅಲೆಯುವನು. ಕೊಳದ ಬಳಿ ಕುಳಿತುಕೊಳ್ಳುವನು. ಅದು ಬೇಜಾರಾಗುತ್ತಿತ್ತು. ಹಾಗಾದಾಗ ಸ್ವಿಮಿಂಗ್‌ಪೂಲ್‌ನಲ್ಲಿ ಈಜುವನು. ನೀರಿನ ಮೇಲೆ ತೇಲುತ್ತಾ ಒಂದೊಂದು ಗಂಟೆಯು ಕಳೆಯುವುದು. ಆಗ ತಾನು ಚಂದ್ರವದನಾ ಚಿತ್ರದಲ್ಲಿ ನಟಿಸಲು ಗೊತ್ತಾದನಂತರ ಈಜು ಕಲಿತಿದ್ದು ಸಾರ್ಥಕವಾಯಿತೆಂದುಕೊಳ್ಳುವನು.

ಏನೇ ಆದರೂ ನಿರ್ಜನವಾದ, ನಿಶ್ಯಬ್ದವಾದ ಆ ಮನೆಯ ವಾತಾವರಣದಲ್ಲಿ ಅವನಿಗೆ ತಲೆ ನೋವು ಬಂದ ಹಾಗಾಗುತ್ತಿತ್ತು.

ಯಾರಾದರೂ ಇಲ್ಲಿ ಬಂದು ತನ್ನ ಜೊತೆಗಿದ್ದರೆ ಇಷ್ಟು ಬೇಜಾರಾಗುವುದಿಲ್ಲವೆಂದುಕೊಳ್ಳುವನು. ಐವತ್ತು ಜನರಿದ್ದರೂ ತುಂಬಿದಂತೆ ಕಂಡು ಬರುತ್ತಿದ್ದ ಆ ಮನೆಯಲ್ಲಿ ಇನ್ನೊಬ್ಬರು ಬಂದಿದ್ದರೆ ಏನಾಯಿತೆಂದು ತೋರುವುದು. ಪರಸ್ಪರ ವಿರುದ್ಧ ಭಾವನೆಗಳು ಮನಸ್ಸಿನಲ್ಲಿ ಬಂದರೂ ಜೊತೆಗೆ ಯಾರಾದರೂ ಇರಲೇ ಬೇಕೆನ್ನಿಸುವುದು.

ಒಮ್ಮೆ ಅನಿಲನು ಕನಕಂಳನ್ನು ನೋಡಿ ಬಹಳ ಬೇಜಾರಾಗುತ್ತದೆಂದೂ, ನಾಲ್ಕು ದಿನ ಬಂದು ತನ್ನೊಡನಿರಬೇಕೆಂದೂ ಕರೆದನು. ಅವಳು ಸ್ತ್ರೀ ಸಹಜವಾಗಿ ಮೊದಲು ಆಗುವುದಿಲ್ಲವೆಂದು ಹೇಳಿದಳು. ಉಪಚಾರೋಕ್ತಿಗಳನ್ನು ಹೇಳಿದಂತೆಲ್ಲಾ ಸ್ವಲ್ಪವಾಗಿ ಮನಸ್ಸು ಬದಲಾಯಿಸುತ್ತಾ ಬಂದಳು. ಬಲಾತ್ಕಾರ ಮಾಡಲು ಕಡೆಗೆ ಒಪ್ಪಿಕೊಂಡಳು.

ಅವಳಿರುವಷ್ಟು ದಿನ ಸುಖವಾಗಿ ಹೊತ್ತು ಹೋಗುತ್ತಿತು. ರಾತ್ರಿ ಅವರು ಮನೆಗೆ ಬಂದರೆ ಬೆಳಗಾಗ ಅನಿಲನಿಗಾಗಲೀ ಕನಕಂಳಿಗಾಗಲೀ ಪುರಸೊತ್ತು ಇರುತ್ತಿರಲಿಲ್ಲ. ಎದ್ದು ಸ್ನಾನಾದಿಗಳನ್ನು ತೀರಿಸಿಕೊಂಡು, ಬಟ್ಟೆ ಬದಲಾಯಿಸಿ, ತಿಂಡಿಯ ಜೊತೆಗೆ ಎರಡನೆಯ ಬಾರಿ ಕಾಫಿಯನ್ನು ತೆಗೆದುಕೊಂಡು ಸಿದ್ಧವಾಗುವುದರೊಳಗಾಗಿ ಹೊತ್ತಾಗಿ ಹೋಗುವುದು. ನೇರವಾಗಿ ಸ್ಟುಡಿಯೋಗಳಿಗೆ ಹೊರಟು ಹೋಗುವರು.

ಸಂಜೆ ಏನಾದರೂ ಪುರಸೊತ್ತಾದರೆ ಕನಕಂ ಬಂದು ಅನಿಲನನ್ನು ನೋಡುವಳು. ಅಥವಾ ಅವನೇ ಹೋಗಿ ಅವಳನ್ನು ಕರತರುವನು. ಮನೆಗೆ ಬಂದು ಸ್ನಾನ ಮಾಡಿ ಪುನಃ ಬಟ್ಟೆ ಬದಲಾಯಿಸುವರು. ತೋರಿ, ಕತ್ತಲಾಗದಿದ್ದರೆ ಟೆನ್ನಿಸ್ ಆಡುವರು. ಇಲ್ಲದಿದ್ದರೆ ಸುತ್ತುತ್ತಾ ಕಾಲ ಕಳೆಯುವರು.

ಸಂಜೆಗತ್ತಲು ಕಳೆದು, ಕತ್ತಲೆಯು ನೊಬ್ಬು ಕವಿಯುವ ಹೊತ್ತಿನಲ್ಲಿ ಕುಡಿಯಲು ಆರಂಭಿಸುವರು. ಎಂಟೂವರೆ ಒಂಭತ್ತು ಗಂಟೆಯ ವೇಳೆಗೆ ಕನಕಂ ಊಟ ಮಾಡಬೇಕೆನ್ನುವಳು. ಅಲ್ಲಿಯವರೆವಿಗೆ ಮಾತನಾಡುತ್ತಾ ಗ್ಲಾಸುಗಳನ್ನು ಮುಂದಿಟ್ಟುಕೊಂಡು ಕುಳಿತಿರುವರು.

ಕನಕಂ ಹೆಚ್ಚಾಗಿ ಕುಡಿಯುತ್ತಿರಲಿಲ್ಲ. ಮತ್ತೊಬ್ಬರು ಹೆಚ್ಚಾಗಿ ಕುಡಿಯುವುದಕ್ಕೂ ಬಿಡುತ್ತಿರಲಿಲ್ಲ. ಮಾತನಾಡುತ್ತಾ ಮದಿರೆಯಿಂದ ಮನಸ್ಸನ್ನು ತಿರುಗಿಸಲು ಪ್ರಯತ್ನಪಡುವಳು.

ಯಾವಾಗಲಾದರೂ ಅನಿಲನು ಹೆಚ್ಚಾಗಿ ಕುಡಿಯಲು ಅಪೇಕ್ಷೆ ಪಟ್ಟರೆ–

"ಅನಿಲ್ ! ಹೆಚ್ಚಾಗಿ ಕುಡಿದು ಬಿದ್ದು, ಹೊರಳಾಡುವುದರಲ್ಲಿ ಸುಖ ವಿಲ್ಲ. ಕುಡಿದು ಇನ್ನೂ ಬೇಕು–ಎನ್ನಿಸುವಾಗ ಬಿಡುವುದರಲ್ಲಿಯೇ ಸುಖವಿದೆ."

ಅನಿಲನಿಗೆ ಅದು ವಾಸ್ತವವಾಗಿ ತೋರಿದರೂ ಸಹ ಕುಡಿತದ ಚಪಲ ದಿಂದ ನೋಲೇಳಲಾರದೇ ಚಡಪಡಿಸುವನು. ಆದರೆ ಕನಕಂಳಿಗೆ ಅಸಮಾಧಾನ ವಾಗುವುದಲ್ಲ—ಎಂದು ಸುಮ್ಮನಾಗುವನು.

ಕನಕಂಳಂತೆ ಪಾನೀಯವು ಎದುರಿಗಿದ್ದು ಕುಡಿಯದೇ ಇರುವ ಸಂಯಮವು ಅವನಿಗಿರಲಿಲ್ಲ. ಕುಡಿದರೆ ಕನಕಂಳಿಗೆ ಕೋಪ ಬರುವುದು. ಆದರಿಂದ ಅವನು ಮನಸ್ಸನ್ನು ಬೇರೆಯ ಕಡೆಗೆ ತಿರುಗಿಸಲು ಟೆನ್ನಿಸ್ ಆಡೋಣವೆನ್ನುವನು. ಒಂದು ಬಾರಿ ಕತ್ತಲಾದ ನಂತರ ಆಡಬೇಕೆಂದು ತೋರಿ, ನಿರಾಶೆಗೊಂಡು, ಟೆನ್ನಿಸ್ ಕೋರ್ಟಿಗೆ ದೀಪಗಳನ್ನು ಹಾಕಿಸಿದ್ದನು. ಊಟಕ್ಕೇಳುವವರೆವಿಗೆ ಅಲ್ಲಿ ಹೋಗಿ ಕಾಲವನ್ನು ಕಳೆಯುವರು.

ಮದರಾಸಿನ ಸೆಕೆಯಲ್ಲಿ, ಪುಟ್ಟ ಪುಟ್ಟ ಅಲೆಗಳಿಂದ ಆಡುತ್ತಿರುವ ಸ್ವಿಮಿಂಗ್ ಪೂಲ್‌ನ ನೀರನ್ನು ನೋಡಿದಾಗ ಅನಿಲನಿಗೆ ಒಮ್ಮೊಮ್ಮೆ ಈಜು ವುದಕ್ಕೆ ಮನಸ್ಸಾಗುವುದು. ಇಬ್ಬರೂ ಬೇತಿಂಗ್ ಸೂಟು ಹಾಕಿಕೊಂಡು ಈಜುವರು.

ಕನಕಂ ಈಜುವುದರಲ್ಲಿ ಗಟ್ಟಿಗಳು. ಅನೇಕ ವೇಳೆ ಅನಿಲನನ್ನು ಮೀರುಸುವಳು.

ಇಷ್ಟಾದರೂ ಅನಿಲನಿಗೆ ಅವಳನ್ನು ಮುಟ್ಟುವುದಕ್ಕೆ ಹೆದರಿಕೆ. ಆಕಸ್ಮಾತ್ ತನ್ನ ಕೈ ಮೈ ಅವಳಿಗೆ ತಗುಲಿದರೆ ಎಲ್ಲಿ ಕುಪಿತಳಾಗುವಳೋ ಎಂದು ಹೆದರುವನು.

ಹಗಲಿನಲ್ಲಿ ಗಂಡಿಗಿಂತಲೂ ಹೆಚ್ಚು ಗಂಡಾಗಿ ನಡೆದುಕೊಳ್ಳುತ್ತಿದ್ದ

ಕನಕಂಗೆ ರಾತ್ರಿ ಬಹಳ ಹೆದರಿಕೆ. ಆದರಿಂದ ಅವಳು ಅನಿಲನ ಕೋಣೆ ಯಲ್ಲಿಯೇ ಮಲಗುವಳು.

ಆ ಬಂಗಲೆಯ ಮಹಡಿಯ ಮೇಲೆ ಒಂದು ಮೂಲೆಯಲ್ಲಿ ಶಯನಗೃಹ. ಅದು ದೊಡ್ಡ ಕೋಣೆ. ಅಲ್ಲಿಗೆ ಬರುವುದಕ್ಕೆ ಒಂದೇ ಬಾಗಿಲಿದ್ದರೂ ಉದ್ಯಾನವನದ ಕಡೆಗೆ ಎರಡು ವಾತಾಯನಗಳಿದ್ದುವು. ಅವು ಬಾಗಿಲು ಗಳಂತೆ ದೊಡ್ಡದಾಗಿ, ಹೊರಗೆ ಹೋಗುವಂತೆ ಇದ್ದವು. ಒಂದೊಂದು ವಾತಾಯನವನ್ನು ದಾಟಿ ಹೊರಗೆ ಹೋದರೆ ಹತ್ತು ಹನ್ನೆರಡು ಅಡಿಗಳ ವಿಸ್ತಾರವಾಗಿರುವ ಪುಟ್ಟ ಪುಟ್ಟ ಉದ್ಯಾನ. ಸುವಾಸನೆಯನ್ನು ಒಳಗೊಂಡು ಕಣ್ಣಿಗೆ ಚೆನ್ನಾಗಿ ಕಂಡುಬರುವಂತ ಹೂವಿನ ಗಿಡಗಳನ್ನು ಬೆಳೆಸಲಾಗಿತ್ತು. ಆ ವಾತಾಯನ ಉದ್ಯಾನಗಳ ಪಾತ್ರವಾಗಿ ಕೆಳಗಿನಿಂದ ಕಲ್ಲುಕಟ್ಟಿಕೊಂಡು ಬಂದು ಅದರ ಮೇಲೆ ಬಳ್ಳಿಗಳನ್ನು ಹಬ್ಬಿಸಲಾಗಿತ್ತು.

ಒಂದೊಂದು ವಾತಾಯನಕ್ಕೂ ಎದುರಾಗಿ ಒಂದೊಂದು ಮಂಚವನ್ನು ಹಾಕಿದ್ದರು. ಒಂದು ಮಂಚದ ಮೇಲೆ ಕನಕಂ ಮಲಗಿಕೊಳ್ಳುವಳು. ಮಲಗಿಕೊಂಡಕೂಡಲೇ ಅವಳಿಗೆ ನಿದ್ದೆಯು ಬಂದುಬಿಡುವುದು. ಅನಿಲನಿಗೆ ಎಷ್ಟು ಹೊತ್ತಾದರೂ ನಿದ್ದೆಯು ಬರುವುದಿಲ್ಲ. ರಾತ್ರಿಯೆಲ್ಲಾ ಬಹಳ ಕಾಲ ಎಚ್ಚರವಾಗಿರುತ್ತಾನೆ. ಒಂದೊಂದು ರಾತ್ರಿಯೂ ನರಕಯಾತನೆ ಯನ್ನು ಅನುಭವಿಸದಂತಾಗುತ್ತದೆ. ಕೆಲವು ಬಾರಿ ನಿದ್ದೆಯೇ ಬರದೆ ಚೆನ್ನಾಗಿ ಕುಡಿದುಕೊಂಡು ಬಂದು ಮೈಮರೆತು ಬಿದ್ದುಕೊಳ್ಳುತ್ತಾನೆ.

ನಿದ್ದೆಯಲ್ಲಿರುವ ಕನಕಂಳಿಗೆ ಅದು ಗೊತ್ತಾಗುವುದಿಲ್ಲ.

ಈ ಸ್ಥಿತಿಯು ಬಹಳ ದಿನಗಳಿರಲಿಲ್ಲ. ಎಷ್ಟು ಬಲಾತ್ಕಾರ ಮಾಡಿ ದರೂ ಕನಕಂ ವಾರಕ್ಕಿಂತ ಹೆಚ್ಚು ದಿನಗಳು ಇರಲಿಲ್ಲ.

ಅವಳಿದ್ದಾಗ ಸದಾ ಅತೃಪ್ತಿಯು ಇದ್ದರೂ ಏನೋ ಒಂದು ವಿಧವಾಗಿ ಕಾಲಕಳೆಯುತ್ತಿತ್ತು. ಅನಂತರ ಪುನಃ ಏಕಾಕೀ ಜೀವನವು ಅವನಿಗೆ ಭಾರ ವಾಗ ತೊಡಗಿತು.

ಯಾರು ಬಂದು ತನ್ನೊಡನೆ ಶಾಶ್ವತವಾಗಿ ಇರುತ್ತಾರೆ. ತನಗೆ ಪರಿ ಚಯವಿರುವ ಎಲ್ಲ ವ್ಯಕ್ತಿಗಳಲ್ಲಿಯೂ ಒಬ್ಬೊಬ್ಬರನ್ನೇ ಜ್ಞಾಪಿಸಿಕೊಂಡನು. ಅವರಾರೂ ಇಲ್ಲಿ ಬಂದು ಶಾಶ್ವತವಾಗಿರುವುದಿಲ್ಲ.

ಈ ಆಲೋಚನೆಗಳೆಲ್ಲವೂ ಮನಸ್ಸಿನಲ್ಲಿ ಮಥಿಸುತ್ತಿದ್ದಾಗ ಮಂಜುಳೆಯ ನೆನಪು ಬಂದು ಸುಳಿದಾಡುತ್ತಿತ್ತು. ಬರಬರುತ್ತಾ ಅದು ಬೆಳೆದು ಬಂದು ಇನ್ನಾರೂ ಬೇಡ, ಮಂಜುಳೆಯು ಬಂದಿದ್ದರೆ ಮಾತ್ರ ತನಗೆ ಸುಖವಾಗುವುದೆಂದುಕೊಂಡ. ಅವಳು ಈ ದೊಡ್ಡ ಮನೆಯಲ್ಲಿ ಓಡಿಯಾಡುತ್ತಿದ್ದರೆ ಇದು ತುಂಬಿದಂತೆ ಕಂಡು ಬರುತ್ತದೆಂದುಕೊಂಡ.

ಮರುಕ್ಷಣದಲ್ಲಿಯೇ ಅವಳು ಆ ಮನೆಗೆ ಬಂದ ಹಾಗೆ ತೋರಿತು. ತಾನು ಅವಳೊಡನೆ ಉದ್ಯಾನದಲ್ಲಿ ಓಡಿಯಾಡುತ್ತಿದ್ದ ಹಾಗೆಯೂ, ಕೊಳದ ಬಳಿ ಕುಳಿತುಕೊಂಡಂತೆಯೂ, ಹಗಲು ಕನಸು ಕಾಣುವನು. ತಾವಿಬ್ಬರೂ ಟೆನ್ನಿಸ್ ಕೋರ್ಟಿನಲ್ಲಿ ಆಟವಾಡುತ್ತಿರುವಂತೆಯೂ, ಬ್ಯಾಟ್ ಹಿಡಿದಿರುವ ಅವಳ ಕೈಯನ್ನು ಹಿಡಿದು ಬಾಲ್ ಹೊಡೆಯುವುದನ್ನು ತಾನು ಕಲಿಸುತ್ತಿರುವುದಾಗಿಯೂ ಭಾವಿಸುವನು. ಅವಳು ಈಜು ಕಲಿಯಲಪೇಕ್ಷಿಸಿದಂತೆಯೂ, ಅವಳನ್ನು ನೀರಿನಲ್ಲಿ ತೇಲಿಸುತ್ತಿರುವಂತೆಯೂ, ಆಗವಳಿಗೆ ಹೆದರಿಕೆಯಾಗಿ ಎರಡು ಕೈಗಳಿಂದಲೂ ತನ್ನನ್ನು ತಬ್ಬಿಕೊಂಡಂತೆಯೂ ಚಿತ್ರಿಸಿಕೊಳ್ಳುವನು.

ಆ ಹಗಲು ಕನಸುಗಳಿಂದಷ್ಟರಿಂದಲೇ ಅವನಿಗೆ ತೃಪ್ತಿಯಾಗುವುದಿಲ್ಲ. ಯಾಕೆ ಸುಖವಾಗಲಿಲ್ಲವೆಂದು ವಿವೇಚನೆ ಮಾಡುವನು. ಆಗ-ಆಗ ಅವೊಂದೂ ನಿಜವಲ್ಲವೆಂದೂ, ತಾನು ಕಾಣುತ್ತಿರುವುದು ಭಾವನಾಚಿತ್ರಗಳೆಂದೂ ಅರಿವಾಗುವುದು.

ಅನೇಕ ಬಾರಿ ಕಲ್ಪನೆಗಳಿಂದ ಮನಸ್ಸಿಗೆ ಸುಖ ತಂದುಕೊಂಡು, ಅತೃಪ್ತನಾಗಿ ನಿರಾಶೆಗೊಂಡು, ಮಂಜುಳೆಯನ್ನು ಕರೆದುಕೊಂಡು ಬರಬೇಕೆಂದು ಆಲೋಚಿಸುವನು.

ಅದರ ಸಾಧ್ಯಾಸಾಧ್ಯತೆಗಳು ಮನಸ್ಸಿಗೆ ಬರುವುವು. ಮಂಜುಳೆಗೆ ಬೇರೇ ಕಡೆ ಮದುವೆಯಾಗದಿದ್ದರೆ ಕೊಂಡು ಬರುವುದು ಸುಲಭವಾಗುತ್ತಿದ್ದಿತೆಂದು ಒಮ್ಮೆ ತೋರುವುದು. ಅವಳು ತನ್ನ ಮನೆಗೆ ಸೇರಿರುವುದರಿಂದಲೇ ಕರೆತರುವುದು ಸುಲಭವೆಂದು ಮತ್ತೊಮ್ಮೆ ತೋರುವುದು.

ಈ ದ್ವಂದ್ವದಲ್ಲಿ ಸಿಕ್ಕಿ ನರಳುತ್ತಿರುವುದು ಬಹು ದಿನ ಅವನಿಂದ ಸಾಧ್ಯವಾಗಲಿಲ್ಲ.

# ೨೧

ಒಂದು ಶನಿವಾರ ಷೂಟಿಂಗ್ ಇರಲಿಲ್ಲ. ಆ ದಿನ ಬೆಳಗಾಗ ಡಾಡ್ಜ್ ಹಾಕಿಕೊಂಡು ಮದರಾಸಿನಿಂದ ಹೊರಟನು. ಅಲ್ಲಿಂದ ಹೊರಡುವಾಗ ಬೆಂಗಳೂರಿನಲ್ಲಿ ನಿಲ್ಲದೇ ನೇರವಾಗಿ ಮಂಡ್ಯಕ್ಕೆ ಹೋಗುವುದೆಂದು ಕೊಂಡಿದ್ದನು.

ಅವನು ಹಾಗೆಂದು ಕೊಂಡುದಕ್ಕೆ ಕಾರಣವೂ ಇದ್ದಿತು. ಬೆಂಗಳೂರಿನಲ್ಲಿ ನಿಂತರೆ ಅರಸುರತ್ನೆಯನ್ನು ನೋಡಬೇಕಾಗುತ್ತದೆ. ಅವಳು ಸಿಕ್ಕಿದರೆ ಶನಿವಾರ, ಭಾನುವಾರಗಳು ಪೂರ್ಣವಾಗಿ ಅಲ್ಲಿಯೇ ಕಳೆದು ಹೋಗುತ್ತವೆ. ಸೋಮವಾರ ಅವನು ಮದರಾಸಿನಲ್ಲಿರಬೇಕು.

ಹೀಗಾಗಿ ಮಂಜುಳೆಯನ್ನು ಕರೆದುಕೊಂಡು ಬರುವುದಕ್ಕೆ ಆಗುವುದಿಲ್ಲ.

ಬೆಂಗಳೂರಿಗೆ ಬರುವ ವೇಳೆಗೆ ಮದ್ಯಾಹ್ನವಾಗಿತ್ತು. ಬಂದನಂತರ ಮನಸ್ಸು ಬದಲಾಯಿಸಿತು. ಸೆಟ್ಟಿಗೆ ಗಿರಿನಿವಾಸಕ್ಕೆ ಹೋದ. ಅರಸು ರತ್ನೆಯೂ ಇರಲಿಲ್ಲ. ಅಲ್ಲಿ ಊಟವನ್ನು ಮುಗಿಸಿಕೊಂಡು, ಅವಳಿರಬಹುದಾದ ಹೋಟಲುಗಳಲ್ಲೆಲ್ಲಾ ವಿಚಾರಿಸಿ ನೋಡಿದ.

ಅರಸು ರತ್ನೆ ಇರಲಿಲ್ಲ. ಅವಳು ಸೂರತ್‌ಗೆ ಹೋಗಿದ್ದಾಳೆಂದು ಗೊತ್ತಾಯಿತು,

ಅವಳಿಲ್ಲದ ಬೆಂಗಳೂರು ಅನಿಲನಿಗೆ ಬೇಕಾಗಿರಲಿಲ್ಲ. ಹೋಗುವಾಗ ಸ್ವಲ್ಪ ಹೂವು, ತರಕಾರಿ, ಹಣ್ಣುಗಳನ್ನು ತೆಗೆದುಕೊಂಡು ಹೋದನು. ಅದೇ ದಿನ ಮಂಡ್ಯಕ್ಕೆ ಹೊರಟುಬಿಟ್ಟ.

ಅಲ್ಲಿಗೆ ಸೇರಲು ಸಂಜೆಯಾಯಿತು.

ಗೋದಮ್ಮ ತಮ್ಮನನ್ನು ವಿಶ್ವಾಸದಿಂದ ಬಂದು ಎದುರುಗೊಂಡಳು. ಅಚ್ಯುತನಿಗೆ ಪೂರಾ ಗುಣವಾಗದೇ ಇದ್ದರೂ ಸ್ವಲ್ಪ ಹುಷಾರಾಗಿದ್ದಿತು. ಗೋದಮ್ಮನಿಂದ ಅನಿಲನ ವಿಷಯವೆಲ್ಲವನ್ನೂ ತಿಳಿದುಕೊಂಡಿದ್ದ ಅವನೂ ಚಿರಪರಿಚಿತನಂತೆ ಮಾತನಾಡಿಸಿದ. ಹಿಂದಿನ ಬಾರಿ ಗಾಂಭೀರ್ಯದಿಂದ ನಡೆದುಕೊಂಡಿದ್ದ ಅನಿಲನನ್ನು ನೋಡಿ ಮಂಜುಳೆಯು ಮುಗುಳುನಗೆ ನಕ್ಕು ಸ್ವಾಗತವನ್ನು ಕೋರಿದಳು.

ಎಲ್ಲದಕ್ಕಿಂತಲೂ ಆ ಮುಗುಳು ನಗೆಯಿಂದ ಕೂಡಿದ ಸ್ವಾಗತವು ಅನಿಲನಿಗೆ ಮನೋಹ್ಲಾದಕರವಾಗಿ ಕಂಡಿತು.

ಅನಿಲನು "ಗೋದಕ್ಕ. ಹೋದ ಬಾರಿ ನಾನು ಬಂದಾಗ ಊಟಮಾಡಿಕೊಂಡು ಹೋಗುವುದಕ್ಕೆ ಹೇಳಿದೆ. ಈ ಬಾರಿ ಒಂದಲ್ಲ, ನಾಲ್ಕಾರು ಊಟಗಳನ್ನು ಮಾಡಿಕೊಂಡು ಹೋಗುವುದಕ್ಕೆ ಬಂದೆ" ಎಂದು ಹೇಳಿ, ಹಜಾರದಲ್ಲಿ ಹಾಕಿದ್ದ ಚಾಪೆಯ ಮೇಲೆ ಕುಳಿತುಕೊಂಡನು.

ಗೋದಮ್ಮನಿಗೆ ಉತ್ತರವನ್ನು ಹೇಳಲು ತೋರಲಿಲ್ಲ.

ಅವಳು "ನಿನ್ನ ಮನೆ. ನಾಲ್ಕೇಕೆ, ನಲವತ್ತು ಊಟಗಳನ್ನು ಮಾಡಪ್ಪ" ಎಂದಳು.

"ನೀನು ಮಾಡುವ ಅಡಿಗೆಯನ್ನು ಊಟ ಮಾಡುತ್ತಾ ಇಲ್ಲಿಯೇ ಇದ್ದುಬಿಟ್ಟರೆ ದೇವರೇ ಗತಿ''

ಗೋದಮ್ಮ ತಮ್ಮನ ಬಳಿ ಕುಳಿತುಕೊಂಡು "ಅಲ್ಲವೋ, ಹನುಮಂತು. ಹೋದ ಸಲ ಬಂದಾಗ ನನಗೆ ಹೇಳಲೇ ಇಲ್ಲವಲ್ಲೋ. ಪಕ್ಕದ ಮನೆಯ ಶಾರದಮ್ಮ ಬಂದು ನಿಮ್ಮ ತಮ್ಮ ಸಿನಿಮಾದಲ್ಲಿ ಪಾರ್ಟ್ ಮಾಡಿದ್ದಾನೆ ಯಲ್ರೀ—ಎಂದರು. ನನಗೆ ಗೊತ್ತೇ ಇರಲಿಲ್ಲ. ನಾನು ಪಾರ್ಟ್ ಮಾಡಿದ್ದೇನೆ ಎಂದು ಹೇಳಿದ್ದರೆ ನಾನು ಬೇಡವೆನ್ನುತ್ತಿದ್ದೆನೇ?" ಎಂದಳು.

"ಅದು ಸರಿ. ನೀನು ಸಿನಿಮಾ ನೋಡಿದೆಯೋ? "

"ತಮ್ಮ ಪಾರ್ಟ್ ಮಾಡಿದ್ದರೆ ಹೋಗಿ ನೋಡದಿರುತ್ತೇನೆಯೆ? ಮನೆಯವರೆಲ್ಲಾ ಹೋಗಿ ಆಗಲೇ ನೋಡಿಕೊಂಡು ಬಂದೆವು. ಮೊನ್ನೆ ಅದಾವುದೋ ತಮಿಳು ಚಿತ್ರದಲ್ಲಿ ಪಾರ್ಟ್ ಮಾಡಿದ್ದೆಯಲ್ಲಾ. ಅದಕ್ಕೂ ಹೋಗಿದ್ದೆವು.

"ಚೆನ್ನಾಗಿದ್ದಿತೇ, ಅಕ್ಕ?"

"ಚೆನ್ನಾಗಿತ್ತು, ಅಣ್ಣ. ಆದರೆ ಹನುಮಂತು ನೀನೇಕೆ, ವಿಷ್ಣು, ಈಶ್ವರ ಇಂತಹ ದೇವರುಗಳ ಪಾರ್ಟ್ ಹಾಕುವುದಿಲ್ಲ?"

ಆ ಮುಗ್ಧವಾದ ಮಾತನ್ನು ಕೇಳಿ ಅವನಿಗೆ ನಗು ಬಂದಿತು. ಅಚ್ಯುತನೂ ನಕ್ಕನು. ಬಾಗಿಲು ಸಂದಿಯಲ್ಲಿ ನಿಂತು ಮಂಜುಳೆಯು ನಕ್ಕಿದ್ದು ಸಹ ಅನಿಲನಿಗೆ ಕೇಳಿ ಬಂದಿತು.

ಅಚ್ಯುತನು "ಅವೆಲ್ಲಾ ಸಣ್ಣ ಪಾರ್ಟುಗಳಮ್ಮ. ಇವರು ಮಾಡುತ್ತಿರುವುದು ದೊಡ್ಡ ಪಾರ್ಟ್‌ಗಳು" ಎಂದನು.

ಗೋದಮ್ಮ ತನ್ನ ಪ್ರಶ್ನೆಗೆ ಅದು ಸರಿಯಾದ ಉತ್ತರವೆಂದು ಭಾವಿಸಲಿಲ್ಲ. ಎಲ್ಲರೂ ಅದನ್ನೇ ಹೇಳುತ್ತಿರುವುದರಿಂದ ಅದೇ ಸರಿಯೇನೋ ಎಂದುಕೊಂಡಳು. ಅವಳು ತಮ್ಮನನ್ನು ಕೇಳಬೇಕಾದ ಇನ್ನೂ ಒಂದು ಪ್ರಶ್ನೆಯಿತ್ತು.

"ಹೆಸರೂ ಬದಲಾಯಿಸಿದೆಯಂತಲ್ಲೋ. ಅದೇನೋ ಅನಿಲ ಅಂತಲೋ ಏನೋ?"

ಅನಿಲನು ನಗುತ್ತಾ "ಅದೇನು ಬದಲಾಯಿದಂತಲ್ಲ, ಅಕ್ಕ. ಅನಿಲ ಅಂದರೆ ಹನುಮಂತ–ಎಂದೇ" ಎಂದನು.

ಅಷ್ಟರಲ್ಲಿ ಮಂಗಳೆಯು ಕಾಫೀ ಮಾಡಿ, ಎರಡು ಲೋಟಗಳಲ್ಲಿ ತಂದು ಅನಿಲನಿಗೂ ತನ್ನ ಗಂಡನಿಗೂ ಕೊಟ್ಟಳು.

ಹಿಂದಿನಂತೆ ಅವಳು ಸಂಕೋಚ ಪಡಲಿಲ್ಲ.

ಅನಿಲನು "ಇಷ್ಟು ಹೊತ್ತಿನಲ್ಲಿ ಕಾಫಿಯೇಕೆ?" ಎಂದನು.

ಅವಳೇ "ತೆಗೆದುಕೊಳ್ಳಿ. ನಮ್ಮ ಮನೆಯಲ್ಲಿ ಊಟ ನಿದಾನ" ಎಂದಳು.

ಕಾಫಿಯನ್ನು ಕುಡಿದು ಅನಿಲನು ಹೊರಗಡೆ ಕಾರಿನ ಬಳಿಗೆ ಹೋದನು. ಮರ್ಯಾದೆಗಾಗಿ ಅಚ್ಯುತನೂ ಅನುಸರಿಸಿ ಹೋದನು.

ಸಣ್ಣ ಮನೆಯ ಮುಂದೆ ನಿಂತಿದ್ದ ದೊಡ್ಡ ಕಾರಿನ ಸುತ್ತಲೂ ಮಕ್ಕಳು ಸೇರಿ ಆಶ್ಚರ್ಯದಿಂದ ಆಗಾಗ ಮುಟ್ಟಿ ನೋಡುತ್ತಿದ್ದರು. ಅಕ್ಕಪಕ್ಕದ ಮನೆಗಳವರು ಬಾಗಿಲುಗಳಲ್ಲಿಯೇ ನಿಂತು ನೋಡುತ್ತಿದ್ದರು.

ಅನಿಲನು ಕಾರಿನ ಬಾಗಿಲು ತೆಗೆಯಲು ಧೈರ್ಯಶಾಲಿಯಾದ ಹುಡುಗನೊಬ್ಬನು ಬಂದು "ಫೀ–ಎನ್ನಿಸಿ" ಎಂದನು.

ತಾನು ಬಾಲ್ಯದಲ್ಲಿ ಹಾಗೆಯೇ ಹುಡುಗರೊಡನೆ ಕಾರಿಗೆ ಮುತ್ತಿಕೊಳ್ಳುತ್ತಿದ್ದುದು ಅನಿಲನಿಗೆ ನೆನಪು ಬಂದಿತು. ಹುಡುಗರಲ್ಲಿ ಹುಡುಗನಾಗಿ ಅವನು ಎಲೆಕ್ಟ್ರಿಕ್ ಹಾರ್ನ ಅದುಮಿ ಕಾರನ್ನು "ಫೀ" ಎಂದು ಕೂಗಿಸಿದನು.

ಹುಡುಗರು ಕಾರಿನೊಡನೆ ಕೂಗಿಕೊಂಡು ನಕ್ಕರು.

ಅನಿಲನು ಕಾರಿನಿಂದ ಹಾಸಿಗೆ, ಸೂಟುಕೇಸುಗಳನ್ನೂ ಬುಟ್ಟಿಗಳನ್ನೂ ತೆಗೆದು ಹೊರಗಿಟ್ಟು ಬೀಗ ಹಾಕಿದನು. ಸಾಮಾನುಗಳನ್ನು ತಾನೇ ಹೊತ್ತು ಒಳಗೆ ತರಲು ಉದ್ಯುಕ್ತನಾದನು. ಅಚ್ಯುತನು ಸಹಾಯಕ್ಕೆ ಹೋದನು.

"ನಿಮಗೆ ಮೈ ಚೆನ್ನಾಗಿಲ್ಲ, ಬೇಡ"

"ಇಲ್ಲ. ಹುಷಾರಾಗಿದ್ದೇನೆ"

"ನನ್ನ ಮಾತು ಕೇಳಿ. ನಿಮ್ಮ ಮನೆಯವನೇ ಆದ ನನಗೆ ಯಾಕೆ ಉಪಚಾರ?" ಎಂದು ತಾನೇ ಹೋಲ್ಡಾಲು ತೆಗೆದುಕೊಂಡನು. ನೋಡುತ್ತಿದ್ದ ಹುಡುಗರು ಬುಟ್ಟಿಗಳನ್ನೂ, ಟ್ರಂಕನ್ನೂ ತೆಗೆದುಕೊಂಡರು.

ಅಕ್ಕಪಕ್ಕದ ಮನೆಯ ಹೆಂಗಸರು ಮನೆಗೆ ಬಂದಾತನ ವಿಷಯ ವಿಚಾರಿಸಲು ಅಷ್ಟು ಹೊತ್ತಿಗಾಗಲೇ ಬಂದಿದ್ದರು. ಗಂಡಸರಿಬ್ಬರೂ ಬರಲು ಅವರು ಬೇಗ ಬೇಗನೆ ಹೊರಗೆ ಹೊರಟು ಹೋದರು.

ಅನಿಲನೇ ಹೊತ್ತು ತರುತ್ತಿದ್ದುದನ್ನು ನೋಡಿ, ತಾನು ತೆಗೆದುಕೊಳ್ಳಲು ಮುಂದೆ ಬಂದು, ಹಿಂಜರಿದು ನಿಂತು, ಮಂಜುಳೆಯು "ಅಪರೂಪ

ವಾಗಿ ಬಂದ ಭಾವನವರಿಂದಲೇ ಕೆಲಸ ಮಾಡಿಸುತ್ತಿದ್ದೀರಲ್ಲ" ಎಂದು ಗಂಡನನ್ನು ಕೇಳಿದಳು.

"ನಾನು ಹೇಳಿದೆ. ಅವರು ಕೇಳುವುದಿಲ್ಲ"

"ಅವರೇ ಬಾಯಿಬಿಟ್ಟು ಹೇಳುತ್ತಾರೆಯೆ?"

ಅನಿಲನು ಹಾಸಿಗೆಯನ್ನು ತೆಗೆದುಕೊಂಡು ಬಂದನು. ಹುಡುಗರೂ ಸಾಮಾನುಗಳನ್ನು ಒಳಗೆ ತಂದಿಟ್ಟರು.

ತನ್ನ ಟ್ರಂಕು, ಬುಟ್ಟಿಗಳನ್ನು ಹೊತ್ತು ತಂದ ಹುಡುಗರಿಗೆ ಏನಾದರೂ ಕೊಡಬೇಕೆಂದು ಅನಿಲನಿಗೆ ತೋರಿತು. ಪಪ್ಪರಮೆಂಟ್, ಚಾಕಲೇಟುಗಳನ್ನು ಕೊಟ್ಟರೆ ಚೆನ್ನಾಗಿರುತ್ತದೆ. ಆದರೆ ಅವುಗಳನ್ನು ಯಾರಿಗೂ ತೆಗೆದುಕೊಂಡು ಹೋಗಿ ಕೊಟ್ಟು ಅವನಿಗೆ ಅಭ್ಯಾಸವಿಲ್ಲ. ಆದರಿಂದ ಅವು ಪೆಟ್ಟಿಗೆಯಲ್ಲಿರುವ ಸಂಭವವೂ ಇಲ್ಲ.

ಏನಾದರೂ ಕೊಡಲೇಬೇಕೆಂದು ತೋರಿ, ಬುಟ್ಟಿಯೊಂದನ್ನು ಬಿಚ್ಚಿ, ಅಂಜೂರ, ಚಪ್ಪರ ದ್ರಾಕ್ಷಿಗಳನ್ನು ತೆಗೆದು ಅಲ್ಲಿದ್ದ ಹುಡುಗರಿಗೆಲ್ಲಾ ಕೊಟ್ಟನು.

ಹುಡುಗರು ಹೊರಟು ಹೋದನಂತರ ಅನಿಲನೂ ಅಚ್ಯುತನೂ ಹಜಾರದ ಚಾಪೆಯ ಮೇಲೆ ಕುಳಿತು ಮಾತನಾಡತೊಡಗಿದರು.

ಅನಿಲನು ಬಂದಿಳಿದುದು ಆ ಮನೆಯವರಿಗೆ ಹಬ್ಬವೇ ಹುಟ್ಟಿ ಬಂದ ಹಾಗಾಗಿತ್ತು. ಗೋದಮ್ಮನೂ ಮಂಜುಳೆಯೂ ಒಳಗೆ ಹೋಗಿ ಪಿಸಪಿಸನೆ ಮಾತನಾಡಿಕೊಂಡರು. ಗೋದಮ್ಮನು ಅಡಿಗೆಗಾಗಿ ಸ್ನಾನಕ್ಕೆ ಹೋದರು. ಮಂಜುಳೆಯು ಬ್ಯಾಗ್ ತೆಗೆದುಕೊಂಡು ಹೊರಗೆ ಹೋದಳು.

ಸ್ವಲ್ಪ ಹೊತ್ತಿನಲ್ಲಿಯೇ ಅನಿಲನೂ ಅಚ್ಯುತನೂ ಹಳೆಯ ಸ್ನೇಹಿತರಂತಾದರು.

" ನಿಮಗೆ ತೊಂದರೆಯಾಗದಿದ್ದರೆ ಸ್ವಲ್ಪ ಹೊರಗೆ ಹೋಗಿ ಬರೋಣ ಬನ್ನಿ "

" ನನಗೆ ತೊಂದರೆ ಏನು, ಏಳಿ "

ಅಚ್ಯುತನು ನಡುಮನೆಯ ಬಾಗಿಲಿನಲ್ಲಿ ನಿಂತು "ಹೀಗೇ ಸ್ವಲ್ಪ ಸುತ್ತಾಡಿಕೊಂಡು ಬರುತ್ತೇವೆ" ಎಂದನು.

ಗೋದಮ್ಮ "ಬೇಗ ಬಂದು ಬಿಡೀಪ್ಪ. ಎಂಟು ಗಂಟೆಗೆಲ್ಲಾ ಅಡಿಗೆ ಯಾಗುತ್ತದೆ" ಎಂದು ಒಳಗಿನಿಂದಲೇ ಕೂಗಿ ಹೇಳಿದಳು.

ಅನಂತರ ಏನೋ ನೆನೆಸಿಕೊಂಡು ಬಂದು "ಸ್ವೆಟರ್ ಹಾಕಿಕೊಂಡು ಹೋಗು, ಅಚ್ಚು, " ಎಂದಳು.

ಅಷ್ಟು ಹೊತ್ತಿಗಾಗಲೇ ಅಚ್ಚುವು ಸ್ವೆಟರ್ ಹಾಕಿಕೊಂಡು, ಅನಿಲ ನೊಡನೆ ಹೊರಡಲು ಅನುವಾಗಿದ್ದನು.

ಅಚ್ಯುತನನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಕಾರು ಸ್ಟಾರ್ಟ್ ಮಾಡಿದನು.

ಮೈಸೂರು ರೋಡಿನಲ್ಲಿ ಕಾರನ್ನು ನಿಧಾನವಾಗಿ ಬಿಡುತ್ತಾ ಸಿಗ ರೇಟ್ ಟಿನ್ ತೆಗೆದು ತಾನೊಂದು ಹಚ್ಚಿಕೊಂಡು ಟಿನ್ ಅಚ್ಚುತನ ಕೈಗೆ ಕೊಟ್ಟನು.

ಅವನದನ್ನು ಸುಮ್ಮನೆ ಕೈಯಲ್ಲಿ ಹಿಡಿದು ಕೊಂಡನು ಹಚ್ಚಿಕೊಳ್ಳಲಿಲ್ಲ.

"ನೀವೇಕೆ ಸಿಗರೇಟ್ ಹಚ್ಚಿಕೊಳ್ಳಲಿಲ್ಲ?"

"ಅಭ್ಯಾಸವಿಲ್ಲ"

"ಮಾಡಿಕೊಂಡರಾಯಿತು"

"ಇಷ್ಟು ದಿನ ಇಲ್ಲ. ಈಗ ಹೊಸದಾಗಿ ಯಾಕೆ?"

"ನಾನು ಸಿಗರೇಟು ಸೇದುವುದಕ್ಕಾಗಿಯೇ ಹೊರಗಡೆ ಬಂದದ್ದು"

ಸಿಗರೇಟ್ ಸೇದುವುದಕ್ಕೆ! ಅದಕ್ಕಾಗಿ ಗ್ಯಾಲನ್‌ಗೆ ಹದಿನೆಂಟು ಮೈಲಿ ಕೊಡುವ ಕಾರನ್ನು ತೆಗೆದುಕೊಂಡು ಹೊರಟಿದ್ದಾನೆ. ಅಲ್ಲೇ ಎಲ್ಲಿಯಾದರೂ ನಿಂತು ಸೇದಿಕೊಂಡು ಮನೆಗೆ ಹೋಗಿದ್ದರಾಗುತ್ತಿರಲಿಲ್ಲವೆ? ಕಾರೇಕೆ ತರ ಬೇಕಿತ್ತು—ಎಂದು ಅಚ್ಚುತನ ಮನಸ್ಸಿಗೆ ಬಂದಿತು.

ಮನಸ್ಸಿಗೆ ಬಂದ ಭಾವದ ಬಹು ಭಾಗವನ್ನು ಮುಚ್ಚಿಕೊಂಡು "ಮನೆಯಲ್ಲಿಯೇ ಸೇದಬಹುದಾಗಿತ್ತು" ಎಂದನು.

ಮನೆಯಲ್ಲಿ ಸಿಗರೇಟು ಸೇದಿದರೆ ಗೋದಮ್ಮನಿಗೆ ಅಸಮಾಧಾನವಾ ಗುತ್ತದೆಂದು ಅಚ್ಚುತನಿಗೆ ಗೊತ್ತಿತ್ತು. ಮುಂದಗೆರೆಯಲ್ಲಿ ಕದ್ದು ಬೀಡೀ ಸಿಗರೇಟು ಸೇದುತ್ತಿದ್ದವನು ಆಕೆಗೆ ಅಸಮಾಧಾನವಾಗುತ್ತದೆಂದೇ ಬಿಟ್ಟು ಬಿಟ್ಟಿದ್ದನು. ಆದರೂ ಗೌರವಕ್ಕಾಗಿ ಆ ಮಾತು ಹೇಳಿದ್ದನು.

"ಅಷ್ಟೇ, ನಿಮಗೇನು ಹೇಳಿ. ಅಲ್ಲಿ ಸಿಗರೇಟು ಹಚ್ಚಿದ್ದರೆ ಗೋದಕ್ಕ ಮನೆಯಿಂದ ಹೊರಗಡೆ ಹಾಕುತ್ತಿದ್ದಳು"

ಅಚ್ಯುತ ಅದಕ್ಕೆ ಉತ್ತರವಾಗಿ ನಕ್ಕನು.

ಅನಿಲನು ಮೇಲಿಂದ ಮೇಲೆ ಸಿಗರೇಟು ಸೇದುತ್ತಲೇ ಇದ್ದನು.

ಕಾರು ಮೈಸೂರು ಕಡೆಗೆ ವೇಗವಾಗಿ ಹೋಗುತ್ತಿತ್ತು.

ಅಚ್ಯುತನು "ನಾವೆಲ್ಲಿಗೆ ಹೋಗುತ್ತಿದ್ದೇವೆ" ಎಂದನು.

"ಶ್ರೀರಂಗಪಟ್ಟಣದವರೆವಿಗೆ ಹೋಗಿ ಬರೋಣವೆಂದಿದ್ದೇನೆ"

"ಹೋಗಲೇ ಬೇಕೇನು ?"

"ಯಾಕೆ ಹೋಗಬಾರದು! ಹಾಗೇ ಹೋಗಿ ಒಂದು ಗಳಿಗೆ ಕಾವೇರಿ ತೀರದಲ್ಲಿ ಕುಳಿತಿದ್ದು ಬರೋಣ. ಗೋದಕ್ಕನ ಅಡಿಗೆ ಮುಗಿಯಲು ಇನ್ನೂ ಹೊತ್ತಾಗುತ್ತದೆ."

ಅನಿಲ ಯಾವಾಗಲೂ ಶ್ರೀರಂಗಪಟ್ಟಣದ ದರಿಯಾ ದವಲತ್ ನೋಡಿರಲಿಲ್ಲ. ನೋಡಿಕೊಂಡು ಬರೋಣವೆಂದು ಹೊರಟಿದ್ದನು.

ಹೋಗುತ್ತ ಹೋಗುತ್ತಾ ಅವರುಗಳು ಮಾತನಾಡ ತೊಡಗಿದರು. ಅವರುಗಳ ಮಾತಿಗೆ ಕೊನೆ ಮೊದಲುಗಳಿದ್ದಂತೆ ಕಂಡು ಬರಲಿಲ್ಲ.

ಅಚ್ಯುತ ತನಗೆ ಚಿಕ್ಕಂದಿನಲ್ಲಿಯೇ ತಾಯಿತಂದೆಗಳು ತೀರಿಕೊಂಡುದು, ಮಂದಗೆರೆಯಲ್ಲಿ ಸೋದರ ಮಾವನ ಮನೆಯಲ್ಲಿ ಬೆಳೆದುದೂ, ಅಲ್ಲಿಯೇ ಲಾರಿಯವನಿಂದ ಮೋಟಾರು ಕೆಲಸವನ್ನು ಕಲಿತುದು ಎಲ್ಲವನ್ನೂ ಹೇಳಿದನು. ರಾಘವೇಂದ್ರ ರಾಯರಿಗೆ ಕಾಯಿಲೆ ಬಂದುದೂ, ಗೋದಕ್ಕ ತನ್ನನ್ನು ಕರೆಸಿದುದು, ಅನಿಲನ ತಂದೆ ಕಡೆಗಾಲದಲ್ಲಿ ಮಗನನ್ನು ನೆನೆದುಕೊಳ್ಳುತ್ತಿದ್ದುದು, ಅವರ ಸಾವೂ, ಸಂಸ್ಕಾರ ಮುಂತಾದುವನ್ನು ಕತೆ ಕತೆಯಾಗಿ ತಿಳಿಸಿದ.

ಅನಿಲ ಮಂಜುಳೆಯ ಮದುವೆಯ ವಿಷಯವನ್ನು ಸೂಕ್ಷ್ಮವಾಗಿ ಕೇಳಿ ತಿಳಿದುಕೊಂಡನು.

ಅದನ್ನು ಕೇಳಿ ಅಚ್ಯುತ ಕಬ್ಬಿನ ಬೆಳೆಯ ಲಾಭ, ಸಣ್ಣ ಪುಟ್ಟ ರೈತರೆಲ್ಲಾ ಚೆನ್ನಾಗಿ ದುಡ್ಡು ಮಾಡಿಕೊಂಡಿರುವುದು ಮುಂತಾದುವನ್ನೆಲ್ಲಾ ಮಾತನಾಡಿದ.

ಆ ಮಾತುಗಳನ್ನು ಆಡುತ್ತಿದ್ದಂತೆಯೇ ಕಾರು ದರಿಯಾದವಲತ್‌ನ ಬಳಿಗೆ ಬಂದಿತು. ಇಬ್ಬರೂ ಕಾರಿನಿಂದ ಇಳಿದು ಉದ್ಯಾನದಲ್ಲಿ ನಡೆದು ಕೊಂಡು ಹೋದರು. ಹಿಂದುಗಡೆ ಕಾವೇರಿಯ ಪಾವಟಿಗೆಗಳ ಮೇಲೆ ಹೋಗಿ ನಿಂತರು.

ಅನಿಲನು ಕೆಳಗಿಳಿದು ಕಾಲುಗಳನ್ನು ನೀರಿನಲ್ಲಿಟ್ಟುಕೊಂಡು ಕಡೆಯ ಮೆಟ್ಟಲಿನ ಮೇಲೆ ಕುಳಿತುಕೊಂಡನು.

ಸುಮಾರು ಎರಡು ಮೂರು ನಿಮಿಷಗಳ ಕಾಲ ಇಬ್ಬರೂ ಮೌನವಾಗಿ ಕುಳಿತ್ತಿದ್ದರು

ಅಚ್ಯುತನು ಟಿನ್ ತೆಗೆದು ನಾಲ್ಕೈದು ಸಿಗರೇಟುಗಳು ಮಾತ್ರವಿರುವು ದನ್ನು ನೋಡಿ "ನಿಮಗೆ ಸಿಗರೇಟು ಬೇಕಾದರೆ ಬೇಗ ಹೋಗಬೇಕು. ನಮ್ಮೂರಿನಲ್ಲಿ ಈ ಸಿಗರೇಟ್ ಸಿಗುವುದು ಒಂದೆರಡು ಅಂಗಡಿಗಳಲ್ಲಿ ಮಾತ್ರ. ಅವರು ಬಾಗಿಲು ಹಾಕಿಬಿಡಬಹುದು" ಎಂದನು.

"ಅದಕ್ಕೆಲ್ಲಾ ಯೋಚಿಸಬೇಡಿ, ಅಚ್ಯುತ್. ಸೂಟ್ ಕೇಸಿನಲ್ಲಿ ಇನ್ನೂ ಎರಡು ಮೂರು ಟಿನ್‌ಗಳಿರಬಹುದು "

ಅಚ್ಯುತ ಅನಿಲನ ವಿಷಯ ವಿಚಾರಿಸಿದ. ಮದರಾಸಿನ ಸ್ಟುಡಿಯೋ ಗಳು, ಚಿತ್ರನಿರ್ಮಾಣ ಮುಂತಾದುವುಗಳನ್ನು ಕೇಳಿ ತಿಳಿದುಕೊಂಡ.

ಎಷ್ಟು ಹೊತ್ತು ನದೀ ತೀರದಲ್ಲಿ ಕುಳಿತಿದ್ದರೂ ಅನಿಲನಿಗೆ ಸಾಕೆನ್ನಿ ಸಲಿಲ್ಲ. ಆದರೆ ಹೊತ್ತಾಗುತ್ತ ಬಂದಿತು. ಆದರಿಂದ ಮೇಲೆದ್ದು ಹೋಟ.

ಅವರಿಬ್ಬರೂ ಮನೆಗೆ ಬರುವ ವೇಳೆಗೆ ಎಂಟೂವರೆಯ ಮೇಲಾಗಿತ್ತು.

ಗೋದಕ್ಕ ಎಂಟು ಗಂಟೆಗೇ ಅಡಿಗೆಯಾಗುತ್ತದೆಂದು ಹೇಳಿದ್ದರೂ ಇನ್ನೂ ಅಡಿಗೆಯಾಗಿರಲಿಲ್ಲ.

ಒಂಭತ್ತು ಗಂಟೆಯ ವೇಳೆಗೆ ಮಂಜುಳ ಬಾಗಿಲಿನ ಬಳಿ ಬಂದು ನಿಂತು "ಎದ್ದು ಕೈಕಾಲು ತೊಳೆದು ಕೊಳ್ಳಿ" ಎಂದು ಹೇಳಿದರು.

ಅಚ್ಯುತ ಲಾಟೀನು ಕೈಗೆ ತೆಗೆದುಕೊಂಡು ಅನಿಲಗೆ ಬಚ್ಚಲು ಮನೆ ಯನ್ನು ತೋರಿಸಿದನು. ಅದನ್ನು ನೋಡಿದರೆ ಅದು ಬಡವರ ಮನೆಯ ಸ್ನಾನ ಗೃಹವೆಂದು ಗೊತ್ತಾಗುವಂತಿದ್ದರೂ ಬಹಳ ಅಚ್ಚುಗಟ್ಟಾಗಿದ್ದಿತು.

ನೀರು ತುಂಬಿಟ್ಟಿದ್ದ ಒತ್ತಾಳೆಯ ಕೊಳತಪ್ಪಲೆ, ತಾಂಬ್ರದ ಹಂಡೆ, ನೀರು ಮೊಗೆಯುವ ಬೋಸಿ ಇವುಗಳು ಫಳಫಳನೆ ಹೊಳೆಯುತ್ತಿದ್ದವು.

ಮುಖ ಕೈಕಾಲು ತೊಳೆದುಕೊಂಡು ಹೊರಗೆ ಬಂದವನಿಗೆ ಅಚ್ಯುತ ಶುಭ್ರವಾದ ಟವಲ್ ಕೊಟ್ಟ. ಅಚ್ಯುತ ಬರುವವರೆವಿಗೆ ಕಾದಿದ್ದು ಅವನೊಡನೆ ಅನಿಲ ನಡುಮನೆಗೆ ಬಂದ.

ಅಲ್ಲೊಂದು ಮೂಲೆಯಲ್ಲಿ ಅನಿಲನ ಅಪ್ಪನ ಕಾಲದ ತಿರುಪತಿ ವೆಂಕಟರಮಣ ಸ್ವಾಮಿಯ ದೊಡ್ಡದೊಂದು ಹಳೆಯ ಪಟವನ್ನು ಭೂಮಿಯಿಂದ ಒಂದು ಒಂದೂವರೆ ಗೇಣಿನ ಎತ್ತರದಲ್ಲಿ ಹೊಡೆಯಲಾಗಿತ್ತು. ಅದರ ಪಕ್ಕದಲ್ಲಿ ರಾಘವೇಂದ್ರಸ್ವಾಮಿಗಳ ಬೃಂದಾವನದ ಭಾವಚಿತ್ರ. ಮತ್ತೊಂದು ಕಡೆ ಯಾರೋ ಸ್ವಾಮಿಗಳ ಚಿತ್ರ. ಅವುಗಳ ಕೆಳಗೆ ಅಗಲವಾದ ಸಣ್ಣ ಕಾಲುಮಣೆಯ ಮೇಲೆ ದೇವರುಗಳು. ಅವೆಲ್ಲಾ ವಿವಿಧ ಪುಷ್ಪಗಳಿಂದ ಮುಚ್ಚಿ ಹೋಗಿವೆ. ಕೆಳಗೆ ಪುಟ್ಟ ಮಣೆಯ ಮೇಲೆ ತಾಂಬ್ರದ ತಟ್ಟೆ. ತಾಲಿ. ಪಂಚಪಾತ್ರೆ ಉದ್ಧರಣೆಗಳು, ಒತ್ತಾಳೆಯ ಮಂಗಳಾರತೀ ಸಲಗೆ, ಕಂಚಿನ ಗಂಟೆಗಳು. ಪಕ್ಕದಲ್ಲಿ ಉದ್ದನಾದ ಕಂಭ. ಅದರಲ್ಲಿ ನಂದಾದೀಪ.

ಇತ್ತ ಕಡೆ ಪ್ರಶಸ್ತ್ಯವಾದ ಎಡೆಯಲ್ಲಿ ಎರಡು ಮಣೆಗಳನ್ನು ಹಾಕಿ, ತಾಂಬ್ರದ ಪಂಚಪಾತ್ರೆ ಉದ್ಧರಣೆಗಳನ್ನೂ, ಅರ್ಘ್ಯಪಾತ್ರೆಗಳನ್ನೂ ಇಟ್ಟು ಸಂಧ್ಯಾವಂದನೆಗೆ ಇಡಲಾಗಿತ್ತು. ಒಳಗೆ ಬರುವ ಅಚ್ಯುತ ಷರಟು ಬಿಚ್ಚಿ ಚೌಕ ಹೊದ್ದುಕೊಂಡು ಬಂದಿದ್ದ. ಆಗ ಅನಿಲನಿಗೆ ಜ್ಞಾನೋದಯವಾದಂತಾಗಿ ತಾನೂ ಈ ಮನೆಯಲ್ಲಿ ಸಂಧ್ಯಾವಂದನೆಯನ್ನು ಮಾಡಬೇಕೆಂದು ಅರ್ಥಮಾಡಿಕೊಂಡು.

ಷರ್ಟು ತೆಗೆದು ಬಾಗಿಲಿನ ಮೇಲೆ ಹಾಕಿದಾಗ ತಟ್ಟನೆ ತನಗೆ ಜನಿವಾರವಿಲ್ಲವೆಂಬುದು ಜ್ಞಾಪಕಕ್ಕೆ ಬಂದಿತು. ವಿರಾಮ ಹೋಟಲಿನಲ್ಲಿ ಒಂದು ದಿನ ಸ್ನಾನಮಾಡುವಾಗ ಅದು ಕಿತ್ತುಹೋಗಿತ್ತು. ಅನಂತರ ಅದನ್ನು ಹಾಕಿಕೊಳ್ಳುವ ಆವಶ್ಯಕತೆಯು ಅವನಿಗೆ ಬಂದಿರಲಿಲ್ಲ. ಈಗ ಬಂದಿದೆ.

ಕೂಡಲೇ ಜನಿವಾರವಿಲ್ಲದಿರುವುದು ಯಾರಿಗೂ ತಿಳಿಯದಂತೆ ಚೌಕವನ್ನು ಹೆಗಲ ಮೇಲೆ ಹಾಕಿಕೊಂಡು ಕೂನೆಗಳನ್ನು ಪಂಚೆಗೆ ಸಿಕ್ಕಿಸಿಕೊಂಡ.

ಅಚ್ಯುತ ಸಂಧ್ಯಾವಂದನೆಯನ್ನು ಮೊದಲು ಮಾಡಿದ್ದ. ಅನಿಲನೂ ಹೋಗಿ ಕುಳಿತುಕೊಂಡ. ಅನಿಲನಿಗೆ ಮಂತ್ರತಂತ್ರಗಳೆಲ್ಲವೂ ಮರೆತು ಹೋಗಿದ್ದವು. ಅಚ್ಯುತ ಮಾಡಿದಂತೆಲ್ಲಾ ಮಾಡುತ್ತಿದ್ದ.

ಗೋದಮ್ಮ ತಮ್ಮ ಸಂಧ್ಯಾವಂದನೆ ಮಾಡುತ್ತಿದ್ದಾನೆಯೋ ಇಲ್ಲವೋ ನೋಡಿಕೊಂಡು ಒಳಗೆ ಹೊರಟು ಹೋದರು. ಇಲ್ಲದಿದ್ದರೆ ತಮ್ಮನು ಸಂಧ್ಯಾವಂದನೆ ಬಿಟ್ಟು, ವರ್ಷಗಳಾಗಿವೆ ಎಂದೂ, ಅವನು ಮಾಡುತ್ತಿರುವುದು ಬರಿಯ ನಟನೆ ..ಮೂ ಅವರಿಗೆ ಸುಲಭವಾಗಿ ಗೊತ್ತಾಗುತ್ತಿದ್ದಿತು.

ಆ ಶಾಸ್ತ್ರವಾದನಂತರ ಅಚ್ಯುತ ಅವುಗಳನ್ನೆಲ್ಲಾ ತೆಗೆದಿಟ್ಟ. ಮಂಜುಳೆಯು ಲ್ಯಾಂಪನ್ನು ಸ್ವಲ್ಪ ಹತ್ತಿರವಾಗಿ ತಂದಿಟ್ಟು, ಎರಡು ದೊಡ್ಡ ಬಾಳೆಯ ಎಲೆಗಳನ್ನು ಹಾಕಿದಳು. ಎರಡು ಬೆಳ್ಳಿಯ ಲೋಟಾಗಳಲ್ಲಿ ನೀರಿಟ್ಟು, ಪಕ್ಕದಲ್ಲಿ ಚೊಂಬಿಟ್ಟಳು. ಕಲ್ಲಿನ ಮರಗೆಯಲ್ಲಿ ಉಪ್ಪಿನ ಪುಡಿಯನ್ನು ತಂದು ಬಡಿಸಿದಳು.

ಗೋದಮ್ಮ ನಿಂಬೇಕಾಯಿ ಉಪ್ಪಿನ ಕಾಯಿ, ಸಂಡಿಗೆ, ಆಲೂಗಡ್ಡೆಯ ಉಪ್ಪೇರಿಗಳನ್ನು ಹಾಕಿದರು. ಟೋಮೆಟೋ ಬಜ್ಜಿಯನ್ನೂ ಕೋಸು ಪಲ್ಯವನ್ನೂ ಬಡಿಸಿ, ಅನ್ನವನ್ನು ತಂದರು. ಮಂಜುಳೆಯು ಎರಡೆರಡು ಮಿಳ್ಳೆ ತುಪ್ಪವನ್ನು ಹಾಕಿದಳು. ಅನಂತರ ಕ್ಯಾರೆಟ್‌ನ ಹುಳಿ, ತಿಳಿಸಾರುಗಳು ಬಂದುವು.

ಊಟವು ಸಾಧಾರಣವಾಗಿದ್ದರೂ ಅದು ಅನಿಲಗೆ ಎಷ್ಟೋ ರುಚಿಯಾಗಿ ಕಂಡಿತು. ಮಂಡ್ಯದ ನೀರು ಸಹ ಮದರಾಸಿನ ನೀರಿಗಿಂತ ಪ್ರಿಯವಾಗಿತ್ತು.

" ಗೋದಕ್ಕ. ದಿನವೂ ನಿನ್ನ ಕೈಯಿನ ಅಡಿಗೆಯನ್ನೇ ಊಟಮಾಡಬೇಕೆನ್ನಿಸುತ್ತದೆ. "

" ಅದಕ್ಕೇನು ಭಾಗ್ಯ ? ನಾನು ಹೇಳಿದಂತೆ ಇಲ್ಲೇ ಇದ್ದುಬಿಡು. ನನಗೂ ತಮ್ಮನು ಮನೆಗೆ ಬಂದಹಾಗೆ ಹಾಗಾಗುತ್ತದೆ. "

" ನನಗೀಗ ಕೆಲಸವಾಗಿದೆ. ಇಲ್ಲಿದ್ದರೆ ಹೇಗಾಗುತ್ತದಕ್ಕ. "

ಗೋದಮ್ಮ ನಗುತ್ತಾ "ಹಾಗಾದರೆ ನನ್ನನ್ನೂ ಮದರಾಸಿಗೆ ಕರೆದು ಕೊಂಡು ಹೋಗು. ದಿನವೂ ಅಡಿಗೆಮಾಡಿ ಹಾಕುತ್ತೇನೆ" ಎಂದಳು.

ತಾನು ಬಂದ ವಿಷಯವನ್ನು ಈಗಲೇ ಪ್ರಸ್ತಾಪಿಸೋಣವೆಂದುಕೊಂಡ. ಆಗ ಗೋದಮ್ಮ ಮಜ್ಜಿಗೆಗೆ ಅನ್ನ ತರುವುದರಲ್ಲಿದ್ದಳು. ಮಾತು ಪೂರಾ ಆಗುವುದಿಲ್ಲವೆಂದು ತಡೆದುಕೊಂಡ.

"ನೀನು ಬರುವುದಾದರೆ ಖಂಡಿತವಾಗಿ ಕರೆದುಕೊಂಡು ಹೋಗುತ್ತೇನೆ"

ಅವನದಕ್ಕಾಗಿಯೇ ಬಂದಿದ್ದರೂ ಯಾರೂ ಆ ಮಾತು ವಾಸ್ತವವೆಂದು ಕೊಳ್ಳಲಿಲ್ಲ. ಆದರೂ ತಮ್ಮನ ಬಾಯಿಂದ ಆ ಮಾತು ಬಂದುದು ಅಕ್ಕನಿಗೆ ಎಷ್ಟೋ ಸಂತೋಷವಾಯಿತು.

ಅನ್ನ ಬಡಿಸಿದನಂತರ ಮಂಜುಳೆಯು ಹಾಲು ಹಾಕಿ, ಮಜ್ಜಿಗೆಯನ್ನು ತಂದಳು.

ಮಜ್ಜಿಗೆ ನೀರಾಗಿದ್ದಿತು.

ಗಂಡಸರಿಬ್ಬರೂ ಎದ್ದು ಕೈ ತೊಳೆದುಕೊಂಡು ಬರುವ ವೇಳೆಗೆ ಮಂಜುಳೆಯು ಚಾಪೆಯಮೇಲೆ ಅಡಿಕೆ,ಎಲೆ, ಸುಣ್ಣಗಳನ್ನು ತಟ್ಟೆಯಲ್ಲಿಟ್ಟು ನಡುಮನೆಯಲ್ಲಿದ್ದ ಲ್ಯಾಂಪ್ ತಂದಿಟ್ಟಿದ್ದಳು.

ಅನಿಲ ತಾಂಬೂಲವನ್ನು ತೆಗೆದುಕೊಳ್ಳಲಿ ಎಂದು ಅಚ್ಯುತ ಗಳಿಗೆಯ ಹೊತ್ತು ಸುಮ್ಮನಿದ್ದನು.

"ತಾಂಬೂಲ ತೆಗೆದುಕೊಳ್ಳಿ"

ಅನಿಲನಿಗೆ ಮದುವೆ ಇಲ್ಲದ ತಾನು ತಾಂಬೂಲ ಹಾಕಿಕೊಂಡರೆ ಅಕ್ಕನೇನೆನ್ನುವಳೋ ಎಂದು ಸಂಕೋಚವಾಗಿತ್ತು.

ಅವನು ನಗುತ್ತಾ "ಇದು ನನಗೆ ಅಭ್ಯಾಸವಿಲ್ಲ" ಎಂದು ಹೇಳಿ, ಬಣ್ಣ ಕಟ್ಟಿದ ಅಡಿಕೆಯನ್ನು ಮಾತ್ರ ಸ್ವಲ್ಪ ತೆಗೆದು ಬಾಯಲ್ಲಿ ಹಾಕಿಕೊಂಡನು.

ಅಚ್ಯುತನು ಅವನ ಮಾತು ಕೇಳಿ ನಕ್ಕನು.

ಮಂಜುಳೆಯ ಊಟ, ಗೋದಮ್ಮನ ಫಲಹಾರಗಳಾಗಿ ಅವರು ಮನೆ ಗೆಲಸಗಳನ್ನು ಮುಗಿಸಿಕೊಂಡು ಬರಲು ಹತ್ತೂಕಾಲು ಗಂಟೆಯಾಯಿತು.

ಗೋದಮ್ಮ ಹಜಾರದಲ್ಲಿ ಒಂದು ಕಡೆ ಗೋಡೆಯೊರಗಿಕೊಂಡು ಕುಳಿ

ತುಕೊಂಡಳು. ಅನಿಲ ಮಂಜುಳೆ ಎಲ್ಲಿ ಎಂದು ನೋಡಿದನು. ಕಂಡು ಬರಲಿಲ್ಲ. ಅಡಿಗೆಯ ಮನೆ ನಡುಮನೆಗಳಲ್ಲಿ ದೀಪವಿದ್ದಂತೆ ಕಾಣಲಿಲ್ಲ. ಅವಳೆಲ್ಲಿಯೋ ಒಳಗಡೆ ಇದ್ದು ಮಾತು ಕೇಳುತ್ತಿರಬಹುದೆಂದುಕೊಂಡನು.

ಅಕ್ಕ ತಮ್ಮನನ್ನು ಮದರಾಸಿನ ಕೆಲಸ, ಸಂಬಳ, ಇರುವ ಜಾಗ, ಊಟ ತಿಂಡಿಯ ಏರ್ಪಾಟು ಮುಂತಾದ ವಿಷಯವೆಲ್ಲವನ್ನೂ ಕೇಳಿದಳು.

ಒಮ್ಮೆಗೇ ತನ್ನ ವಿಷಯವನ್ನು ಹೇಳುವುದು ಅನಿಲನಿಗೆ ಸೂಕ್ತವಾಗಿ ಕಂಡು ಬರಲಿಲ್ಲ.

ಆದರಿಂದ "ನನ್ನ ಕೆಲಸ ನಿನಗೆ ಗೊತ್ತೇ ಇದೆಯಲ್ಲಕ್ಕ. ತಿಂಗಳಿಗೆ ಇನ್ನೂರ ಐವತ್ತು, ಮುನ್ನೂರು ರೂಪಾಯಿ ಬರುತ್ತದೆ. ಹಣ ಕೂಡಿಟ್ಟು ಇತ್ತೀಚೆಗೆ ಒಂದು ಮನೆಯನ್ನು ಮಾಡಿಕೊಂಡಿದ್ದೇನೆ. ಕಾರು ನಾನು ಕೆಲಸ ಮಾಡುತ್ತಿರುವ ಕಂಪನಿಯವರದು" ಎಂದನು.

"ಮನೆ ಕಟ್ಟಿದ್ದೀಯಾ, ಹನುಮಂತು. ಚೆನ್ನಾಗಿದೆಯೇ? ತಾರಸಿಯೋ, ಹೆಂಚೋ?"

"ತಾರಸೀ ಹೆಂಚು ಎರಡೂ ಸೇರಿಸಿ ಕಟ್ಟಿಸಿದ್ದೇನೆ. ಮನೆ ತೋರಿಸಲು ನಿನ್ನನ್ನು ಮದರಾಸಿಗೆ ಕರೆದುಕೊಂಡು ಹೋಗೋಣವೆಂದೇ ಬಂದೆ"

"ಅಪ್ಪ ನೀನು ಕೆಲಸಕ್ಕೆ ಬಾರದವನೆನ್ನುತ್ತಿದ್ದ. ಅದೇ ಕೊರಗಿನಲ್ಲಿ ಸತ್ತುಹೋದ. ನೀನಿಷ್ಟು ಬುದ್ಧಿವಂತನಾಗಿ ಮನೆ ಮಠ ಮಾಡಿಕೊಂಡಿರುವುದನ್ನು ಕೇಳಿದ್ದರೆ ಎಷ್ಟು ಸಂತೋಷ ಪಡುತ್ತಿದ್ದನೋ?"

"ಅಪ್ಪನಂತೂ ಇಲ್ಲವಲ್ಲ. ನೀನಾದರೂ ಬಂದು ನೋಡಬಾರದೇ?"

"ಬರುತ್ತೇನಪ್ಪ. ಅದಕ್ಕೇನು? ನೀನು ಮನೇ ಕಟ್ಟಿ, ನೋಡು ಬಾ ಎಂದರೆ ನಾನು ಬರಬೇಡವೇ?"

ಕೆಲಸ ಹೂ ವಿ ನ ಸರವೆತ್ತಿದಂತೆ ಆಯಿತೆಂದುಕೊಂಡು, ಅನಿಲ "ಹಾಗಾದರೆ ಯಾವಾಗ ಹೊರಡೋಣ" ಎಂದನು.

"ನಿಂತಂತೆಯೇ ಹೊರಡಲಾಗುವುದೇ, ಹನುಮಂತು. ನಾವೆಲ್ಲಿ, ಮದರಾಸ್ ಎಲ್ಲಿ? ಈಗಿನ್ನೂ ಅಚ್ಯುತ ಓಡಿಯಾಡುತ್ತಿದ್ದಾನೆ. ಕೊಯಿಲು ಕಾಲವು ಬಂದಿತು. ಈಗ ಊರು ಬಿಟ್ಟು ಹೋದರೆ ಒಂದು ಕಾಳಾದರೂ ಸಿಕ್ಕುತ್ತದೆಯೆ? ಆಮೇಲೆ ವರ್ಷವೆಲ್ಲಾ ಏನು ಮಾಡುವುದು?"

ಅನಿಲ ಗಳಿಗೆಯ ಕಾಲ ಯೋಚಿಸಿದನು.

"ಸ್ಪಷ್ಟವಾಗಿ ಒಡೆದು ಹೇಳುತ್ತೇನೆ, ಕೇಳಕ್ಕ. ನನಗೆ ಇಲ್ಲಿಗೆ ಬರುವ ಕೆಲಸವೇನೂ ಇರಲಿಲ್ಲ. ನಾನು ಬಂದುದೇ ನಿಮ್ಮನ್ನೆಲ್ಲಾ ಕರೆದುಕೊಂಡು ಹೋಗುವುದಕ್ಕೆ. ಸೊಗಸಾದ ಮನೆಯಿದೆ. ಕೈ ತುಂಬಾ ಸಂಬಳ ಬರುತ್ತಿದೆ. ಹಾಗಿದ್ದೂ ದಿಕ್ಕಿಲ್ಲದವನಂತೆ ನಾನೇಕೆ ಅಲ್ಲಿರಬೇಕು?"

ನಾನು ಬಂದುದೇ ನಿಮ್ಮನ್ನೆಲ್ಲಾ ಕರೆ————

ಆ ಮಾತು ಕೇಳಿ ಗೋದಮ್ಮ ಸ್ತಬ್ಧಳಾದಳು. ಅವಳ ಬಾಯಿಂದ ಮಾತೇ ಹೊರಡಲಿಲ್ಲ. ಅಚ್ಯುತನು ಬೆರಗಾಗಿ ನೋಡಿದನು..

"ಇವರಿಗೆ ಅಸ್ತಮಾ ಎನ್ನುತ್ತೀ. ಮದರಾಸಿನ ಹವ ಈ ಕಾಯಿಲೆಗೆ ಬಹಳ ಒಳ್ಳೆಯದು. ಅಲ್ಲಿ ಕೆಲವು ದಿನವಿದ್ದರೆ ಔಷಧಿ ತೆಗೆದುಕೊಳ್ಳದೆಯೇ ವಾಸಿಯಾದರೂ ಆಗಬಹುದು. ಕಾಳೂ ಕಡ್ಡಿ ಬರುವ ವೇಳೆಗೆ ಅಚ್ಯುತ ಬಂದು ವಸೂಲು ಮಾಡಿಕೊಂಡು ಬರಲಿ. ಇವರಿಗೆ ಅಲ್ಲಿಯೇ ಏನಾದರೂ ಕೆಲಸ ಕೊಡಿಸುತ್ತೇನೆ. ದೊಡ್ಡ ದೊಡ್ಡ ಕಂಪನಿಯವರೆಲ್ಲಾ ನನಗೆ ಗೊತ್ತು"

ಗೋದಮ್ಮ ಸ್ವಲ್ಪ ಚೇತರಿಸಿಕೊಂಡಿದ್ದಳು.

"ನೀನು ಹೇಳಿದಂತೆ ಇಲ್ಲಿಂದ ಇದ್ದಕ್ಕಿದ್ದಂತೆಯೇ ಸಂಸಾರ ಎತ್ತಿ ಬಿಡುವುದಕ್ಕಾಗುತ್ತದೆಯೆ?"

"ಅದಕ್ಕೇನು ಪುಟ್ಟಬೇಕು. ನಾಳೇ ಊಟ ಮಾಡಿಕೊಂಡು ಕುಳಿತುಕೊಂಡರೆ ನಾಳೇ ರಾತ್ರಿ ಮದರಾಸಿನಲ್ಲಿಯೇ ಊಟ"

"ಆದರೂ——ಹನುಮಂತು"

"ಆದರೂ ಗೀದರೂ ಬೇಡ, ಅಕ್ಕ. ನಾನು ಹೇಳುವುದನ್ನು ಕೇಳು. ನಾಳೆಯ ದಿನ ಎಲ್ಲರೂ ಮದರಾಸಿಗೆ ಹೊರಡಿ. ನಾಲ್ಕು ದಿನ ಇದ್ದು ನೋಡಿ. ಸರಿಬೀಳದಿದ್ದರೆ ವಾಪ್ಸು ಬಂದು ಬಿಡಿ.

ಗೋದಮ್ಮನಿಗೆ ಏನು ಹೇಳಬೇಕೋ ತೋರಲಿಲ್ಲ. ಅವಳು ಅಚ್ಯುತನ ಮುಖ ನೋಡಿದಳು. ಅವನು ಏನೂ ಮಾತನಾಡಲಿಲ್ಲ.

ಅವರವರು ಮಾತನಾಡಿಕೊಳ್ಳಲು ಅಪೇಕ್ಷಿಸುತ್ತಿದ್ದಾರೆಂದು ಅನಿಲನು

ಅರ್ಥಮಾಡಿಕೊಂಡು "ನಾಳೆಯಂತೂ ನಾನು ನಿಮ್ಮನ್ನು ಬಿಟ್ಟು ಹೋರಡುವುದಿಲ್ಲ. ಈಗ ಹೊತ್ತಾಯಿತು. ಮಲಗಿಕೊಳ್ಳೋಣ" ಎಂದನು.

ಬೇಡವೆಂದರೂ ಅಚ್ಯುತನು ಬಲಾತ್ಕಾರ ಮಾಡಿ ಅವರುಗಳು ಕುಳಿತಿದ್ದಂತೆಯೇ ಅನಿಲನಿಗೆ ಹಾಸಿಗೆ ಹಾಕಿಕೊಟ್ಟನು. ಗೋದಕ್ಕ ಎದ್ದು ಹೋದನಂತರ ಅಚ್ಯುತ ದೀಪ ಸಣ್ಣದು ಮಾಡಿಟ್ಟು ತಾನೂ ಹೊರಟು ಹೋದ.

ಒಳಗಡೆ ಎಲ್ಲರೂ ಏನೋ ಮಾತನಾಡುತ್ತಿದ್ದರು. ಅನಿಲ ಅದು ಮದರಾಸಿಗೆ ಹೋಗುವ ವಿಷಯವೇ ಆಗಿರಬೇಕೆಂದುಕೊಂಡನು.

ಮಾತು ನಿಂತಿತು.

ಸ್ವಲ್ಪ ಹೊತ್ತಿಗೆ ಪುನಃ ಪಿಸುಪಿಸನೆ ಮಾತನಾಡುತ್ತಿರುವುದು ಕೇಳಿಸಿತು. ಗಂಡ ಹೆಂಡಿರು ಮಾತನಾಡಿಕೊಳ್ಳುತ್ತಿದ್ದಾರೆಂದು ಅನಿಲ ಊಹಿಸಿದ. ಅದೂ ನಿಂತುಹೋಯಿತು.

ರಾತ್ರಿ ಎಷ್ಟುಹೊತ್ತಾದರೂ ಅವನಿಗೆ ನಿದ್ದೆ ಬರಲಿಲ್ಲ. ಉರಿಯುತ್ತಿರುವ ದೀಪವೇ ನಿದ್ರಾಭಂಗಕ್ಕೆ ಕಾರಣವೆಂದು ಆರಿಸಿದ. ಆದರೂ ನಿದ್ದೆ ಬರಲಿಲ್ಲ.

ಎದ್ದು ಶಬ್ದವಾಗದಂತೆ ಬೀದಿಯ ಬಾಗಿಲು ತೆಗೆದುಕೊಂಡುಹೋಗಿ ಸಿಗರೇಟು ಸೇದಿ, ಪುನಃ ಬಂದು ಮಲಗಿಕೊಂಡನು.

ಬಲು ಹೊತ್ತಿನ ಮೇಲೆ ನಿದ್ದೆಯು ಬಂದಿತು.

ಬೆಳಗಾಗ ಎದ್ದು ಮುಖತೊಳೆದುಕೊಂಡು ಕಾಫಿಯನ್ನು ಕುಡಿಯುತ್ತಿದ್ದಾಗ ಪುನಃ ಮಾತು ಬಂದಿತು.

ಅಚ್ಯುತ "ಗೋದಕ್ಕನು ನಿಮ್ಮ ಜೊತೆಯಲ್ಲಿ ಬರುವುದು ಸರಿಯಾಗಿದೆ. ನಾನು ಇರುವ ಕೆಲಸ ಬಿಟ್ಟುಬಂದು ಬಿಡುವುದು ಚೆನ್ನಾಗಿರುವುದಿಲ್ಲ" ಎಂದನು.

"ಗೋದಕ್ಕನನ್ನು ಮಾತ್ರ ನಾನು ಕರೆದುಕೊಂಡು ಹೋಗಲು ಬರಲಿಲ್ಲ. ಅವಳನ್ನೂ ಅವಳ ಸಂಸಾರವನ್ನೂ ಕರೆದುಕೊಂಡು ಹೋಗಲು ಬಂದಿದ್ದೇನೆ."

ನಡುವೆ ಬಾಯಿಹಾಕಿ, ಗೋದಮ್ಮ "ನಾನು ನಿನ್ನ ಜೊತೆಯಲ್ಲಿ ಬರುತ್ತೇನೆ. ನೀನು ಅವರೂ ಬರಬೇಕೆಂದು ಹಟ ಹಿಡಿಯುವುದಾದರೆ ಅವನು ಕಾಳುಕಡ್ಡಿ ಮನೆಗೆ ಹಾಕಿಸಿ, ಕಂಪನಿಯ ಕೆಲಸ ನೋಡಿಕೊಂಡು, ಅನಂತರ ಬರುತ್ತಾನೆ" ಎಂದಳು.

"ನಾನು ಮೊದಲೇ ಹೇಳಿದೆನಲ್ಲಕ್ಕಾ. ಅದೆಲ್ಲಾ ಆಗುವುದಿಲ್ಲ. ಕೆಲಸಕ್ಕೆ ಮೂರು ತಿಂಗಳ ರಜಾ ಹಾಕಿ, ಈಗಲೇ ಹೊರಡಲಿ. ಆಮೇಲೆ ಬೇಕಾದರೆ ಬಂದು ಕಾಳುಕಡ್ಡಿ ಮನೆಗೆ ಹಾಕಿಸಲಿ."

ಒಬ್ಬೊಬ್ಬರು ಒಂದೊಂದು ನೆವವನ್ನು ಹೇಳಿದರೂ ಮದರಾಸಿನ ಪ್ರಯಾಣವು ಎಲ್ಲರಿಗೂ ಪ್ರಿಯವಾಗಿಯೇ ಇದ್ದಿತು. ಅಚ್ಯುತ ತನ್ನ ಕಾಯಿಲೆಗೆ ಮದರಾಸಿನ ಹವಾ ಒಳ್ಳೆಯದೆಂದು ಕೇಳಿದ್ದನು. ಆ ಹವೆಯಿಂದ ಗುಣವಾದರೆ ಸಂತೋಷ. ಅದಿಲ್ಲದಿದ್ದರೂ ಕೆಲವು ದಿನವಾದರೂ ಕಾಯಿಲೆಯ ತಾಪತ್ರಯವಿಲ್ಲದೇ ಇರಬಹುದಲ್ಲ-ಎಂದು ಅವನು ಯೋಚಿಸುತ್ತಿದ್ದನು. ಅಲ್ಲಿರುವುದೂ ಇಲ್ಲದಿರುವುದೂ ಬೇರೆ. ಈ ನೆವದಲ್ಲಿ ಮದರಾಸ್ ನೋಡಿದಂತಾದರೂ ಆಗಲಿ-ಎಂದು ಮಂಜುಳ ಲೆಕ್ಕ ಹಾಕುತ್ತಿದ್ದಳು. ಈ ಸಂದರ್ಭವನ್ನು ಬಿಟ್ಟರೆ ಮುಂದೆ ಸಾಧ್ಯವೋ ಇಲ್ಲವೋ ಯಾರು ಬಲ್ಲರು? ಅವಳ ಗೆಳತಿಯರಲ್ಲಿ ಕೆಲವರು ಮದರಾಸು, ಅಲ್ಲಿನ ಸಮುದ್ರ ತೀರ ಮುಂತಾದವುಗಳನ್ನು ವರ್ಣಿಸಿದ್ದರು. ಅದು ಅವಳ ಮನಸ್ಸನ್ನು ಸೆಳೆಯುತ್ತಿತ್ತು. ಗೋದಮ್ಮನಿಗಂತೂ ಹೋಗುವುದು ಪೂರಾ ಇಷ್ಟವೇ! ಅಲ್ಲಿಗೆ ಹೋಗಿ ಎರಡು ದಿನವಿದ್ದು, ತಮ್ಮನ ಮನೆ, ಅವನ ಸಂಪಾದನೆಗಳನ್ನೂ ನೋಡಬೇಕೆಂದಿದ್ದಿತು. ಸಾಧ್ಯವಾದರೆ ಅವನಿಗೊಂದು ಮದುವೆಯನ್ನು ಸಹ ಮಾಡಿಸಿ ಬರಬೇಕೆಂದು ಅವಳ ಮನಸ್ಸಿನಲ್ಲಿ ಆಸೆಯಿತ್ತು.

ಆದರೆ ಅಚ್ಯುತನೂ ಗೋದಮ್ಮನೂ ಅವನ ಬಲಾತ್ಕಾರಕ್ಕೆ ಒಪ್ಪಿಕೊಂಡಂತೆ ಮಾಡಿದರು.

ಗೋದಮ್ಮ " ಯಾವಾಗ ಹೊರಡುವುದೆಂದಿದ್ದೀ, ಹನುಮಂತು " ಎಂದು ಕೇಳಿದರು.

"ಯಾವಾಗಲೇನು ? ಈಗಲೇ ಹತ್ತು ಹನ್ನೊಂದರೊಳಗೆ ಊಟವನ್ನು ಮುಗಿಸಿ ಹೊರಟುಬಿಡಬೇಕು."

"ಊರಿಂದ ಊರಿಗೆ ಹೊರಡುವುದೆಂದರೆ ಅಷ್ಟು ಬೇಗ ಹೊರಡಲಾಗುತ್ತದೆಯೇನೋ ? ಸಾಮಾನು ಸರಂಜಾಮುಗಳನ್ನು ಕಟ್ಟಿಕೊಂಡು ಸಿದ್ಧವಾಗಬೇಡವೇ ? ಕಂಪನಿಗೆ ಹೋಗಿ ಅಚ್ಯುತ ರಜಾ ತೆಗೆದುಕೊಳ್ಳಬೇಡವೇ?"

ಆ ಮನೆಯಲ್ಲಿದ್ದ ಸಾಮಾನು ಸರಂಜಾಮುಗಳನ್ನು ಅನಿಲನು ನೋಡಿದ್ದನು. ಅದನ್ನೆಲ್ಲಾ ಮದರಾಸಿಗೆ ತೆಗೆದುಕೊಂಡು ಹೋಗಲು ಅವನಿಗೆ ಇಷ್ಟವಿರಲಿಲ್ಲ.

"ಅಕ್ಕಾ. ಈಗೇನು ನೀವು ಅಲ್ಲಿಯೇ ಇದ್ದುಬಿಡುವುದಕ್ಕೆ ಬರುತ್ತಿಲ್ಲವಲ್ಲಾ. ಎರಡು ದಿನ ಇದ್ದು ನೋಡುತ್ತೀರಿ. ಮನಸ್ಸಿಗೊಪ್ಪಿದರೆ ಇರುತ್ತೀರಿ. ಹಾಗೆ ಇರುವಾಗ ಬಂದು ನಿಮಗೆ ಬೇಕಾದುದನ್ನು ತರುವಿರಂತೆ. ಈಗ ಹೆಚ್ಚು ಸಾಮಾನು ಏನೂ ಬೇಡ. ಇಲ್ಲೇ ಮೈಸೂರಿಗೋ ಶ್ರೀರಂಗಪಟ್ಟಣಕ್ಕೋ ಹೋಗಿ ಬರುವುದಾದರೆ ಎಷ್ಟು ತೆಗೆದುಕೊಳ್ಳುತ್ತೀರೋ ಅಷ್ಟು ಮಾತ್ರ ತೆಗೆದುಕೊಳ್ಳಿ."

ಮೊದಲು ಅಲ್ಲಿಯೇ ಇರಿ ಎಂದವನು ಹೀಗೆ ಮಾತು ಬದಲಾಯಿಸಿದನಲ್ಲ-ಎಂದು ಅವರಿಗೆ ತೋರಿತು. ಆದರೆ ಯಾರೂ ಅಲ್ಲಿಯೇ ಇರಬೇಕೆಂದುಕೊಂಡಿರಲಿಲ್ಲವಾದುದರಿಂದ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ.

"ನೀವು ಚಿಕಿತ್ಸೆಗಾಗಿ ಮದರಾಸಿಗೆ ಹೋಗುತ್ತೇನೆಂದು ಹೇಳಿ, ರಜಾ ಕೇಳಿ. ಎರಡು ಮೂರು ತಿಂಗಳು ಕೇಳಿ. ಸಿಕ್ಕದಿದ್ದರೆ ಎಷ್ಟು ಸಿಕ್ಕುತ್ತದೆಯೋ ಅಷ್ಟೇ ಸಾಕು. ಮದರಾಸಿನಲ್ಲಿ ಬೇಕಾದರೆ ದೊಡ್ಡ ಡಾಕ್ಟರಿಂದ ನಿಮಗೆ ಸ್ವಸ್ಥವಿಲ್ಲವೆಂದು ಸರ್ಟಿಫಿಕೇಟು ಕೊಡಿಸುತ್ತೇನೆ. ಅದನ್ನು ಕಳಿಸಿದರೆ ಯಾವನು ರಜಾ ಇಲ್ಲವೆನ್ನುತ್ತಾನೆ" ಎಂದು ಅಚ್ಯುತನಿಗೆ ಹೇಳಿದ.

ಬೇಗ ಅಡಿಗೆಯಾಗಬೇಕೆಂದು ಗೋದಮ್ಮ ಮಡಿಯುಟ್ಟುಕೊಳ್ಳಲು ಹೋದಳು.

ಅಚ್ಯುತ ಕಂಪನಿಗೆ ಹೊರಡಲು ಅನುವಾದ.

ಮಂಜುಳೆ "ಬೇಗ ಬನ್ನಿ. ಸಾಮಾನು ಬೇರೇ ಕಟ್ಟಬೇಕು" ಎಂದಳು.

ಅನಿಲ "ಕೆಲಸ ಮುಗಿಸಿಕೊಂಡು ಬನ್ನಿ. ನಾನು ಬೇಕಾದರೆ ಸಾಮಾನು ಕಟ್ಟಲು ಸಹಾಯ ಮಾಡುತ್ತೇನೆ" ಎಂದನು.

ಮಂಜುಳೆಯು ಹೊರಗೆ ಹೋಗಿ ಪಕ್ಕದ ಮನೆಯ ಹುಡುಗನನ್ನು ಕರೆದು ತನ್ನ ತಮ್ಮ ಕೃಷ್ಣನನ್ನು ಕರೆತರುವಂತೆ ಹೇಳಿದಳು.

ಅಚ್ಯುತ ವಾಪ್ಸು ಬರುವುದು ಹೊತ್ತಾಗಲಿಲ್ಲ, ಒಂದು ಗಂಟೆಯ ಒಳಗಾಗಿ ಬಂದು "ಒಂದು ತಿಂಗಳ ರಜಾ ಸಿಕ್ಕಿತೆ"ಂದು ಹೇಳಿದನು. ಸ್ನಾನ ಮಾಡಿ ದೇವರ ಪೂಜೆಯನ್ನು ಮಾಡಿದನು.

ಅಷ್ಟು ಹೊತ್ತಿಗೆ ಮಂಜುಳೆಯ ತಮ್ಮ ಕೃಷ್ಣನು ಅಕ್ಕನಿಂದ ಸಮಾಚಾರವನ್ನು ತಿಳಿದುಕೊಂಡು ಹೋಗಿದ್ದನು. ಅವಳ ತಾಯಿ ತಂದೆ ಬಂದು ಸಮಾಚಾರವನ್ನು ಕೇಳಿ ತಿಳಿದುಕೊಂಡರು. ಅಚ್ಯುತ ತಿಂಗಳ ರಜಾ ತೆಗೆದು ಕೊಂಡಿದ್ದಾನೆಂದು ಕೇಳಿ ಅವರ ಮಾವನಿಗೆ ಸಮಾಧಾನವಾಯಿತು.

ಹನ್ನೊಂದು ಗಂಟೆಯ ವೇಳೆಗಾಗಲೇ ಊಟವು ಮುಗಿದು ಎಲ್ಲರೂ ಹೊರಡಲು ಅನುವಾದರು.

ಅನಿಲನು ಹೇಳಿದಂತೆ ಕಟ್ಟಿದ ಸಾಮಾನುಗಳು ಸ್ವಲ್ಪವೇ ಇದ್ದವು.

ಕಟ್ಟುವುದಕ್ಕೆ ಅವರ ಬಳಿ ಹೆಚ್ಚು ಸಾಮಾನುಗಳೂ ಇರಲಿಲ್ಲ. ಅಚ್ಯುತನ ಬಟ್ಟೆಗಳು, ಮಂಜುಳೆಯ ಸೀರೆಗಳು ಇವುಗಳನ್ನು ಹಾಸಿಗೆಯಲ್ಲಿಯೇ ಹಾಕಿ ಕಟ್ಟಿದ್ದರು. ಅದೊಂದು ಹಾಸಿಗೆ. ಗೋದಮ್ಮನವರದೊಂದು ಕೃಷ್ಣಾಜಿನದ ಪೆಟ್ಟಿಗೆ. ಅದರಲ್ಲಿ ಒಂದು ಸೀರೆ. ಒಂದು ನಾರುಮಡಿ.

ಹಾಸಿಗೆಯನ್ನು ಕಾರಿನ ಹಿಂದುಗಡೆ ಹಾಕಲಾಯಿತು. ಕೃಷ್ಣಾಜಿನದ ಪೆಟ್ಟಿಗೆಯನ್ನು ಗೋದಮ್ಮ ತಮ್ಮ ಬಳಿಯೇ ಇಟ್ಟುಕೊಂಡರು. ಮನೆಯ ಬಾಗಿಲು ಕಿಟಕಿಗಳನ್ನು ಭದ್ರಪಡಿಸಿ ಬೀದಿಯ ಬಾಗಿಲಿಗೆ ಬೀಗ ಹಾಕಲಾಯಿತು. ಅಚ್ಯುತ ನೆರೆಹೊರೆಯವರನ್ನು ಕಂಡು ಹತ್ತು ಹದಿನೈದು ದಿನಗಳಲ್ಲಿ ಬರುವುದಾಗಿಯೂ, ಸ್ವಲ್ಪ ಮನೆಕಡೆ ನೋಡಿಕೊಳ್ಳಬೇಕೆಂದೂ ಹೇಳಿದನು.

ಗೋದಮ್ಮ ಅಚ್ಯುತನ ಮಾವನ ಕೈಗೆ ಮನೆಯ ಬೀಗದ ಕೈ ಕೊಟ್ಟು ಮನೆಯ ಕಡೆ ನಿಗಾ ಇಡಬೇಕೆಂದು ಪುನಃ ಪುನಃ ಹೇಳಿದಳು.

ಹುಡುಗರ ಅಪೇಕ್ಷೆಯಂತೆ ಕಾರನ್ನು "ಫೀ" ಎನ್ನಿಸುತ್ತಿದ್ದ ಅನಿಲ ಹೊರಡಲು ಅನುವಾದನು.

ಹೆಂಗಸರಿಬ್ಬರೂ ಹಿಂದುಗಡೆ ಕುಳಿತರು. ಅಚ್ಯುತ ಅನಿಲನ ಪಕ್ಕದಲ್ಲಿ ಕುಳಿತನು.

ಕಾರು ಹೊರಟಿತು. ಬಹಳ ಹೊತ್ತು ಎಲ್ಲರೂ ಕೂಡಿ ಮಾತನಾಡುತ್ತಿದ್ದರು. ಅರ್ಧ ಮುಕ್ಕಾಲು ಗಂಟೆಯಲ್ಲಿ ಬೇಜಾರಾಯಿತೆಂದು ತೋರುತ್ತದೆ. ಸುಮ್ಮನಾದರು.

ಅನಿಲ ಬೆಂಗಳೂರು ಮಾರ್ಕೆಟ್ ಬಳಿ ಕಾರು ನಿಲ್ಲಿಸಿ, ಒಳಗೆ ಹೋಗಿ ಹಣ್ಣುಗಳನ್ನೂ ಕೆಲವು ಬಿಸ್ಕತ್ ಪಟ್ಣಗಳನ್ನೂ ತಂದನು.

ಅದನ್ನು ನೋಡಿ ಗೋದಮ್ಮ "ನೀನು ತಂದಿದ್ದ ತರಕಾರಿ, ಹಣ್ಣು ಹೆಚ್ಚಾಗಿ ಅಕ್ಕಪಕ್ಕದ ಮನೆಯವರಿಗೆ ಹಂಚಿಬಿಟ್ಟೆವು. ಮೊದಲೇ ನಿನಗೆ ಬೇಕು—ಎಂದು ಗೊತ್ತಿದ್ದರೆ ಸ್ವಲ್ಪ ಹಣ್ಣು ಉಳಿಸಿಕೊಂಡು ಬರುತ್ತಿದ್ದೆ" ಎಂದಳು.

"ಪರವಾಯಿಲ್ಲಕ್ಕ" ಎಂದು ಹೇಳಿ, ಅನಿಲ ಮಾತು ಮುಗಿಸಿದ.

ತಾವು ಮದರಾಸಿಗೆ ಬರುತ್ತಿರುವುದಾಗಿಯೂ ರಾತ್ರಿ ಎಲ್ಲವೂ ಸಿದ್ಧವಾಗಿರಬೇಕೆಂದೂ ಏತಾಳನಿಗೆ ಮಾರ್ಕೆಟ್ ಪೋಸ್ಟಾಫೀಸಿನಲ್ಲಿಯೇ ತಂತೀ ಕೊಟ್ಟು ಬಂದನು.

ಅನಂತರ ಹೋಟಲಿನ ಬಳಿ ನಿಲ್ಲಿಸಿ, ಮೂರು ಕಾಫಿಯನ್ನು ತರಿಸಿದ. ಗಂಡಸರಿಬ್ಬರೂ ಬಿಸ್ಕತ್ತುಗಳನ್ನು ತಿಂದು ಕಾಫಿಯನ್ನು ಕುಡಿದರು.

ಅಕ್ಕ ಪ್ರಯಾಣದಲ್ಲಿ ಏನೂ ತೆಗೆದುಕೊಳ್ಳುವುದಿಲ್ಲವೆಂದು ಅನಿಲನಿಗೆ ಗೊತ್ತಿತ್ತು. ಆದರೆ ಮಂಜುಳೆಯು ಏನೂ ತೆಗೆದುಕೊಳ್ಳಲಿಲ್ಲವಲ್ಲ—ಎಂದು ಯೋಚಿಸುತ್ತಿದ್ದನು.

ಗೋದಮ್ಮ "ನೀನೂ ತೆಗೆದುಕೋ, ಮಂಜುಳಾ. ಹುಡುಗಿ, ನಿನಗೇನು?" ಎಂದಳು.

ಅವರ ಮಾತಿನ ಮೇಲೆ ಮಂಜುಳೆಯು ತೆಗೆದುಕೊಂಡಳು.

ಅನಿಲ ಪೆಟ್ರೋಲು, ಆಯಿಲ್‌ಗಳನ್ನು ಹಾಕಿಸಿದ ನಂತರ ಅವರು ಮದರಾಸಿನ ಕಡೆಗೆ ಪ್ರಯಾಣ ಮಾಡಿದರು.

ಅಕ್ಕನಿದ್ದುದರಿಂದ ಸಿಗರೇಟು ಸೇದುವುದಕ್ಕೆ ಇಲ್ಲದೇ ಹೋಯಿತೇ

ವಿನಾ ಅನಿಲನಿಗೆ ಆ ಪ್ರಯಾಣ ಪ್ರಿಯವಾಗಿಯೂ, ಉತ್ಸಾಹಕರವಾಗಿಯೂ ಇದ್ದಿತು.

ಕಾರು ಮದರಾಸಿಗೆ ಸೇರುವ ವೇಳೆಗೆ ರಾತ್ರಿ ಹತ್ತು ಗಂಟೆಯಾಗಿತ್ತು. ಹಿಂದಿನ ಸೀಟಿನಲ್ಲಿದ್ದ ಹೆಂಗಸರಿಗೆ ಚೆನ್ನಾಗಿ ನಿದ್ದೆಯು ಬಂದು ಬಿಟ್ಟಿತ್ತು. ಅಚ್ಯುತನಿಗೂ ಜೊಂಪಲು.

ಅನಿಲ ನಿವಾಸದ ಬಾಗಿಲಿನಲ್ಲಿ ಕಾರು ನಿಂತುಕೊಂಡಾಗಲೂ ಅವರುಗಳಿಗೆ ಎಚ್ಚರವಾಗಲಿಲ್ಲ. ಅನಿಲ ಗೋದಮ್ಮನನ್ನೂ ಅಚ್ಯುತನನ್ನೂ ಎಬ್ಬಿಸಿದನು. ಗೋದಮ್ಮ ಮಂಜುಳೆಯನ್ನು ಎಬ್ಬಿಸಿದಳು.

ಎಲ್ಲರೂ ಕಾರಿನಿಂದ ಇಳಿದರು.

ವಿಶಾಲವಾದ ಉದ್ಯಾನವನ. ದೊಡ್ಡ ಬಂಗಲೆ. ಪ್ರಕಾಶಮಾನವಾದ ದೀಪಗಳು. ಇವುಗಳನ್ನೆಲ್ಲಾ ನೋಡಿ ಆ ಮೂರು ಮಂದಿಯೂ ದಿಗ್ಭ್ರಾಂತರಾದರು. ತಾವು ವಾಸ್ತವವಾಗಿ ಅನಿಲನ ಮನೆಯ ಮುಂದೆ ನಿಂತಿರುವುದೋ ಅಥವಾ ಸ್ವಪ್ನವನ್ನು ನೋಡುತ್ತಿರುವುದೋ ಎಂಬುದು ಆಗತಾನೇ ನಿದ್ದೆಯಿಂದ ಎಚ್ಚರಗೊಂಡ ಅವರಿಗೆ ತಿಳಿಯದೇ ಹೋಯಿತು.

ಮಂಡ್ಯದಿಂದ ಬಂದ ಕಾರು ನಿಂತಿದೆ. ಅನಿಲನು ಎದುರಿಗೇ ಇದ್ದಾನೆ. ಪರಿಚಾರಕ ರಾಮ ಐತಾಳನೂ, ಜಗುಲಿಯ ಮೇಲೆ ನಿಂತಿದ್ದಾನೆ. ಸಾಮಾನುಗಳನ್ನು ಇಳಿಸಲು ಒಂದಿಬ್ಬರು ಆಳುಗಳು ಬಂದಿದ್ದಾರೆ.

ಇವೆಲ್ಲವನ್ನೂ ನೋಡಿದರೆ ಇದು ಸ್ವಪ್ನವಲ್ಲವೆಂದು ತೋರುತ್ತದೆ. ಆದರೆ ನಿಜವೆಂದು ನಂಬುವುದು ಕಷ್ಟವಾಗಿದೆ.

ಆಳುಗಳು ಸಾಮಾನುಗಳನ್ನು ತೆಗೆದುಕೊಂಡು ಒಳಗೆ ಹೋದರು. ಐತಾಳನು ಅಡಿಗೆಯ ಮನೆಯ ಕಡೆಗೆ ಹೋದನು.

ಇವರುಗಳೂ ಒಳಗೆ ಹೋಗುತ್ತಿರುವಾಗ ಗೋದಮ್ಮನು "ಹನುಮಂತೂ, ಇದು ಯಾರ ಮನೆ?" ಎಂದು ಕೇಳಿದಳು.

ಅವನು ನಗುತ್ತಾ "ನನ್ನ ಮನೆಯೆ?" ಎಂದನು.

ಆ ಉತ್ತರವನ್ನು ಕೇಳಿಯೂ ಗೋದಮ್ಮನಿಗೆ ಸಮಾಧಾನವಾಗಲಿಲ್ಲ.

ಏಳೆಂಟು ಮೆಟ್ಟಿಲುಗಳನ್ನು ಹತ್ತಿ ಮೇಲೆ ಹೋಗಬೇಕು. ಹೋದರೆ ಸಣ್ಣ ನಡುಮನೆ. ಅದರ ಇಕ್ಕೆಲಗಳಲ್ಲಿಯೂ ಕೋಣೆಗಳು. ಎಡಗಡೆಯ

ಕೋಣೆಯ ಬಾಗಿಲು ಹಾಕಿತ್ತು. ಬಲಗಡೆಯ ಕೋಣೆಯಲ್ಲಿ ರತ್ನ ಕಂಬಳಿಯನ್ನು ಹಾಕಿ, ಉತ್ತಮವಾದ ಸೋಫಾ ಸೆಟ್ ಇಟ್ಟಿದೆ. ಗೋಡೆಯ ಮೇಲೆ ಕೆಲವು ಪಠಗಳು ಕಂಡು ಬರುತ್ತಿವೆ. ಉದ್ದವಾದ ನಡುವೆಯನ್ನು ದಾಟಿ ಬಂದರೆ ವಿಶಾಲವಾದ ಜಗುಲಿ. ಅದರ ನಡುವೆಯೂ ನೆಲಕ್ಕೆ ಜಮಖಾನ ಹಾಕಿ, ನಾಲ್ಕಾರು ಚಿತ್ತಾದ ಕುರ್ಚಿಗಳನ್ನೂ ಗುಂಡು ಮೇಜವನ್ನೂ ಇಡಲಾಗಿದೆ. ಗೋಡೆಗೆ ಮಗ್ಗುಲಾಗಿ ಮಧ್ಯದಲ್ಲಿ ಗಾಜಿನಲ್ಲಿ ಕಡೆದ ಶಿವ ಪಾರ್ವತಿಯರ ದೊಡ್ಡ ಮೂರ್ತಿಗಳು ಕರಿಮರದ ಸ್ಟಾಂಡಿನ ಮೇಲೆ ಇಡಲಾಗಿದೆ.

ಎದುರುಗಡೆ ಬಿಸಿಲು ಬೀಳುವ ಅಂಗಳ. ನಡುವೆ ನೀರನ್ನು ಎರಚುವ ಚಿಲುಮೆ. ಸುತ್ತಲೂ ಹಸಿರು ಹಾಸಿದಂತೆ ಹುಲ್ಲು. ಅಂಚಿನಲ್ಲಿ ಕೆಂಪು ರಂಗೋಲೆ ಇಟ್ಟಹಾಗೆ ಪುಟ್ಟ ಪುಟ್ಟ ಹೂಗಳೇ ಬಿಡುವ ಗಿಡಗಳನ್ನು ಹಾಕಲಾಗಿದೆ.

ಜಗುಲಿಯ ಒಂದು ಕಡೆ ಮಹಡಿಯ ಮೇಲೆ ಹತ್ತಿ ಹೋಗಲು ಅಗಲವಾದ ಮೆಟ್ಟಿಲುಗಳು.

ಆಳುಗಳು ಅನಿಲನ ಸಾಮಾನುಗಳನ್ನು ಅವನ ಅವನ ಕೋಣೆಗಳಲ್ಲಿಟ್ಟು, ಹಾಸಿಗೆಯ ಸುತ್ತನ್ನು ಎಲ್ಲಿಡಬೇಕೆಂದು ತಿಳಿಯದೇ ಮೆಟ್ಟಿಲಿನ ಬಳಿ ಇಟ್ಟಿದ್ದರು.

ಮೆಟ್ಟಿಲಿನ ಅತ್ತಕಡೆಯಾಗಿ ಮನೆಯ ಒಂದು ಭಾಗ. ಅಲ್ಲಿ ವಿಶಾಲವಾದ ನಡುಮನೆ, ದೊಡ್ಡ ಅಡಿಗೆಯ ಮನೆ, ಸ್ನಾನ ಗೃಹಗಳಿವೆ.

ತಂತಿಯು ಬಂದಿದ್ದುದರಿಂದ ಐತಾಳನು ನೀರು ಕಾಯಿಸಿ, ಅಡಿಗೆ ಮಾಡಿಬಿಟ್ಟಿದ್ದನು.

ಅನಿಲನು "ಸ್ನಾನ ಮಾಡಿ. ಊಟಮಾಡೋಣ" ಎಂದು ಹೇಳಿ ಮಹಡಿಯ ಮೇಲೆ ಹೊರಟು ಹೋದನು.

ಐತಾಳನು ಗೋದಮ್ಮನವರಿಗೆ ಸ್ನಾನದ ಮನೆಯನ್ನು ತೋರಿಸಿದನು. ಅವರು ಸ್ನಾನಕ್ಕೆ ಹೋದರು.

ಮಂಜುಳೆಗೂ, ಅಚ್ಯುತನಿಗೂ ಆ ಮನೆಯು ಕಾಡಿನಲ್ಲಿ ತಂದುಬಿಟ್ಟ ಹಾಗಾಗಿತ್ತು. ಮುನ್ನೂರು ಮೈಲಿಯ ಮೇಲೆ ಪ್ರಯಾಣಮಾಡಿ ಬಂದುದ

ರಿಂದ ಅವರ ಬಟ್ಟೆಗಳು ಮೈಲಿಗೆಯಾಗಿದ್ದವು. ಮೈಕೊಳೆಯಾದಂತಾಗಿತ್ತು. ಸ್ನಾನಮಾಡಲು ಚೌಕಗಳನ್ನೂ ಅನಂತರ ಹಾಕಿಕೊಳ್ಳಲು ಬೇರೆಯ ಬಟ್ಟೆಗಳನ್ನೂ ತೆಗೆದುಕೊಳ್ಳ ಬೇಕಾಗಿದ್ದಿತು.

ಅಂತಹ ಸ್ಥಳದಲ್ಲಿ ತಮ್ಮ ಹಾಸಿಗೆಯನ್ನು ಬಿಚ್ಚಲು ಅವರಿಗೆ ಸಂಕೋಚವಾಯಿತು. ಬಿಚ್ಚದೇ ವಿಧಿಯಿರಲಿಲ್ಲ. ಅಲ್ಲಿ ಯಾರೂ ಇಲ್ಲದುದನ್ನು ಗಮನಿಸಿ, ಕಳ್ಳರಂತೆ ಹಾಸಿಗೆಯನ್ನು ಬಿಚ್ಚಿ, ಬೇಕಾದ ಬಟ್ಟೆಗಳನ್ನು ತೆಗೆದುಕೊಂಡು ಬೇಗ ಅದನ್ನು ಸುತ್ತಿಬಿಟ್ಟರು.

ಅಚ್ಯುತ ಸ್ನಾನಕ್ಕೆ ಹೋದನು. ಮಂಜುಳ ಸೋಪು ಚೌಕಗಳನ್ನು ತೆಗೆದುಕೊಂಡು ಅವನ ಹಿಂದೆಯೇ ಹೋದಳು. ಅಗಸನ ಮನೆಯಿಂದ ಬಂದ ದೊಡ್ಡ ಚೌಕಗಳನ್ನೂ ಮೈಗೆ ಹಾಕಿಕೊಳ್ಳುವ ಸೋಪನ್ನೂ ಮೊದಲೇ ಅಲ್ಲಿಡಲಾಗಿತ್ತು. ಸಂಕೋಚದಿಂದಲೋ, ಅದು ತಮಗಾಗಿ ಅಲ್ಲವೆಂಬ ಭಾವನೆಯಿಂದಲೋ ಅವರು ಅವುಗಳನ್ನು ಉಪಯೋಗಿಸಲಿಲ್ಲ.

ಅಷ್ಟು ಹೊತ್ತಿಗಾಗಲೇ ಗೋದಮ್ಮ ಸ್ನಾನ ಮಾಡಿಕೊಂಡು ಅಡಿಗೆಯಮನೆಗೆ ಹೋಗಿದ್ದಳು. ಐತಾಳ ಅಡಿಗೆಯನ್ನು ಮುಗಿಸಿ, ಒಲೆಯಿಂದ ಕೆಂಡಗಳನ್ನು ಎಳೆದು, ಪಾತ್ರೆಗಳನ್ನು ಅವುಗಳ ಮೇಲೆ ಬಿಸಿಗಿಟ್ಟಿದ್ದನು.

ಸ್ನಾನ ಮುಗಿಸಿಕೊಂಡು ಒಳಗೆ ಬಂದ ಗೋದಮ್ಮನವರನ್ನು ಕುರಿತು ಐತಾಳ

" ನೀವು ಫಲಹಾರ ಮಾಡಿ ಬಿಡೀಮ್ಮ. ಅವರಿಗಾಗಿ ಏಕೆ ಕಾಯಬೇಕು ? "

ತಮಗೆ ಫಲಹಾರ ಸಿದ್ಧವಾಗಿರುತ್ತದೆ–ಎಂಬುದಾಗಿ ಗೋದಮ್ಮ ನಿರೀಕ್ಷೆಮಾಡಿರಲಿಲ್ಲ. ಬೆಳಗಾಗ ಹನ್ನೊಂದು ಗಂಟೆಯಲ್ಲಿ ಊಟಮಾಡಿದ್ದು. ಅನಂತರ ಒಂದು ತೊಟ್ಟು ನೀರನ್ನೂ ಬಾಯಲ್ಲಿ ಹಾಕಿಕೊಂಡಿರಲಿಲ್ಲ. ಒಂದು ಕಡೆ ಫಲಹಾರ ಮಾಡಲು ಮನಸ್ಸಿದ್ದಿತು. ಮತ್ತೊಂದು ಕಡೆ ಮೈಲಿಗೆ ಮುಟ್ಟಿಕೊಂಡು ಮಾಡಿದ್ದಾನೇನೋ, ಇವನ ಕೈಯಲ್ಲಿ ತಿನ್ನುವುದೇ ಎಂದು ಮನಸ್ಸು ಹಿಂದೇಟು ಹಾಕುತ್ತಿತ್ತು.

" ಸ್ನಾನಮಾಡಿ ಮಡಿಯಲ್ಲಿಯೇ ಮಾಡಿದ್ದೇನೆ. ನೀವು ಅದಕ್ಕೇನೂ ಯೋಚಿಸಬೇಡಿ "

ಅವರ ಮನಸ್ಸು ಹಿಂದೆ ಮುಂದೆ ಎಳೆಯುತ್ತಿದ್ದುದನ್ನು ಗಮನಿಸಿ ಐತಾಳ ಹೇಳಿದ.

ಅಷ್ಟು ಹೇಳಿದರೂ ಗೋದಮ್ಮನಿಗೆ ತೃಪ್ತಿಯಾಗಲಿಲ್ಲ.

" ದೂರದ ಪ್ರಯಾಣದಿಂದ ಏನೋ ಒಂದು ತರಹವಾಗಿದೆ. ಒಂದು ಲೋಟ ಹಾಲು ಕುಡಿದು ಮಲಗಿಬಿಡುತ್ತೇನೆ "

ಐತಾಳ ಅರ್ಥಮಾಡಿಕೊಂಡ. ಆದರೂ ಮುದುಕಿ ಉಪವಾಸ ಮಲಗಿ ಕೊಳ್ಳುತ್ತಾಳೆಯಲ್ಲಾ ಎಂದು, ಕೇಳಿದ ಲೋಟ ಹಾಲಿನ ಜೊತೆಗೆ ಕೇಳದ ಎರಡು ಹಣ್ಣು ಹೆಚ್ಚಿ ತಂದಿಟ್ಟ.

ಆಗ ಗೋದಮ್ಮ ಕಣ್ಣು ಮುಚ್ಚಿಕೊಂಡು ಮಡಿಯುಟ್ಟುಕೊಳ್ಳು ವಾಗಲೇ ಆರಂಭಿಸಿದ್ದ ಪ್ರಾರ್ಥನಾ ಶ್ಲೋಕಗಳನ್ನು ಮುಂದುವರಿಸುತ್ತಿದ್ದಳು.

ನಡುಮನೆಯಲ್ಲಿ ಹಾಕಿದ್ದ ದೊಡ್ಡ ಮೇಜಿನ ಮೇಲೆ ಪಿಂಗಾಣಿಯ ತಟ್ಟೆ ಬಟ್ಟಲುಗಳನ್ನಿಟ್ಟು ಊಟಕ್ಕೆ ಅಣಿಮಾಡಿದ್ದ. ಅನಿಲ ಮಹಡಿಯ ಮೇಲೆಯೇ ಸ್ನಾನ ಮುಗಿಸಿಕೊಂಡು ಬಟ್ಟೆ ಬದಲಾಯಿಸಿ ಕೆಳಗೆ ಬಂದು ಊಟಕ್ಕೆ ಕುಳಿತ. ಐತಾಳ ಬಡಿಸಲು ಮೊದಲು ಮಾಡಿದ. ಅಚ್ಯುತ ಮಂಜುಳೆಯರು ಸಂಕೋಚ ಪಡುತ್ತಾ ಬಂದು ಕುರ್ಚಿಗಳ ಮೇಲೆ ಕುಳಿತು ಕೊಂಡು ಊಟ ಆರಂಭಿಸಿದರು.

ಅವರನ್ನು ಏನಾದರೂ ಮಾತನಾಡಿಸಬೇಕೆಂದು ಅನಿಲ ಅಂದು ಕೊಂಡ. ಮೂರು ನಾಲ್ಕು ವಿಷಯಗಳು ಅವನ ಮನಸ್ಸಿಗೆ ಬಂದುವು. ಯಾವುದನ್ನು ಆಡಿದರೆ ಹೆಚ್ಚೋ, ಯಾವುದನ್ನು ಆಡಿದರೆ ಕಡಿಮೆಯೋ ? ಮೊದಲೇ ಈ ಮನೆಯ ವಾತಾವರಣದಿಂದ ಅವರು ದಿಗ್ಭ್ರಾಂತರಾಗಿದ್ದಾರೆ.

ಹಾಗೆಂದು ಮಾತನಾಡಿಸದೇ ಇರುವುದೂ ಚೆನ್ನಾಗಿರುವುದಿಲ್ಲ.

ಬಹಳ ಯೋಚಿಸಿ ಕಡೆಗೆ—

" ಗೋದಕ್ಕ ಎಲ್ಲಿ ?"

ಅದನ್ನು ಹೆಂಡತಿಯಿಂದ ಕೇಳಿ ತಿಳಿದುಕೊಂಡಿದ್ದ ಅಚ್ಯುತ

" ಅಡಿಗೆ ಮನೆಯಲ್ಲಿರಬಹುದು "

" ಅವರಿಗೇನು ಫಲಹಾರಕ್ಕೆ ಮಾಡಿದ್ದಾನೆ, ಐತಾಳ "

ಆ ಮಾತು ಕೇಳಿದಾಗ ಐತಾಳ ಒಳಗೆ ಹೋಗಿದ್ದ. ಅಚ್ಯುತನಿಗೆ ಗೊತ್ತಿರಲಿಲ್ಲ. ಮಂಜುಳೆಯು ತಲೆ ತಗ್ಗಿಸಿಕೊಂಡು ಮಾತನಾಡಿದಳು.

" ಉಪ್ಪಿಟ್ಟು ಮಾಡಿದಂತಿತ್ತು. ಅಕ್ಕ ಅದೊಂದೂ ಬೇಡವೆಂದರು. ಒಂದಿಷ್ಟು ಹಣ್ಣು, ಹಾಲು ತೆಗೆದುಕೊಳ್ಳುತ್ತಿದ್ದಾರೆ "

" ಓಹೋ. ಅಕ್ಕನಿಗೆ ಐತಾಳನ ಮಡಿ ಸರಿಹೋಗಲಿಲ್ಲವೇನೋ ?"

ಎಂದ, ಅನಿಲ ನಗುತ್ತಾ.

" ಅಂತಹದೇನೂ ಇಲ್ಲ. ಏನೋ ಉಪ್ಪಿಟ್ಟು ಬೇಡವೆಂದರು, ಅಷ್ಟೆ "

ಎಂದು ಇದ್ದುದನ್ನು ಸರಿಪಡಿಸುತ್ತಾ ಮಂಜುಳಾ ಉತ್ತರ ಕೊಟ್ಟಳು.

ಐತಾಳ ಅಡಿಗೆಯನ್ನು ರುಚಿಯಾಗಿ ಮಾಡುತ್ತಿದ್ದ. ಚಟ್ನಿ, ಪಲ್ಯ, ಟೊಮೇಟೋ ಸಾರು ಮಾಡಿದ್ದ. ಒಳ್ಳೆಯ ಮೊಸರಿತ್ತು. ಅನ್ನ ಉದುರುದುರಾಗಿ ಬೆಳ್ಳಗೆ ಮತ್ತೊಮ್ಮೆ ನೋಡೋಣವೆನ್ನುವಂತಿತ್ತು. ಮೂರು ಮಂದಿಗೂ ಹಸಿವಾಗಿದ್ದುದರಿಂದ ಸರಿಯಾಗಿಯೇ ಊಟ ಮಾಡಿದರು.

ಅಚ್ಯುತ–ಮಂಜುಳೆಯರಿಗೆ ಸೇಜಿನ ಮುಂದೆ ಮಾಡಿದ ಊಟದಿಂದ ಏನೋ ಮಾಡಬಾರದ್ದು ಮಾಡಿದಂತೆ ಮನಸ್ಸಿಗೆ ಭಾಸವಾಗುತ್ತಿತ್ತು.

ಊಟವನ್ನು ಮುಗಿಸಿದ ಅನಿಲ ಆಗತಾನೇ ಹಣ್ಣು ತಿನ್ನಲು ಆರಂಭಿಸಿದ್ದ ಗೋದಕ್ಕನನ್ನು ಮಾತನಾಡಿಸಿ, ಒಳಜಗುಲಿಗೆ ಬಂದು, ಅಲ್ಲಿದ್ದ ಬೆತ್ತದ ಕುರ್ಚಿಯ ಮೇಲೆ ಕುಳಿತುಕೊಂಡ. ಐತಾಳ ಅಡಿಕೆ ಎಲೆಗಳನ್ನು ತಟ್ಟೆಯಲ್ಲಿಟ್ಟಿದ್ದ. ಬಂದು ಅಚ್ಯುತನನ್ನು ಕರೆದು ಕೂರಿಸಿ ಅವನನ್ನು ತುಂಬೂಲ ತೆಗೆದುಕೊಳ್ಳುವಂತೆ ಹೇಳಿ, ತಾನೂ ತೆಗೆದುಕೊಂಡ.

ಆ ವೇಳೆಗೆ ಹನ್ನೊಂದು ಗಂಟೆಯು ಹೊಡೆಯಿತು.

"ಹೊತ್ತಾಯಿತು ಬೆಳಗಾಗ ಬೇಗ ಏಳಬೇಕು. ನಾನು ಹೋಗಿ ಮಲಗಿಕೊಳ್ಳುತ್ತೇನೆ. ಅಕ್ಕನಿಗೆ ಹೇಳಿಬಿಡಿ"

ಅನಿಲ ಮೇಲೇಳುತ್ತಾ ಹೇಳಿದ.

ಅಚ್ಯುತನನ್ನು ಮಹಡಿಯ ಮೇಲೆ ಕರೆದುಕೊಂಡು ಹೋಗಿ "ನೋಡಿ, ನೀವು ಯಾವ ಕೋಣೆಯನ್ನು ಬೇಕಾದರೂ ಆರಿಸಿಕೊಳ್ಳಬಹುದು. ಆಳನ್ನು ಕರೆದು ಹೇಳಿದರೆ ನಿಮ್ಮ ಹಾಸಿಗೆ ಸಾಮಾನು ತಂದು ಕೊಡುತ್ತಾನೆ" ಎಂದು ಹೇಳಿ ಮಲಗಿಕೊಳ್ಳಲು ಹೊರಟು ಹೋದ.

ಮಂಜುಳ ಗೋದಮ್ಮನ ಬಳಿ ಹೋಗಿ ಕುಳಿತುಕೊಂಡಿದ್ದಳು. ಅವರು ಹಾಲು ಹಣ್ಣುಗಳನ್ನು ತೆಗೆದುಕೊಂಡ ನಂತರ ಇಬ್ಬರೂ ಹೊರಗೆ ಬಂದರು.

ನಡುಮನೆಯಲ್ಲಿ ಊಟ ಮಾಡಿದ್ದುದನ್ನು ನೋಡಿ,

"ಇಲ್ಲಿ ಊಟಮಾಡಿದಿರೇನೇ ?"

"———————————"

"ಜಾತಿಗೀತಿ ಇರಬೇಕೋ ಹೋಗಬೇಕೋ, ಚೆನ್ನಾಯಿತು"

"ನಾವು ಬರುವ ವೇಳೆಗೆ ಬಡಿಸಿದ್ದರು. ಭಾವನವರು ಊಟಕ್ಕೆ ಕುಳಿತುಕೊಂಡು ಬಿಟ್ಟಿದ್ದರು. ಇಲ್ಲಿ ಊಟಮಾಡುವುದಿಲ್ಲವೆಂದು ನಾವು ಹೇಗಕ್ಕಾ ಹೇಳುವುದು"

"ನನಗೆ ಹೇಳಬಾರದಾಗಿತ್ತೇನು ?"

"ಅದೇ ಹೇಳಬೇಕೆಂದು ಕೊಂಡಿದ್ದೆ."

ಆಗಿ ಹೋದುದಕ್ಕೆ ಮಾತನಾಡಿ ಪ್ರಯೋಜನವಿಲ್ಲವೆಂದುಕೊಂಡು, ಮುಂದೆ ಸರಿಮಾಡಬೇಕೆಂದು ನಿರ್ಧರಿಸಿ—

"ಆಗಲಿ ನಾಳೆ ಎಲ್ಲವನ್ನೂ ಸರಿಮಾಡುತ್ತೇನೆ"

ಅಚ್ಯುತನು ಕೆಳಗೆ ಬಂದು ಯಾರಾದರೂ ಆಳುಗಳಿದ್ದಾರೆಯೋ, ಏನೋ ಎಂದು ನೋಡಿದರು ಅವರಾರೂ ಕಣ್ಣಿಗೆ ಬೀಳಲಿಲ್ಲ. ಕರೆದು ಹಾಸಿಗೆ ಯನ್ನು ಮೇಲೆ ತರಬೇಕೆಂದು ಹೇಳಲು ಅವನಿಗೆ ಧೈರ್ಯ ಬರಲಿಲ್ಲ. ತಾನೇ ಹಾಸಿಗೆ ಹೊತ್ತುಕೊಂಡು ಹೋಗಿ ಆ ಕೋಣೆಗಳಿದ್ದ ಕೈ ಸಾಲೆಯಲ್ಲಿ ಹಾಕಿದ.

ಆ ಕೈಸಾಲೆಯಲ್ಲಿ ಹತ್ತಾರು ಕೋಣೆಗಳಿದ್ದವು. ಬಾಗಿಲುಗಳು ಸೇರಿ ಸಲ್ಪಟ್ಟಿದ್ದವು. ಬೀಗಗಳನ್ನು ಹಾಕಿದೆಯೋನೋ ಎಂದುಕೊಂಡ. ಅನಿಲ ನನ್ನು ಎಬ್ಬಿಸಿ ಕೇಳುವುದು ಹೇಗೆ ಎಂದು ಸಂಕೋಚಿಸಿದ. ಕೋಣೆಗಳನ್ನು ತೋರಿಸಿದ ಅನಿಲ ಬೀಗ ಹಾಕಿದ್ದರೆ ಬೀಗದ ಕೈ ಕೊಡುತ್ತಿರಲಿಲ್ಲವೇ ? ಬಾಗಿಲು ಸುಮ್ಮನೆ ಸೇರಿಸಿರಬೇಕೆಂದು ತೋರಿತು. ಹೋಗಿ ನೋಡಲು ಅವನಿಗೆ ತೋರಿದ್ದೇ ಸರಿಯಾಗಿದ್ದಿತು.

ಒಳಗೆ ಹೋಗಿ ನೋಡಲು ವಿಶಾಲವಾದ ಕೋಣೆ. ನೆಲಕ್ಕೆ ರತ್ನಕಂಬಳಿ

ಯನ್ನು ಹಾಸಿದೆ. ಒಂದರ ಪಕ್ಕದಲ್ಲಿ ಒಂದರಂತೆ ಎರಡು ಮಂಚಗಳನ್ನು ಹಾಕಿದೆ. ಅವುಗಳ ಮೇಲೆ ಸುಪ್ಪತ್ತಿಗೆಗಳನ್ನೂ ಮಡಿಮಾಡಿದ ಮಗ್ಗುಲು ಹಾಸಿಗೆಗಳನ್ನೂ ಹರಪಿದೆ. ಒಂದೊಂದು ಹಾಸಿಕೆಯ ಕೆಳಗೂ ಹೊದೆಯುವ ರಗ್ಗುಗಳನ್ನಿಡಲಾಗಿದೆ. ಗೋಡೆಯ ಅಂಚಿನಲ್ಲಿ ಕನ್ನಡಿಯನ್ನೊಳಗೊಂಡ ಡ್ರೆಸಿಂಗ್ ಟೇಬಲ್ ಇದೆ. ಅದರ ಮಗ್ಗುಲಲ್ಲಿ ಮೆತ್ತೆ ಹಾಕಿದ ಸ್ಟೂಲ್ ಇಡಲಾಗಿದೆ. ಒಂದೆರಡು ಕುರ್ಚಿಗಳಿವೆ.

ಅಲ್ಲಿದ್ದ ಮಂಚ, ಅದರ ಮೇಲಿನ ಮಗ್ಗುಲು ಹಾಸಿಗೆ, ಕುರ್ಚಿಗಳು, ಡ್ರೆಸಿಂಗ್ ಟೇಬಲ್, ಅದರ ಮಗ್ಗುಲಲ್ಲಿದ್ದ ಸ್ಟೂಲ್ ಎಲ್ಲವೂ ರತ್ನಗಂಬಳಿಯ ಬಣ್ಣ. ಕಿಟಕಿ ಬಾಗಿಲುಗಳ ಪರದೆಗಳೂ ಹೆಚ್ಚು ಕಡಿಮೆ ಅದೇ ಬಣ್ಣ. ಮೊಸಲು ಹಸಿರು ಬಣ್ಣ.

ಆ ಕೋಣೆಗೆ ಸೇರಿದಂತೆ ಮತ್ತೊಂದು ಕೋಣೆ. ಆಸಕ್ತಿಯಿಂದ ಅದರ ಬಾಗಿಲು ತೆಗೆದು ನೋಡಿದ. ಅದು ಬಾತ್ ರೂಂ. ಅಗಲವಾದ ಬಿಳಿಯ ಕಲ್ಲುಗಳನ್ನು ಹಾಸಿ ಎರಡು ನಲ್ಲಿಗಳನ್ನಿಟ್ಟು, ಕೊಳದಪ್ಪಲೆ, ನೀರು ಮೊಗೆಯಲು ಬೋಸಿಗಳನ್ನು ಇಡಲಾಗಿದೆ. ಮೂಲೆಯಲ್ಲಿ ಮರೆಮಾಡಿ ಫ್ಲಷ್‌ಔಟ್ ಕಕ್ಕಸ್ಸು ಅಳವಡಿಸಲಾಗಿದೆ.

ವಾಪ್ಸು ಬರುವಾಗ ಮುಖ ಕಾಣುವಂತೆ ಬಾತ್ ರೂಂನ ಬಾಗಿಲು ಪಕ್ಕದಲ್ಲಿ ಅಗಲವಾದ ಕನ್ನಡಿ.

ಇದನ್ನೆಲ್ಲಾ ನೋಡಿ ಅಚ್ಯುತನಿಗೆ ಬೆರಗಾಯಿತು.

ಹೀಗೆಯೇ ಇನ್ನು ಮೂರು ನಾಲ್ಕು ಕೋಣೆಗಳ ಬಾಗಿಲುಗಳನ್ನು ತೆಗೆದು ನೋಡಿದ. ಹೆಚ್ಚು ಕಡಿಮೆ ಒಂದರಂತೆಯೇ ಮತ್ತೊಂದು ಇದೆ.

ಆದರೆ ಒಂದೊಂದು ಕೋಣೆಯ ರತ್ನ ಕಂಬಳಿಗಳೂ ಅಲ್ಲಿರುವ ಪದಾರ್ಥಗಳೂ ಬೇರೆ ಬೇರೆಯ ಬಣ್ಣ.

ಯಾವ ಕೋಣೆಯನ್ನು ತಮಗಾಗಿ ಆರಿಸಿಕೊಳ್ಳಬೇಕೆಂಬುದು ಅವನಿಗೆ ತೋರಲಿಲ್ಲ. ಅದರಿಂದ ಗೋದಮ್ಮ ಮಂಜುಳೆಯರನ್ನು ಹುಡುಕಿಕೊಂಡು ಕೆಳಗೆ ಬಂದ.

ಅವರೂ ಅಡಿಗೆ ಮನೆಯ ಕಡೆಯಿಂದ ಬರುತ್ತಿದ್ದರು. ಮೂರು ಮಂದಿಯೂ ಮೆಟ್ಟಲು ಹತ್ತಿಹೋದರು. ಮೇಲುಗಡೆಯೆಲ್ಲಾ ನೋಡಿದರು.

ಅನಿಲನ ಕೋಣೆಯ ವಿನಾ ಎಲ್ಲ ಕೋಣೆಗಳನ್ನೂ ನೋಡಿದರು. ಎಲ್ಲವೂ ಒಂದೇ ಬಗೆ.

ಕಡೆಗೆ ಮೆಟ್ಟಿಲಿಗೆ ಹತ್ತಿರದ ಎರಡು ಕೋಣೆಗಳನ್ನು ಆರಿಸಿದರು. ಒಂದರಲ್ಲಿ ಗೋದಮ್ಮನೂ, ಮತ್ತೊಂದರಲ್ಲಿ ಮಂಜುಳ ಅಚ್ಯುತರೂ ಮಲಗಿಕೊಳ್ಳಲು ಹೋದರು.

ಅವರು ಹೋಗುತ್ತಿರುವಂತೆಯೇ ಐತಾಳನು ಎರಡು ಲೋಟಾಗಳಲ್ಲಿ ಹಾಲು ತಂದಿಟ್ಟನು.

# ೨೨

ಬೆಳಗಾಯಿತು. !

ಗೋದಮ್ಮ ಮನೆಯನ್ನೆಲ್ಲಾ ಅವಲೋಕಿಸಿದರು. ಆಳುಗಳು ಮನೆಯನ್ನೆಲ್ಲಾ ಗುಡಿಸಿ, ಧೂಳು ಹೊಡೆದು, ಕೆಲವು ಕಡೆಗಳಲ್ಲಿ ಒದ್ದೆ ಬಟ್ಟೆಯಿಂದ ಉಜ್ಜಿ, ಬೆಳಗಿನ ಕೆಲಸಗಳನ್ನು ಆರಂಭಿಸಿದ್ದರು. ಯಾರಿಗೂ ಏನೂ ಹೇಳುವಂತಿರಲಿಲ್ಲ. ಅವರವರ ಕೆಲಸದಲ್ಲಿ ಯಾವ ಲೋಪಗಳೂ ಕಂಡು ಬರುತ್ತಿರಲಿಲ್ಲ.

ಆದರೆ ಯಾರೂ ಬೀದಿಯ ಬಾಗಿಲಿಗೆ ನೀರು ಹಾಕಿ ರಂಗೋಲಿ ಇಡುವ ಸೂಚನೆಗಳು ಕಂಡು ಬರಲಿಲ್ಲ. ಹಿಂದೆ ಅದನ್ನು ಮಾಡಿದ್ದ ಚಿನ್ಹೆಗಳೂ ಕಂಡು ಬರುತ್ತಿರಲಿಲ್ಲ.

ತಾನೇ ಬಕ್ಕೆಟ್‌ನಲ್ಲಿ ನೀರು ತೆಗೆದುಕೊಂಡು ಹೋಗಿ, ಬೀದಿಯ ಬಾಗಿಲಿನ ಬಳಿ ಮೆಟ್ಟಿಲುಗಳನ್ನು ನೀರು ಹಾಕಿ ತೊಳೆದಳು. ಕೆಳಗೆ ಒಂದಿಷ್ಟು ಜಾಗಕ್ಕೆ ನೀರು ಚೆಲ್ಲಿದಳು.

ಐತಾಳನನ್ನು ಕೇಳಿ ರಂಗೋಲಿಯನ್ನು ತರುವಂತೆ ಗೋದಮ್ಮ ಮಂಜುಳೆಗೆ ಹೇಳಿದಳು.

ಒಳಗೆ ರಂಗೋಲಿ ಇರಲಿಲ್ಲ.

ಗೋದಮ್ಮನಿಗೆ ಯೋಚನೆಗೆ ಇಟ್ಟುಕೊಂಡಿತು. ಸಾರಿಸದಿದ್ದರೂ

ಚೆನ್ನಾಗಿತ್ತು. ಸಾರಿಸಿದ ನಂತರ ರಂಗೋಲಿ ಇಡದಿದ್ದರೆ ಅವಲಕ್ಷಣ ವಲ್ಲವೇ ?

ಅಕ್ಕಿಯನ್ನು ತೆಗೆದುಕೊಂಡು ಕುಟ್ಟಿ ಸ್ವಲ್ಪ ಪುಡಿಯನ್ನು ಮಾಡಿ ರಂಗೋಲಿಗೆ ಸಿದ್ಧಮಾಡಿದಳು.

ಅಷ್ಟು ಹೊತ್ತಿಗೆ ಕಾಫೀ ಮುಗಿಸಿಕೊಂಡು ಅನಿಲ ಮನೆಯಿಂದ ಹೊರಡುವ ವೇಳೆಗೆ ಮಂಜುಳ ರಂಗೋಲಿ ಇಡುತ್ತಿದ್ದದನ್ನು ನೋಡಿದ.

"ಇದುವರೆವಿಗೆ ಗುಂಡುಗೋವಿಯು ಮಠವಾಗಿತ್ತು. ಈ ದಿನ ಮನೆ ಯಾಗುತ್ತಿರುವಂತಿದೆ"

ಎಂದು ನಗುತ್ತಾ ಹೇಳಿದ.

ಮಂಜುಳಾ ನಗುತ್ತಾ ತಲೆ ಎತ್ತಿ ಒಮ್ಮೆ ನೋಡಿ, ಪುನಃ ತಲೆ ತಗ್ಗಿ ಸಿದಳು.

ಅವಳು ರಂಗೋಲಿ ಇಡುತ್ತಿರುವುದನ್ನು ಅನಿಲ ನೋಡುತ್ತಿದ್ದಂತೆಯೇ ಡ್ರೈವರು ಕಾರು ತಂದು ನಿಲ್ಲಿಸಿ, ಕೆಳಗಿಳಿದನು. ಅನಿಲ ಕಾರು ಬಿಟ್ಟುಕೊಂಡು ಹೊರಟು ಹೋದ.

ನಡುಮನೆಯ ಊಟದ ವ್ಯವಸ್ಥೆಗಳು ಗೋದಮ್ಮನಿಗೆ ಸರಿಬೀಳಲಿಲ್ಲ. ಮೇಜು ಕುರ್ಚಿಗಳನ್ನೆಲ್ಲಾ ತೆಗೆಸಬೇಕೆಂದು ಐತಾಳನಿಗೆ ಹೇಳಿದಳು. ಅವು ಗಳನ್ನು ಇಡಲು ಆ ಮನೆಯಲ್ಲಿ ಬೇರೆಯ ಸ್ಥಳವಿರಲಿಲ್ಲ. ಕಡೆಗೆ ಹಿಂದಿದ್ದ ತೋಟದ ಮನೆಯ ಅಂಗಳದಲ್ಲಿ ಹಾಕಬೇಕೆಂದು ಜವಾನನಿಗೆ ಹೇಳಿದ.

ಆ ಮನೆಯಲ್ಲಿ ಎಷ್ಟೋ ಪಠಗಳಿದ್ದವು. ಅವುಗಳಲ್ಲಿ ದೇವದೇವಿಯರ ಚಿತ್ರಗಳೂ ಇದ್ದವು. ಆದರೆ ಅವೊಂದೂ ಗೋದಮ್ಮನ ಮನಸ್ಸಿಗೊಪ್ಪ ಲಿಲ್ಲ. ಮನೆಯಲ್ಲಿ ದೇವರಂತೂ ಇಲ್ಲ. ಸರಿಯಾದ ಪಠವನ್ನಾದರೂ ತರಿಸ ಬೇಕೆಂದುಕೊಂಡರು.

ಅಲ್ಲೆಲ್ಲಿ ತಿರುಗಿದರೂ ತುಲಸೀ ಗಿಡವಾಗಲೀ, ಅದನ್ನು ಹಾಕಲು ಬೃಂದಾವನವಾಗಲೀ ಇರಲಿಲ್ಲ. ಬೃಂದಾವನವೇ ಇಲ್ಲದೇ ಇಷ್ಟು ದೊಡ್ಡ ಮನೆಯನ್ನು ಹೇಗೆ ಕಟ್ಟಿದರೋ ಆಕೆಗೆ ಅರ್ಥವಾಗಲಿಲ್ಲ.

ತೋಟದ ಕೆಲಸ ಮಾಡುತ್ತಿದ್ದ ಆಳನ್ನು ಕರೆದು ತುಲಸೀ ಗಿಡವಿ

ದೆಯೇ ಎಂದು ವಿಚಾರಿಸಿದಳು. ಅವನಿಗೆ ಗೋದಮ್ಮನ ಮಾತು ತಿಳಿಯ ಲಿಲ್ಲ. ಅವನು ಹೇಳಿದ್ದು ಈಕೆಗೆ ಗೊತ್ತಾಗಲಿಲ್ಲ.

ಐತಾಳನೇ ಬರಬೇಕಾಯಿತು. ಅವನು ಪಕ್ಕದ ತೋಟದಿಂದ ತುಲಸೀ ಗಿಡಕ್ಕೆ ಹೇಳಿಕಳಿಸಿ, ಕುಂಡವೊಂದರಲ್ಲಿ ಅದನ್ನು ಹಾಕಿಸಿ, ತರಿಸಿಟ್ಟನು.

ಗೋದಮ್ಮ ಅದನ್ನು ನಡುಮನೆ ಬಾಗಿಲು ಎದುರಾಗಿ ವರಾಂಡದಲ್ಲಿ ಡಿಸಿದಳು.

ಅಷ್ಟು ಹೊತ್ತಿಗೆ ಹತ್ತು ಗಂಟೆಯಾಯಿತು.

ಐತಾಳನು ಅಡಿಗೆಯಲ್ಲಿ ಉದ್ಯುಕ್ತನಾಗಿದ್ದ.

ಗೋದಮ್ಮ ಒಳಗೆ ಬಂದು.

"ಐತಾಳ. ತೋಟದಿಂದ ಸ್ವಲ್ಪ ಬಾಳೆ ಎಲೆ ತರಿಸುತ್ತೀಯಾ ?"

"ಇಲ್ಲಿ ಬಾಳೇ ಗಿಡಗಳಿಲ್ಲವಲ್ಲ."

ಗೋದಮ್ಮನಿಗೆ ದೂರದಲ್ಲಿ ಬಾಳೆಯ ಎಲೆಗಳನ್ನು ನೋಡಿದಂತಿತ್ತು.

"ನಾನು ಈಗ ತಾನೇ ನೋಡಿದ್ದೇನೆ, ಇಲ್ಲವೆನ್ನುತ್ತೀಯಲ್ಲಪ್ಪ"

ಆಶ್ಚರಿಗೊಂಡ ಐತಾಳ ಹೊರಗಡೆ ಬಂದು ನೋಡಿ—

"ಅವು ಬಾಳೆಯ ಎಲೆಗಳಲ್ಲಮ್ಮ. ಹಾಗೆ ಕಾಣುತ್ತವೆ, ಅಷ್ಟೆ"

ಆಕೆಗೆ ನಂಬಿಕೆ ಬರಲಿಲ್ಲ. ಆದರೆ ವಿಧಿ ಇರಲಿಲ್ಲ.

"ಹಾಗಾದರೆ ಊಟಕ್ಕೇನು ಮಾಡುವುದು ?"

"ಅದೇ ! ತಟ್ಟೆಗಳಿವೆಯಲ್ಲ."

ಐತಾಳ ನಗುತ್ತಾ ಹೇಳಿದ.

"ಅವು ಬೇಡವೆಂದಲ್ಲವೇ, ಎಲೆಗಳನ್ನು ಕೇಳಿದ್ದು"

"ಹಾಗಾದರೆ ತರಿಸಬೇಕು."

"ಆಳನ್ನು ಕರಿ, ದುಡ್ಡು ಕೊಡುತ್ತೇನೆ. ಅಂಗಡಿಯಿಂದ ತರಿಸು."

ಒಂದೂವರೆ ಮೈಲಿಯಲ್ಲಿ ನಾಲ್ಕು ಅಂಗಡಿಗಳಿವೆ ಎಂದೂ, ಅಲ್ಲಿ ಸಿಕ್ಕು ತ್ತವೆಯೋ ಇಲ್ಲವೋ ಗೊತ್ತಿಲ್ಲವೆಂದೂ, ಸರಿಯಾದ ಪೇಟೆಗೆ ಹೋಗುವುದೆಂ ದರೆ ಹತ್ತು ಮೈಲಿಗಳ ದೂರ ಹೋಗಬೇಕೆಂದೂ ಐತಾಳ ಹೇಳಿದ.

ಅದೇ ಸಮಯದಲ್ಲಿ ಸ್ನಾನಕ್ಕೆ ಹೋಗಿದ್ದ ಮಂಜುಳ ಹೊರಗೆ ಬಂದು,

"ಅರಸಿನ ಕುಂಕುಮ————"

"ಹೆಚ್ಚಾಗಿದೆಯೇನೇ ?"

"ಹೂಂ."

"ಊರಿನಿಂದ ತರಲಿಲ್ಲವೇಕೆ ?"

"ಮನೆ ಎಂದರೆ————————"

ಗೋದಮ್ಮನಿಗೆ ಜಂಘಾ ಬಲವೇ ಉಡುಗಿದಂತಾಯಿತು. ಊಟಕ್ಕೆ ಎಲೆಬೇಕು. ಅರಸಿನ ಕುಂಕುಮ ಹೆಚ್ಚಾಗಿದೆ.

ಏನು ಮಾಡುವುದು ?

"ಅದಕ್ಕೇಕಮ್ಮಾ, ಯೋಚನೆ. ಸಣ್ಣ ಕಾರಿದೆ. ಡ್ರೈವರ್ ಇದ್ದಾನೆ. ಬೇಕಾದರೆ ಪೇಟೆಗೆ ಹೋಗಿ ತೆಗೆದುಕೊಂಡು ಬನ್ನಿ."

ಎಂದು ಸಂದರ್ಭ ಅರ್ಥ ಮಾಡಿಕೊಂಡ ಐತಾಳ ಹೇಳಿದ.

ಅದು ಸರಿಯಾಗಿ ತೋರಿತು. ಡ್ರೈವರ್‌ನನ್ನು ಕರಿಸಿ, ಬೇಕಾದ ಸಾಮಾನುಗಳನ್ನು ತರಲು ಗೋದಮ್ಮ, ಮಂಜುಳ ಹೊರಟರು. ಜೊತೆಗೆ ಅಚ್ಯುತ ಸಹ ಹೋದ.

ಕೋಡಂಬಾಕಂನ ಅಂಗಡಿಗಳಲ್ಲಿ ಅವರಿಗೆ ಬೇಕಾದ ಸಾಮಾನುಗಳು ಸಿಗಲಿಲ್ಲ. ಮಾಂಬಲದ ಪೇಟೆಗೇ ಹೋಗಬೇಕಾಯಿತು. ಅಲ್ಲಿ ಅರಸಿನ ಕುಂಕುಮ, ಬಾಳೆಯ ಎಲೆ, ರಂಗೋಲಿ, ಊದಿನ ಕಡ್ಡಿ, ಕರ್ಪೂರ, ಮಂಗಳಾರತಿಯ ಹಲಗೆ ಮುಂದುವುಗಳನ್ನೆಲ್ಲಾ ಕೊಂಡು ತಂದರು.

ಗೋದಮ್ಮ ಮನೆ ದೇವರಾದ ನರಸಿಂಹ ದೇವರ ಫೋಟೋ, ಒತ್ತಾಳಿಯ ಬೃಂದಾವನ ಕಟ್ಟಿಗಳನ್ನು ತರಲು ಮರೆಯಲಿಲ್ಲ.

ಬರುವ ವೇಳೆಗೆ ಹನ್ನೆರಡು ಗಂಟೆಯಾಗಿತ್ತು.

ಬರುತ್ತಿದ್ದಂತೆಯೇ ಐತಾಳನೊಂದು ಸುದ್ದಿ ಕೊಟ್ಟ.

"ರಾಯರು ಮಧ್ಯಾಹ್ನ ಊಟಕ್ಕೆ ಬರುವುದಿಲ್ಲ. ನಿಮಗೆ ತಿಳಿಸುವಂತೆ ಫೋನ್ ಮಾಡಿದ್ದರು"

ಮನೆಯ ಯಜಮಾನ ಬರದೇ ಊಟಮಾಡುವುದು ಹೇಗೆ? ಯೋಚನೆಗಿಟ್ಟುಕೊಂಡಿತು.

"ಅದು ಹಾಗೇನಮ್ಮ. ಮೂರೂ ಮುಕ್ಕಾಲು ಪಾಲು ಅವರು

ಮಧ್ಯಾಹ್ನ ಬರುವುದೇ ಇಲ್ಲ. ಅಕಸ್ಮಾತ್ ಒಂದೊಂದು ದಿನ ಬರುವುದಾದರೆ ಫೋನ್ ಮಾಡುತ್ತಾರೆ. ಆಗ ಅಡಿಗೆ ಮಾಡುತ್ತೇನೆ. ಇಲ್ಲದಿದ್ದರೆ ಇಲ್ಲ."

"ರಾತ್ರಿ ಹೊತ್ತಾದರೂ ಬಂದೇ ಬರುತ್ತಾನೋ ?"

ಎಂದು ವಿಷಯ ತಿಳಿದುಕೊಳ್ಳುವ ಉತ್ಸಾಹದಿಂದ ಗೋದಮ್ಮ ಕೇಳಿದಳು.

"ಅದನ್ನೂ ಖಚಿತವಾಗಿ ಹೇಳಲಾಗುವುದಿಲ್ಲ. ಸ್ಟುಡಿಯೋಗಳಲ್ಲಿ ಯಾವಾಗಲೆಂದರೆ ಆವಾಗ ಷೂಟಿಂಗ್ ಇಟ್ಟುಕೊಳ್ಳುತ್ತಾರೆ. ರಾತ್ರಿ ಷೂಟಿಂಗ್ ಇಲ್ಲದಿದ್ದರೆ ಬರುತ್ತಾರೆ, ಇದ್ದರೆ ಬರುವುದಿಲ್ಲ."

ಐತಾಳ ಹೇಳಿದ್ದಂತೆಯೇ ಆಯಿತು. ಆ ರಾತ್ರಿ ಅನಿಲನು ಮನೆಗೆ ಬರಲಿಲ್ಲ. ಮಾರನೆಯ ದಿನ ಬೆಳಗಾಳ ಫೋನ್ ಮಾಡಿ ಇನ್ನೂ ಮೂರು ದಿನಗಳು ಬರುವುದಕ್ಕಾಗುವುದಿಲ್ಲವೆಂದು ಹೇಳಿದ.

ಮೂರು ದಿನಗಳ ನಂತರ ಒಂದು ಸಂಜೆ ಅನಿಲ ಮನೆಗೆ ಬಂದ. ತಲೆಯು ಕೆದರಿತ್ತು. ಬಟ್ಟೆಗಳು ಬಹಳ ಕೊಳೆಯಾಗಿದ್ದವು. ಕೈಕಾಲು ಮುಖಗಳಿಗೂ, ಕೊರಳಿಗೂ ಬಣ್ಣವು ಹತ್ತಿಕೊಂಡಿದ್ದಿತು. ಬಹಳ ಸೊರಗಿ ಹೋದಂತೆ ಕಂಡು ಬಂದಿತು.

ಮನೇ ಬಿಟ್ಟು ಓಡಿಹೋದ ನಂತರ ಗೋದಮ್ಮ ತಮ್ಮನನ್ನು ಅಂತಹ ಅವಸ್ಥೆಯಲ್ಲಿ ನೋಡಿರಲೇ ಇಲ್ಲ.

ಬಂದವನು ಎಲ್ಲರೊಂದಿಗೂ ಎರಡೆರಡು ಮಾತನ್ನಾಡಿದಂತೆ ಮಾಡಿ, ಮಹಡಿಯ ಮೇಲಕ್ಕೆ ಸ್ವಲ್ಪ ತಿಂಡಿ ತರಬೇಕೆಂದು ಹೇಳಿ, ಹೊರಟು ಹೋದ. ಸ್ನಾನಮಾಡಿ, ತಿಂಡೀ ತಿಂದು, ಮಲಗಿಬಿಟ್ಟ.

ಪುನಃ ಕೆಳಗೆ ಬಂದು ಮಾತನಾಡಬೇಕಾದರೆ ಎಂಟು ಗಂಟೆಯಾಯಿತು.

ಗೋದಮ್ಮ ಅವನ ಕೆಲಸ ಕಾರ್ಯ ಮುಂತಾದುವುಗಳನ್ನು ಕೇಳಿದಳು. ಐತಾಳನು ಹೇಳಿದುದನ್ನೇ ಅನಿಲನೂ ವಿವರವಾಗಿ ಹೇಳಿದ.

"ಸಿನಿಮಾದಲ್ಲಿ ಪಾರ್ಟ್ ಮಾಡುವವರೆಲ್ಲರೂ ಹೀಗೆಯೇ ಹಗಲೂ ರಾತ್ರಿ ಎನ್ನದೇ ಕೆಲಸ ಮಾಡಬೇಕೇ ?"

ಎಲ್ಲರಿಗೂ ಹಾಗಿರುವುದಿಲ್ಲವೆಂದೂ, ಆದರೆ ತನ್ನಂತೆ ಅನೇಕ ಚಿತ್ರ

ಗಳಲ್ಲಿ ನಟಿಸಬೇಕಾದವರು ಇದೇ ರೀತಿ ಕೆಲಸ ಮಾಡಬೇಕಾಗುತ್ತದೆಂದೂ ಅಕ್ಕ ಕೇಳಿದ ಮಾತಿಗೆ ಅನಿಲ ಜವಾಬು ಕೊಟ್ಟ.

"ನೀನು ಏನಾದರೂ ಹೇಳು, ಹನು——" ಅರ್ಧದಲ್ಲಿ ಹೆಸರು ಹೇಳುವುದನ್ನು ನುಂಗಿ "ಸುಖವಾಗಿ ಎರಡು ಹೊತ್ತು ಊಟ ಮಾಡಿ ರಾತ್ರಿ ಹೊತ್ತು ನಿದ್ರೆ ಇಲ್ಲದ ಮೇಲೆ ಎಷ್ಟು ಸಂಪಾದನೆ ಇದ್ದರೂ ಪ್ರಯೋಜನವಿಲ್ಲ" ಎಂದಳು.

ಗೋದಮ್ಮ, ಮಂಜುಳಾ, ಅಚ್ಯುತ ಎಲ್ಲರೂ ಮಾತನಾಡಿ, ಇಲ್ಲಿ ಅನಿಲಕುಮಾರನೆಂದು ಹೇಳಿಕೊಂಡು ಓಡಿಯಾಡುತ್ತಿರುವಾಗ ಅವನನ್ನು ಹನುಮಂತುವೆಂದು ಕರೆಯುವುದು ಚೆನ್ನಾಗಿರುವುದಿಲ್ಲವೆಂದು ತೀರ್ಮಾನ ಮಾಡಿಕೊಂಡಿದ್ದರು.

ಅನಂತರ ಎಲ್ಲರೂ ಲೋಕಾಭಿರಾಮವಾಗಿ ಮಾತನಾಡುತ್ತಾ ಬಹಳ ಹೊತ್ತು ಕುಳಿತಿದ್ದರು. ಒಂಬತ್ತೂವರೆಯ ಮೇಲೆ ಎದ್ದು ಊಟಕ್ಕೆ ಹೋದರು.

ಊಟದ ಮನೆಯ ಬಾಗಿಲಿನಲ್ಲಿ ವರಾಂಡಗಳಲ್ಲಿ ಒತ್ತಾಳೆಯ ಬೃಂದಾವನ ಕಟ್ಟೆಯಲ್ಲಿ ತುಲಸಿ, ಒಳಗೆ ನರಸಿಂಹದೇವರ ಪಟ, ಅದರ ಮೇಲೆ ಹೂವುಗಳು, ಪಕ್ಕದಲ್ಲಿ ನಂದಾದೀಪ, ಊಟಕ್ಕೆ ಗಾಜಿನ ತಟ್ಟೆಗಳ ಬದಲು ಎಲೆಗಳು ಇವೆಲ್ಲವನ್ನೂ ನೋಡಿ ಅಕ್ಕನು ಮಾಡಿರುವ ಬದಲಾವಣೆ ಎಂದು ಅನಿಲ ಊಹೆ ಮಾಡಿದ.

ಎಲೆಯ ಬಳಿ ಹಾಕಿದ್ದ ಸಣ್ಣ ಚಾಪೆಯ ಮೇಲೆ ಕುಳಿತುಕೊಳ್ಳುತ್ತಾ–

"ಇದೇನಕ್ಕ ! ನಮ್ಮ ಮನೆಯ ಏರ್ಪಾಟುಗಳೆಲ್ಲವೂ ಬದಲಾಯಿಸಿದೆ"

"ನಾನು ಬಂದ ದಿನ ರಾತ್ರಿ ನೋಡಿದ್ದರೆ ಕಿರಿಸ್ತಾನರ ಹಾಗೆ ಮೇಜಿನ ಮೇಲೆ ಊಟ ಮಾಡಲು ಬಿಡುತ್ತಿದ್ದನೇ ?"

"ಇಲ್ಲಿದ್ದ ಮೇಜು ಕುರ್ಚಿಗಳನ್ನು ಆ ರಾತ್ರಿ ನೋಡಲಿಲ್ಲವೇನಕ್ಕ"

ಗೋದಮ್ಮನಿಗೆ ಏನು ಹೇಳಬೇಕೋ ತೋರಲಿಲ್ಲ. ತಾನೇಕೆ ಆ ರಾತ್ರಿ ಗಮನಿಸಲಿಲ್ಲ ? ಉತ್ತರಕ್ಕಾಗಿ ಅರೆಗಳಿಗೆ ಹುಡುಕಬೇಕಾಯಿತು.

"ಅವು ಊಟ ಮಾಡುವುದಕ್ಕೆ ಎಂದುಕೊಳ್ಳಲಿಲ್ಲ. ಊಟಕ್ಕೆ

ಅಡಿಗೇ ಮನೆಗೇ ಬರುತ್ತೀರೆಂದು ಕಾಯುತ್ತಿದ್ದೇನೆ. ನೀವೆಲ್ಲಾ ಊಟ ಮುಗಿಸಿಕೊಂಡು ಹೊರಟು ಹೋಗಿದ್ದಿರಿ."

ಗೋದಮ್ಮ ತೋಟದಲ್ಲಿ ಕೆಲವು ಬಾಳೆಯ ಗಿಡಗಳನ್ನೂ, ದೇವರ ಪೂಜೆಗೆ ಹೂತುಲಸಿಯ ಗಿಡಗಳನ್ನೂ ಹಾಕಬೇಕೆಂದು ತಮ್ಮನಿಗೆ ಹೇಳಿದಳು. ಮೂರು ಮಂದಿಯೂ ಊಟ ಮಾಡುತ್ತಿರಲು ಗೋದಮ್ಮ ಅವರೊಡನೆ ಮಾತನಾಡುತ್ತಾ ಕುಳಿತಿದ್ದಳು.

ಅವರ ಊಟಗಳಾದ ಮೇಲೆ ಫಲಹಾರಕ್ಕಾಗಿ ಒಳಗೆ ಹೋದರು.

ಹತ್ತು ಹದಿನೈದು ದಿನ ಅನಿಲನಿಗೆ ಹೆಚ್ಚು ಕೆಲಸವಿರಲಿಲ್ಲ. ಬೆಳಗಾಗ ಎದ್ದು ಹೋದವನು ರಾತ್ರಿ ಎಷ್ಟು ಹೊತ್ತಾದರೂ ಮನೆಗೆ ವಾಪ್ಸು ಬರುತ್ತಿದ್ದ. ಮಧ್ಯಾಹ್ನ ತಮ್ಮ ಊಟಕ್ಕೆ ಬರದಿರುವುದು ಗೋದಮ್ಮನಿಗೆ ಅತೃಪ್ತಿಯಾಗಿತ್ತು. ಆದರೆ ಬೇರೇ ವಿಧಿಯೇ ಇರಲಿಲ್ಲ. ರಾತ್ರಿ ಅವನು ಮನೆಗೆ ಬರುತ್ತಿರುವುದೂ ತನಗೆ ಅಸಮಾಧಾನವಾಗುತ್ತದಲ್ಲ–ಎಂದು ಆಕೆಗೆ ಗೊತ್ತಿತ್ತು.

ಅಕ್ಕನೂ ಅವಳ ಸಂಸಾರವೂ ಮನೆಗೆ ಬಂದ ನಂತರ ಅನಿಲ ತನ್ನ ರೀತಿನೀತಿಗಳಲ್ಲಿ ಕೆಲವು ಬದಲಾವಣೆಗಳನ್ನು ಮಾಡಬೇಕಾಗಿ ಬಂದಿತು.

ಅಕ್ಕನೆದುರಿಗೆ ಸಿಗರೇಟು ಸೇದಲಾಗುತ್ತಿರಲಿಲ್ಲ. ಆದರಿಂದ ಕಾರು ಕಾಂಪೌಂಡು ಪ್ರವೇಶಿಸಿದೊಡನೆಯೇ ಸಿಗರೇಟು ಬಿಸಾಡುತ್ತಿದ್ದ. ಪುನಃ ಅವನು ಸಿಗರೇಟು ಹಚ್ಚಿಕೊಳ್ಳಬೇಕಾದರೆ ಮಹಡಿಯ ಮೇಲೆ ಹೋದಾಗಲೇ! ಸಾಧಾರಣವಾಗಿ ಗೋದಮ್ಮ ಮಹಡಿಯ ಮೇಲೆ ಬರುತ್ತಿರಲಿಲ್ಲ.

ಹತ್ತಿ ಇಳಿಯುವುದು ತೊಂದರೆಯಾಗುತ್ತದೆಂದು ಆಕೆ ಮಹಡಿಯ ಮೆಟ್ಟಿಲುಗಳ ಬಳಿ ಇದ್ದ ಕೋಣೆಯನ್ನು ಆರಿಸಿದ್ದಳು. ಅಲ್ಲಿದ್ದ ಮಂಚ, ಕುರ್ಚಿ, ಕನ್ನಡಿಗಳನ್ನು ತೆಗೆಸಿ ಚಾಪೆ ಹಾಕಿಕೊಂಡು ಅದರ ಮೇಲೆ ಹಾಸಿಗೆ ಎನ್ನುವ ತಮ್ಮ ಹಳೇ ಜಮಖಾನದ ಸುರುಳಿಯನ್ನು ಇಟ್ಟುಕೊಂಡಿದ್ದರು.

ಮಹಡಿಯ ಮೇಲೆ ಧಾರಾಳವಾಗಿ ಅವನು ಸಿಗರೇಟು ಸೇದಬಹುದಾಗಿತ್ತು. ವಾಸನೆ ಕೆಳಕ್ಕೆ ಬರುತ್ತಿರಲಿಲ್ಲ.

ಅನಿಲ ಸಿಗರೇಟು ಸೇದುವುದು ಮೊದಲಿನಿಂದಲೂ ಅಚ್ಯುತನಿಗೆ ತಿಳಿ

ದೇ ಇತ್ತು. ಆದರಿಂದ ಅವನೆದುರಿಗೆ ಮುಚ್ಚಿಡ ಬೇಕಾಗಿರಲಿಲ್ಲ. ಮಂಜು ಳೆಯು ಅದನ್ನು ನೋಡುವ ಸಂದರ್ಭ ಬಂದಿರಲಿಲ್ಲ.

ಒಂದು ದಿನ ಮಂಜುಳೆಯು ಕಾಫೀ ತೆಗೆದುಕೊಂಡು ಮಹಡಿಯ ಮೇಲೆ ಬಂದಾಗ ಹಾಸಿಗೆಯ ಮೇಲೆ ಕುಳಿತಿದ್ದ ಅನಿಲ ಸಿಗರೇಟು ಸೇದು ತ್ತಿದ್ದ. ಅದನ್ನು ನೋಡಿ ಬಾಗಿಲು ತೆಗೆದುಕೊಂಡು ಬಂದ ಮಂಜುಳಾ ಹೊಸಲಿನಲ್ಲಿಯೇ ನಿಂತು ಬಿಟ್ಟಳು.

ಸಿಗರೇಟನ್ನು ಪಕ್ಕದ ಟೀಪಾಯಿಯ ಮೇಲಿದ್ದ ಆಷ್‌ಟ್ರೇಯಲ್ಲಿ ಹಾಕಿ–

"ಬರಬಹುದು, ಬಾ"

ಮಂಜುಳಾ ಒಳಗೆ ಬಂದು ಕಾಫಿಯನ್ನು ಕೊಟ್ಟು, ಅವನು ಕುಡಿದ ನಂತರ ಕಪ್ಪು ಸಾಸರುಗಳನ್ನು ತೆಗೆದುಕೊಂಡು ವಾಪ್ಸು ಹೋದಳು.

ಅಂದಿನಿಂದ ಅವಳೆದುರಿಗೆ ಸಹ ಸಿಗರೇಟು ಸೇದುತ್ತಿದ್ದ.

ಆದರೆ ಕುಡಿತವು ಬಹಳ ಗುಟ್ಟಾಗಿಯೇ ಇದ್ದಿತು.

ಅಕ್ಕ ಊರಿಗೆ ಬಂದ ನಂತರ ಅನಿಲ ಕುಡಿಯುವುದು ಬಹಳ ಕಡಿಮೆ ಯಾಗಿ ಹೋಗಿತ್ತು. ಕುಡಿಯಬೇಕೆಂದು ತೋರಿದ ದಿನ ಮದರಾಸಿನ ಲ್ಲಿ ನಾಲ್ಕು ಗಂಟೆಗೇ ಕುಡಿಯುತ್ತಿದ್ದ. ಅಷ್ಟು ಬೇಗ ಕುಡಿದರೆ ಮನೆಗೆ ಬರುವ ವೇಳೆಗೆ ವಾಸನೆ ಇರುವುದಿಲ್ಲವೆಂದು ಅವನ ಭಾವನೆ.

ಮನೆಗೆ ಬಂದ ನಂತರವೂ ವಾಸನೆ ಇರುತ್ತಿದ್ದಿತೋ, ಏನೋ ? ಮಾದಕ ಪದಾರ್ಥಗಳ ವಾಸನೆಯನ್ನೇ ಅರಿಯದ ಮನೆಯವರಿಗೆ ಅವನು ಕುಡಿದಿದ್ದುದು ಗೊತ್ತಾಗುತ್ತಿರಲಿಲ್ಲ. ಆದರ ಮೇಲೆ ಕುಡಿದವರು ಕೂಗುತ್ತಾ ರೆಂದೂ, ಜಗಳವಾಡುತ್ತಾರೆಂದೂ, ಜ್ಞಾನ ತಪ್ಪಿ ಕೆಳಗೆ ಬೀಳುತ್ತಾರೆಂದೂ ಅವರ ಭಾವನೆ. ಅನಿಲ ಹಾಗೆಂದೂ ಮಾಡಿರಲಿಲ್ಲ.

ಒಮ್ಮೊಮ್ಮೆ ಹೆಚ್ಚಾಗಿ ಮೈಮರೆಯುವವರೆವಿಗೆ ಕುಡಿಯಬೇಕೆಂದು ತೋರುವುದು. ಆಗ ಸಂಜೆ ಮನೆಗೆ ಬಂದವನು ಮೈ ಚೆನ್ನಾಗಿಲ್ಲವೆಂದು ಮಹಡಿಯ ಮೇಲೆ ಹೋಗಿ ಮಲಗಿ ಬಿಡುವನು. ಡ್ರೈವರು ಬಾಟಲ್, ಸೋಡಾ, ತಿನ್ನಲು ಬಿಸ್ಕತ್ತು ತಿಂಡಿಗಳನ್ನು ಬ್ಯಾಗಿನಲ್ಲಿಟ್ಟುಕೊಂಡು ಬಂದು ಮೇಲಿಡುವನು.

[೨೮]

ಮನೆಯವರೆಲ್ಲಾ ಬಂದು ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋದ ನಂತರ, ಬಾಗಿಲು ಹಾಕಿಕೊಂಡರೆ ಅವನು ಹೊರಗೆ ಬರುತ್ತಿದ್ದುದು ಬೆಳಗಾದ ನಂತರವೇ !

ಒಂದು ಶನಿವಾರ ಸಾಯಂಕಾಲ ಅನಿಲ ಬೇಗನೆ ಮನೆಗೆ ಬಂದ. ಬರುವಾಗ ಕನಕಂ ಸಹ ಬಂದಳು. ಅವಳು ಬಹಳ ಬೇಗ ಗೋದಮ್ಮ, ಮಂಜುಳೆಯರೊಡನೆ ಹೊಂದಿಕೊಂಡಳು. ಕನಕಂ ಫಿಲಂ ತಾರೆ ಎಂದು ತಿಳಿದನಂತರವಂತೂ ಅವರ ಆಶ್ಚರ್ಯಕ್ಕೆ ಎಣೆಯೇ ಇಲ್ಲ.

ತಾರೆಯರೆಂದರೆ ಹೇಗೆ ಹೇಗೆಯೋ ಇರುತ್ತಾರೆಂದು ಅವರು ತಿಳಿದು ಕೊಂಡಿದ್ದರು. ಮೊಳಕೈವರೆವಿಗೆ ರವಿಕೆ ತೊಟ್ಟು, ಮೈತುಂಬ ಸೆರಗು ಹೊದ್ದುಕೊಂಡು, ಹಣೆಯಲ್ಲಿ ದೊಡ್ಡದಾಗಿ ಕುಂಕುಮ ಇಟ್ಟುಕೊಂಡವಳು ತಾರೆಯಾಗುವುದು ಹೇಗೆ–ಎಂದು ಸಂದೇಹವು ಸಹ ಬಂದಿತು.

ಅವಳ ವಿಷಯವನ್ನೆಲ್ಲಾ ಕೇಳಿ ತಿಳಿದುಕೊಂಡರು. ಅವಳೂ ಅವಳ ಗಂಡನೂ ಪಾರ್ಟು ಮಾಡುತ್ತಾರೆಂದು ಕೇಳಿ ಬೆರಗಾದರು. ಕನಕಂ ವಾಸವದತ್ತಾದಲ್ಲಿ ತಾನು ವಹಿಸಿದ್ದ ಪಾತ್ರವನ್ನು ಜ್ಞಾಪಿಸಿದ ನಂತರ ಅವರು ನಂಬಬೇಕಾಯಿತು.

ಚೆನ್ನಾಗಿ ಕತ್ತಲಾದನಂತರ ಕನಕಂ ತಾನು ಮನೆಗೆ ಹೋಗಬೇಕೆಂಬುದಾಗಿ ಹೇಳಿದಳು.

ಆದರೆ ಮಂಜುಳೆ ಊಟ ಮಾಡಿಕೊಂಡೇ ಹೋಗಬೇಕೆಂದು ಬಲಾತ್ಕಾರ ಮಾಡಿ ಇರಿಸಿಕೊಂಡಳು.

ಊಟವಾದ ನಂತರ ಅವಳು ಮನೆಗೆ ಹೋಗುವ ಮಾತು ಬಂತು. ಡ್ರೈವರ್ ಏಳು ಗಂಟೆಯ ಟ್ರೈನ್ನಲ್ಲಿ ಹೊರಟು ಹೋಗಿದ್ದ. ಅನಿಲನೇ ಹೋಗಿ ಬಿಟ್ಟು ಬರಬೇಕಾಯಿತು.

" ಅಕ್ಕ ! ನೀವುಗಳೂ ಬನ್ನಿ. ಕನಕಂಳನ್ನು ಬಿಟ್ಟು, ಸಿನಿಮಾ ನೋಡಿಕೊಂಡು ಬರೋಣ "

ಅದರ ಮೇಲೆ ಮತ್ತಷ್ಟು ಚರ್ಚೆಯಾಯಿತು. ಕನಕಂ ಸಹ ಸಿನಿಮಾಗೆ

ಬರಬೇಕೆಂದೂ, ಅವಳನ್ನು ಬಿಟ್ಟು ಎಲ್ಲರೂ ಮನೆಗೆ ಬರುವುದೆಂದೂ ನಿರ್ಧರ ವಾಯಿತು.

ಎಲ್ಲರೂ ಸಿದ್ಧವಾಗಿ ಹೊರಟು ನಿಂತರು.

ಅನಿಲ ಮೊದಲೇನೋ ಹೊರಡಿರಿ ಎಂದು ಹೇಳಿಬಿಟ್ಟಿದ್ದ. ಆದರೆ ಅವರ ಉಡಿಗೆ ತೊಡಿಗೆಗಳನ್ನು ನೋಡಿದ ಮೇಲೆ ಯಾಕೆ ನಿನಿಮಾಗೆ ಹೋಗಬೇಕೆಂದು ಸೂಚಿಸಿದೆ–ಎಂದು ಅವನಿಗೇ ಮನಸ್ಸು ಹಿಂದಕ್ಕೆ ಹೊಡೆಯಿತು.

ಕರೆದು ಆಗಿಹೋಗಿತ್ತು. ಗತ್ಯಂತರವಿಲ್ಲದೇ ಎಲ್ಲರನ್ನೂ ಕರೆದು ಕೊಂಡು ಹೊರಟ.

ಎರಡು ಮೂರು ದಿನಗಳಾದನಂತರ ಅನಿಲ ಸೂಕ್ಷ್ಮವಾಗಿ ಈ ವಿಷ ಯವನ್ನು ಗೋದಮ್ಮನೊಡನೆ ಪ್ರಸ್ತಾಪಿಸಿದ.

ಮಾತು ಎಷ್ಟೇ ನಯವಾಗಿ ಹೇಳಲಾಗಿದ್ದರೂ ಅದು ಗೋದಮ್ಮ ನನ್ನು ಇರಿಯಿತು.

ಅನಿಲ ತಮ್ಮನಾದರೂ ಹಣಗಾರನಾದುದರಿಂದ ಹೆರವನಂತೆಯೂ, ಆ ಮನೆಯು ಹೆರವರ ಮನೆಯಂತೆಯೂ ಗೋದಮ್ಮನ ಮನಸ್ಸಿಗೆ ಭಾಸವಾಗಿತ್ತು.

" ಬಡವರಾದ ನಾವು ನಿನ್ನ ಅಂತಸ್ತಿಗೆ ತಕ್ಕ ಹಾಗಿರುವುದಕ್ಕೆ ಆಗುತ್ತದೇನಪ್ಪ "

ಅಕ್ಕನ ಬಾಯಿಂದ ಆ ಮಾತು ಬರುವುದೆಂದು ತಮ್ಮ ನಿರೀಕ್ಷಿಸಿರಲಿಲ್ಲ.

" ನಾನು ಹೇಳಿದುದನ್ನು ನೀನು ತಪ್ಪಾಗಿ ತಿಳಿದುಕೊಂಡೆಯಕ್ಕ. ನಾನು ಬೇರೆ ಎಂದೂ, ನೀವು ಬೇರೆ ಎಂದೂ ಎಂದೂ ನನ್ನ ಮನಸ್ಸಿನಲ್ಲಿ ಬಂದಿಲ್ಲ. ನಿನಗೇಕೆ ಹಾಗೆ ತೋರುತ್ತದೆಯೋ ನನಗೆ ಅರ್ಥವಾಗುವುದಿಲ್ಲ "

ಅದು ನಿಜ. ಎಂದೂ ಅನಿಲ ಆ ರೀತಿ ನಡೆದುಕೊಂಡಿರಲಿಲ್ಲ. ತಾನಾಡಿದ ಮಾತು ತಪ್ಪಾಯಿತೆಂದು ಆಕೆಗೆ ತೋರಿತು.

ಗೋದಮ್ಮ ತಮ್ಮ ಹೇಳಿದುದಕ್ಕೆ ಉತ್ತರ ಕೊಡಲಾಗಲಿಲ್ಲ.

" ನಾನು ಹೇಳುವುದನ್ನು ಸರಿಯಾಗಿ ಅರ್ಥ ಮಾಡಿಕೋ. ನೀವು

ಇಲ್ಲಿದ್ದೀರಿ. ಯಾರಾದರೂ ನನ್ನ ಸ್ನೇಹಿತರು ಇಲ್ಲಿ ಬಂದು ಹೋಗುತ್ತಾ ಇರುತ್ತಾರೆ. ನಾನೂ ನಿಮ್ಮನ್ನು ಎಲ್ಲಿಗಾದರೂ ಕರೆದುಕೊಂಡು ಹೋಗ ಬೇಕಾಗುತ್ತದೆ. ನೋಡಿದವರು ನೀವೆಲ್ಲಾ ನನ್ನವರೆಂದೇ ಅಂದು ಕೊಳ್ಳುತ್ತಾರೆ. ಹಾಗಿರುವಾಗ ನೀವು ಸರಿಯಾಗಿಲ್ಲದಿದ್ದರೆ ಚೆನ್ನಾಗಿರುವುದಿಲ್ಲ"

ಮಾತು ಮೊದಲಿಗೇ ಬಂದಿತ್ತು. ಆಕೆ ಏನು ತಾನೇ ಹೇಳಿಯಾಳು?

" ನಿಮಗೆಲ್ಲಾ ಒಂದಿಷ್ಟು ಬಟ್ಟೆ ಬರೆಗಳನ್ನು ಮಾಡಬೇಕೆಂದಿದ್ದೇನೆ. ಅದನ್ನು ಹೇಳುವುದಕ್ಕಾಗಿಯೇ ಈ ಮಾತು ಎತ್ತಿದೆ "

ದೂರವೆಂದುಕೊಂಡಿದ್ದ ತಮ್ಮ ಬಲು ಹತ್ತಿರಕ್ಕೆ ಬಂದಂತೆ ಗೋದಮ್ಮನಿಗಾಯಿತು. ಎಂದೋ ಎತ್ತಿ ಆಡಿಸುತ್ತಿದ್ದ ತಮ್ಮ ತನ್ನ ಕೈಯಲ್ಲಿದ್ದಂತೆ ಇಂದೂ ತನ್ನವನಾಗಿಯೇ ಇದ್ದಾನೆಂದು ಕೊಂಡಳು.

ಒಂದೆರಡು ದಿನಗಳಲ್ಲಿಯೇ ಕನಕಂಳನ್ನು ಕಂಡು, ಮಂಜುಳೆಯನ್ನೂ ಗೋದಮ್ಮನವರನ್ನೂ ಕರೆದುಕೊಂಡು ಹೋಗಿ ಬಟ್ಟೆ ಬರೆಗಳನ್ನು ತೆಗೆದು ಕೊಡಬೇಕೆಂದು ಅನಿಲ ಹೇಳಿದ.

"ನೀವೇ ಯಾಕೆ ಕರೆದುಕೊಂಡು ಹೋಗಿ ಕೊಡಿಸಬಾರದು ?"

ಅನಿಲನಿಗೆ ಕಷ್ಟಕ್ಕಿಟ್ಟುಕೊಂಡಿತು.

"ಕೊಡಿಸಬಹುದು. ಅಕ್ಕನನ್ನೇ ಆದರೆ ಕರೆದುಕೊಂಡು ಹೋಗುತ್ತಿದ್ದೆ. ಮಂಜುಳೆ ಸಂಕೋಚಪಡಬಹುದು. ನಾನು ಬಲಾತ್ಕಾರ ಮಾಡುವುದು ಚೆನ್ನಾಗಿರುವುದಿಲ್ಲ. ನೀನಾದರೆ ಹೆಂಗಸು. ಬೇಕು ಬೇಕಾದ್ದನ್ನೆಲ್ಲಾ ಬಲಾತ್ಕಾರ ಮಾಡಿ ತೆಗೆದುಕೊಡಬಹುದು."

ಕನಕಂ ತುಂಟತನದ ನಗುವನ್ನು ನಗುತ್ತಾ

"ಈಗೀಗ ನೀವು ಹೆಂಗಸರ ಮನಸ್ಸನ್ನು ಸರಿಯಾಗಿ ಅರ್ಥಮಾಡಿ ಕೊಳ್ಳುತ್ತಿರುವಂತಿದೆ."

"ಹೌದು. ನಿನ್ನನ್ನು ಅರ್ಥಮಾಡಿಕೊಂಡ ನಂತರ ಎಲ್ಲರನ್ನೂ ಅರ್ಥ ಮಾಡಿಕೊಳ್ಳಬಹುದು."

ಎಂದು ಹೇಳಿ, ಅವಳ ಕೆನ್ನೆ ಚಿವುಟಿದ.

"ಬಡ್ಜೆಟ್ಟು ಎಷ್ಟು ಸಾಂಕ್ಷನ್ ಮಾಡಿದ್ದೀರಿ ?"

ಎಂದವಳು ಕೆನ್ನೆಯನ್ನು ಬಿಡಿಸಿಕೊಳ್ಳುತ್ತಾ ಕೇಳಿದಳು.

"ಅದೇನು ಇಷ್ಟೇ ಎಂದು ನಿಗದಿ ಮಾಡಿಲ್ಲ. ಯಾರಾದರೂ ನೋಡಿದರೆ ಬಡವರ ಮನೆಯವರು ಎಂದುಕೊಳ್ಳದಷ್ಟು ಮಾಡಬೇಕು."

ಕನಕಂ ಒಪ್ಪಿಕೊಂಡಳು.

"ಕನಕಂ. ಮಂಜುಳೆಗೆ ಬರಿಕೊರಳು, ಬರಿಗೈ. ನಾಲ್ಕು ನಾಲ್ಕು ಬಳೆ, ಒಂದೆಳೆಯ ಸರವಾದರೂ ತೆಗೆದುಕೊಡಬೇಕು."

ಅನಿಲನಿಂದ ಅವಳೊಂದು ಬ್ಲಾಂಕ್ ಚೆಕ್ ತೆಗೆದುಕೊಂಡಳು.

ಅದೇ ದಿನ ಸಾಯಂಕಾಲ ಅನಿಲ ಅಚ್ಯುತನಿಗೆ ಫೋನ್ ಮಾಡಿ ಬರಬೇಕೆಂದು ಹೇಳಿದ.

ಸ್ಟುಡಿಯೋದಲ್ಲಿ ಕೆಲಸ ಮುಗಿಯಲು ಅಚ್ಯುತ ಒಂದು ಗಂಟೆಯ ಹೊತ್ತು ಕಾಯಬೇಕಾಯಿತು.

ಅನಿಲ ಅವನನ್ನು ಕಾರಿನಲ್ಲಿ ಕರೆದುಕೊಂಡು ಹೋಗುತ್ತಾ-

"ಅಕ್ಕಾ ನಿಮಗೆ ಒಂದಿಷ್ಟು ಬಟ್ಟೆಗಳನ್ನು ಮಾಡಬೇಕೆಂದು ಹೇಳಿದ್ದಾಳೆ."

ಅವನಿಗಾಗಲೇ ಅದರ ಸುಳಿವು ಗೊತ್ತಾಗಿತ್ತು. ಆಳಿನಷ್ಟು ಮೈಯನ್ನು ಗುಬ್ಬಿಯಷ್ಟು ಮಾಡಿಕೊಂಡು-

"ಈಗೇನೂ ಅಂತಹ ಅವಸರವಿಲ್ಲ. ಊರಿನಿಂದ ಬಟ್ಟೆಗಳನ್ನು ತಂದಿದ್ದೇನೆ, ಅವೇ ಇವೆ."

"ನೀವು ಸಂಕೋಚಪಡಬೇಡಿ, ಅಚ್ಯುತ್. ಈಸಲ ಬರುವ ಭತ್ತವನ್ನೆಲ್ಲಾ ಮಾರಿ ಅಕ್ಕ ಹಣ ಕೊಡುವುದಾಗಿ ಹೇಳಿದ್ದಾಳೆ"

ಅವನನ್ನು ಬಟ್ಟೆ ಅಂಗಡಿಗೆ ಕರೆದುಕೊಂಡು ಹೋಗಿ ಅನಿಲ ಸೂಟುಗಳಿಗಾಗಿ ಬಟ್ಟೆಗಳನ್ನು ನೋಡಲಾರಂಭಿಸಿದ.

"ಇದೆಲ್ಲಾ ಬೇಡ. ಪಂಚೆ, ಬನಿಯನ್ನುಗಳು ಸಾಕು"

ಅನಿಲನೆಷ್ಟು ಹೇಳಿದರೂ ಅಚ್ಯುತ ಕೇಳಲಿಲ್ಲ. ಅದೇ ಅಂಗಡಿಯಲ್ಲಿ ಆರೆಂಟು ಷರ್ಟುಗಳಿಗೆ ಸಿಲ್ಕ್ ಬಟ್ಟೆ ತೆಗೆದುಕೊಂಡು ಹೊಲಿಯುವುದಕ್ಕೆ

ಕೊಟ್ಟ. ಜವಳಿ ಅಂಗಡಿಗೆ ಹೋಗಿ ನಾಲ್ಕು ಜೊತೆ ಜರತಾರೀ ಪಂಚೆಗ ಳನ್ನೂ, ನಾಲ್ಕು ಶಲ್ಯಗಳನ್ನೂ ಕೊಂಡುಕೊಂಡ.

ಪೇಟೆಯಿಂದ ಹೊರಡುವ ವೇಳೆಗಾಗಲೇ ಎಂಟು ಗಂಟೆಯಾಗಿತ್ತು. ಮೌಂಟ್ ರೋಡಿಗೆ ಬಂದು ಕಾಫೀ ತೆಗೆದುಕೊಳ್ಳುತ್ತಿದ್ದಾಗ ಅನಿಲನಿಗೆ ತಟ್ಟನೆ ಏನೋ ಹೊಳೆಯಿತು.

ಬೇಗ ಹೊರಗೆ ಬಂದು ಪುನಃ ಮಿಂಟ್ ರೋಡಿನ ಚೌಕಕ್ಕೆ ಬಂದು ಚಿನ್ನದಲ್ಲಿ ಸುತ್ತಿದ್ದ ನೂರೆಂಟು ತುಳಸೀ ಮಣಿಯ ಸರವನ್ನು ತೆಗೆದುಕೊಂಡ.

ಅದಕ್ಕಾಗಿ ಏಳೆಂಟು ಅಂಗಡಿಗಳನ್ನು ಹುಡುಕ ಬೇಕಾಯಿತು.

ಅವರು ಮನೆಗೆ ಬರುವ ವೇಳೆಗೆ ಕನಕಂ ಮಂಜುಳೆಯನ್ನೂ ಗೋದಮ್ಮನನ್ನೂ ಪೇಟೆಗೆ ಕರೆದುಕೊಂಡು ಹೋಗಿ ಬೇಕಾದಷ್ಟು ವ್ಯಾಪಾರ ಮಾಡಿಕೊಂಡು ಬಂದಿದ್ದಳು. ನಾಲ್ಕು ಸಿಲ್ಕ್ ಸೀರೆಗಳನ್ನೂ, ಕೆಲವು ಸಾಧಾರಣವಾದ ಸೀರೆಗಳನ್ನೂ ತಂದಿದ್ದಳು. ಬ್ಲೌಸ್, ಲಂಗಾ, ಬಾಡಿ ಗಳನ್ನು ಹೊಲೆಯುವುದಕ್ಕೆ ಹಾಕಿದ್ದಳು. ಚಪ್ಪಲಿ, ಷೂಸ್‌ಗಳನ್ನೂ, ಶೃಂಗಾರ ದ್ರವ್ಯಗಳನ್ನೂ ತೆಗೆದು ಕೊಟ್ಟದ್ದು ದಲ್ಲದೇ, ತನ್ನ ಖರ್ಚಿನಲ್ಲಿ ಮಂಜುಳೆಗೊಂದು ವ್ಯಾನಿಟೀ ಬ್ಯಾಗ್ ಕೊಂಡು ತಂದಿದ್ದಳು.

ಗೋದಮ್ಮ ತಮಗಾಗಿ ನಾಲ್ಕು ಬಣ್ಣದ ಸೀರೆಗಳಷ್ಟನ್ನೇ ತೆಗೆದು ಕೊಂಡಿದ್ದಳು.

ಆಗತಾನೇ ಬಂದ ಅನಿಲ ಅಚ್ಯುತರಿಗೆ ಹಠಾತ್ತನೆ ಮಂಜುಳೆಯ ಗುರುತೇ ಸಿಕ್ಕಲಿಲ್ಲ. ಅಷ್ಟು ಹೊತ್ತಿಗಾಗಲೇ ಕನಕಂ ಅವಳಿಗೆ ಅಲಂಕಾರ ಮಾಡಿದ್ದಳು.

ಮೂರು ಬೆಟ್ಟಗಲದ ಜರತಾರೀ ಅಂಚಿದ್ದ ಕೆಂಪು ರೇಷ್ಮೆಯ ಸೀರೆ ಯನ್ನು ಉಡಿಸಿದ್ದಳು. ಹೊಳೆಯುವ ಜರತಾರೀ ಚುಕ್ಕೆಗಳಿದ್ದ ಮಾಸಲು ಬಿಳಿಯ ಸಿಲ್ಕ್ ಬ್ಲೌಸ್ ತೊಡಿಸಿದ್ದಳು. ಕಾಲಿನಲ್ಲಿ ಹೈ ಹೀಲ್ಡ್ ಷೂ ಗಳಿದ್ದವು. ಪಾಲಿಷ್ ಹಾಕಿದ ಕೈ ಕಾಲು ಉಗುರುಗಳು ಹೊಳೆಯು ತ್ತಿದ್ದುವು. ಮೊದಲೇ ಅರುಣ ವರ್ಣದಿಂದಿದ್ದ ತುಟಿಗಳು ಲಿಪ್‌ಸ್ಟಿಕ್‌ನಿಂದ ರಕ್ತವರ್ಣವಾಗಿದ್ದುವು. ತಿದ್ದಿದ ಹುಬ್ಬು ನೀಳವಾಗಿತ್ತು. ಕೈಯಲ್ಲಿ ಬಳೆ

ಗಳೂ, ಕೊರಳಲ್ಲಿ ಎರಡೆಳೆಯ ಸರವೂ ಇದ್ದಿತು. ಹೆರಳು ಹಾಕಿದ ಮೇಲೆ ಕೆದರಿದ್ದ ಮುಂಗೂದಲು ಹಾರುತ್ತಿತ್ತು. ತಿರುಗಿದಾಗ ವಜ್ರದ ಮೂಗುತಿಯೂ, ಬಳೆಗಳಂತೆ ಆಡುತ್ತಿದ್ದ ಓಲೆಗಳೂ ಮಿಂಚುತ್ತಿದ್ದವು. ಮಾಟವಾದ ಮುಖಕ್ಕೆ ಸಣ್ಣ ಕುಂಕುಮದ ಬೊಟ್ಟು ಒಪ್ಪುತ್ತಿತ್ತು. ವ್ಯಾನಿಟೀ ಬ್ಯಾಗ್ ಸೋಫಾದ ಮೇಲೆ ಪಕ್ಕದಲ್ಲಿ ಬಿದ್ದಿತ್ತು.

ನಾಚಿಕೆಯಿಂದ ಮಂಜುಳೆಯ ಕೆನ್ನೆಗಳು ಕೆಂಪಾಗಿದ್ದವು. ಅವಳು ದೃಷ್ಟಿಯನ್ನು ತಗ್ಗಿಸಿ ಕುಳಿತಿದ್ದಳು.

ಅನಿಲ ಅಚ್ಯುತರು ಬಂದು ಕುಳಿತುಕೊಂಡ ನಂತರ ಗೋದಮ್ಮ—

" ಒಳ್ಳೇ ಜೊತೆ ಮಾಡಿ ಕಳಿಸಿದೆಯಪ್ಪಾ, ನಮಗೆ. ಕನಕಳದು ಹಿಡಿದಿದ್ದೇ ಹಟ. ಮಂಜುಳೆಯನ್ನು ಮದುವಣಗಿತ್ತಿಯಾಗಿ ಮಾಡಿದ್ದಾಳೆ"

" ನೀನೇನು ತೆಗೆದುಕೊಂಡೆಯಕ್ಕಾ "

" ನನಗೇಕೆ ? ನಾನು ಬಾಳಿ ಬದುಕಬೇಕಾದವಳೇ. ನನಗೂ ಬಲಾತ್ಕಾರ ಮಾಡಿ ನಾಲ್ಕು ಸೀರೆಗಳನ್ನು ತೆಗೆದುಕೊಂಡಿದ್ದಾಳೆ "

ಅನಿಲ ಅಕ್ಕನಿಗಾಗಿ ತಂದಿದ್ದ ತುಲಸೀ ಮಾಲೆಯನ್ನು ತೆಗೆದುಕೊಟ್ಟ.

ಅದನ್ನು ನೋಡಿ ಆಕೆಗೆ ಬಹಳ ಸಂತೋಷವಾಯಿತು. ಗೋದಮ್ಮನ ಬಳಿ ಒಂದು ಮಾಲೆಯಿತ್ತು. ಅದು ಕಿತ್ತು ಹೋಗಿತ್ತು. ಬೆಳ್ಳಿ ತಂತಿಯಲ್ಲಿ ಕಟ್ಟಿಸಬೇಕೆಂದು ಬಲು ದಿನಗಳಿಂದ ಆಲೋಚಿಸುತ್ತಲೇ ಇದ್ದಳು. ಆಲೋಚನೆ ಕಾರ್ಯರೂಪಕ್ಕೆ ಬಂದಿರಲಿಲ್ಲ.

ಎಲ್ಲರೂ ಮನೆಗೆ ಬರುವಾಗ ಎಷ್ಟೋ ಮಾತನಾಡಬೇಕೆಂದು ಬಂದಿದ್ದರು. ಆದರೆ ಎಲ್ಲರೂ ಸುಮ್ಮನಿದ್ದರು.

ಮಂಜುಳೆ ಮಾತನಾಡುವಂತೆಯೇ ಇರಲಿಲ್ಲ. ಗೋದಮ್ಮನಿಗೆ ಸಂತೋಷದಿಂದ ಕೊರಳು ಕಟ್ಟಿ ಬರುತ್ತಿತ್ತು. ಅಚ್ಯುತ ಗೋದಮ್ಮನಿಗೆ ತನಗಾಗಿ ತಂದಿದ್ದ ಪಂಚೆಗಳನ್ನು ತೋರಿಸಿ, ಅನಿಲನನ್ನು ಪ್ರಶಂಸೆ ಮಾಡಬೇಕೆಂದಿದ್ದ. ಆದರೆ ಇಲ್ಲಿ ಬಂದಿದ್ದ ಪದಾರ್ಥಗಳನ್ನು ನೋಡಿ ತನ್ನ ಪಂಚೆ ಷರಟುಗಳು ಅತ್ಯಲ್ಪವೆಂದುಕೊಂಡ.

ಆಗ-ಆಗ ಅವನ ಮನಸ್ಸಿಗೊಂದು ಆಲೋಚನೆಯು ಬಂದಿತು. ತನ್ನ ಹೆಂಡತಿಯ ಕಡೆಗೆ ನೋಡಿದ. ಅವಳು ಸಿಂಗರಿಸಿದ ದಂತದ ಗೊಂಬೆಯಂತೆ

ಕುಳಿತಿದ್ದಳು. ಇವಳಿಗಾಗಿ ಅನಿಲ ಇವೆಲ್ಲವನ್ನೂ ಮಾಡುತ್ತಿರುವನೇ-ಎಂದು ಅವನ ಮನಸ್ಸಿಗೆ ತೋರಿತು.

ಕೂಡಲೇ ಆ ಭಾವವನ್ನು ಮನಸ್ಸಿನಿಂದ ಕಿತ್ತುಹಾಕಲು ಪ್ರಯತ್ನ ಮಾಡಿ "ಅಣ್ಣನ ನಿರ್ಮಲ ಪ್ರೇಮದಲ್ಲಿ ಕೊಳಕು ಹುಡುಕುತ್ತಿದ್ದೇನೆಯಲ್ಲಾ" ಎಂದುಕೊಂಡ.

ಅಚ್ಯುತ ಅನಿಲನನ್ನು ಅಣ್ಣನಂತೆ ಕಾಣಲು ಮೊದಲು ಮಾಡಿದ್ದ. ತಮ್ಮನನ್ನು ಕರೆಯುವಂತೆ ಕರೆಯಬೇಕೆಂದು ಎಷ್ಟೋ ಬಾರಿ ಹೇಳಿದ್ದ. ಆದರೆ ಅನಿಲ ಬಹುವಚನದಲ್ಲಿಯೇ ಕರೆಯುತ್ತಿದ್ದ.

ಮೌನವನ್ನು ಒಡೆಯುತ್ತಾ ಕನಕಂ-

"ನಾನಿನ್ನು ಮನೆಗೆ ಹೋಗುತ್ತೇನೆ."

ಗೋದಮ್ಮ ಇಲ್ಲಿಯೇ ಊಟಮಾಡಬೇಕೆಂದು ಹೇಳಿದಳು. ಮಂಜುಳ ಕನಕಂಳ ಕೈ ಹಿಡಿದು ನಿಲ್ಲಿಸಿಕೊಂಡಳು.

"ಊಟವಾದ ಮೇಲೆ ತಾನೇ ಹೇಗೆ ಹೋಗುವೆ? ನನ್ನಿಂದ ಈಗ ನಿನ್ನನ್ನು ಬಿಟ್ಟು ಬರಲಾಗುವುದಿಲ್ಲ."

ಎಂದು ಅನಿಲ ಅಡ್ಡಿ ಮಾತು ಹೇಳಿದ.

"ತಮ್ಮದಯವೇನೂ ಬೇಕಿಲ್ಲ. ಡ್ರೈವರನನ್ನು ಇರುವುದಕ್ಕೆ ಹೇಳಿದ್ದೇನೆ. ಹಿಂದೂಸ್ಥಾನ್ ತೆಗೆದುಕೊಂಡು ಹೋಗುತ್ತೇನೆ. ನಾಳೇ ಬೆಳಗಾಗ ಬರುತ್ತಾ ಷಣ್ಮುಗಂ ತರುತ್ತಾನೆ."

ಎಂದು ನಗುತ್ತಾ ಉತ್ತರ ಹೇಳಿದಳು.

# ೨೩

ಅನಿಲ ಮಂಜುಳೆಗಾಗಿ ಇವೆಲ್ಲವನ್ನೂ ಮಾಡುತ್ತಿರುವನೋ ಎಂದು ಅಚ್ಯುತನ ಮನಸ್ಸಿಗೆ ಬಂದ ಸಂದೇಹವು ಪೂರ್ಣ ನಿಜವಾಗಿಯೂ ಇರಲಿಲ್ಲ. ಅದು ಪೂರ್ಣವಾಗಿ ಸುಳ್ಳೂ ಆಗಿರಲಿಲ್ಲ.

ಮಂಜುಳೆ, ಗೋದಮ್ಮ, ಅಚ್ಯುತ ಇವರುಗಳು ಕೊಡಂಬಾಕಂಗೆ ಬಂದು ತಿಂಗಳು ದಿನದ ಮೇಲಾಗಿತ್ತು. ಅನಿಲ ಮಾಮೂಲಿನಂತೆ ತನ್ನ ಕೆಲಸಕ್ಕೆ ಹೋಗಿ ಬರುತ್ತಿದ್ದ. ಮನೆಯು ಮೊದಲಿನಂತೆ ಬಿಕೋ ಎಂದಿರಲಿಲ್ಲ. ಮನೆಗೆ ಬಂದವರು ಮೂರು ಮಂದಿಯಾದರೂ ಅದು ತುಂಬಿದಂತಿದ್ದುದಲ್ಲದೇ, ಸಂಸಾರದಂತೆಯೂ ಕಂಡು ಬರುತ್ತಿತ್ತು.

ಮನೆಯಲ್ಲಿ ಎಲ್ಲರೂ ಅನಿಲನೊಂದಿಗೆ ಸಲಿಗೆಯಿಂದಲೇ ನಡೆದುಕೊಳ್ಳುತ್ತಿದ್ದರು. ಎಲ್ಲಿಯಾದರೂ ಹೋಗಬೇಕಾದರೆ, ಏನಾದರೂ ಬೇಕಾದರೆ ಅವನನ್ನು ಧಾರಾಳವಾಗಿ ಕೇಳುತ್ತಿದ್ದರು.

ಮಂಜುಳೆಯು ಸಹ ಇದರಿಂದ ಬೇರೆಯಾಗಿರಲಿಲ್ಲ. ಸಾಧ್ಯವಾದಷ್ಟು ಅವನ ಕೆಲಸಗಳನ್ನು ತಾನೇ ಮಾಡುತ್ತಿದ್ದಳು. ರಾತ್ರಿ ಅವನು ಮನೆಗೆ ಬರುವುದು ಹೊತ್ತಾದರೆ ಐತಾಳನನ್ನು ಕರೆಯದೇ ತಾನೇ ಕಾದಿದ್ದು ಬಡಿಸುತ್ತಿದ್ದಳು. ಒಂದೊಂದು ದಿನ ಗೋದಮ್ಮನೋ ಅಚ್ಯುತನೋ ಅನಿಲನ

ಜೊತೆಗೆ ಕುಳಿತುಕೊಳ್ಳುವರು. ಅವರಿಲ್ಲದಿದ್ದರೂ ಮಂಜುಳೆಯು ಅವನಿಗೆ ಬೇಜಾರಾಗದಂತೆ ಕುಳಿತು ಮಾತನಾಡುತ್ತಾ ಇರುವಳು. ಅವನು ಮಹಡಿಯ ಮೇಲೆ ಹೋದನಂತರ ತಾನೇ ಹಾಲು ತೆಗೆದುಕೊಂಡು ಹೋಗಿ ಕೊಡುವಳು.

ಪ್ರಾತಃಕಾಲ ಕಾಫಿಯನ್ನು ಕುಡಿದೇ ಅನಿಲನು ಹಾಸಿಗೆಯನ್ನು ಬಿಟ್ಟು ಏಳುವುದು ರೂಢಿಯಾಗಿತ್ತು. ಮಂಜುಳ ಬೇಗ ಕಾಫಿಯನ್ನು ಮಾಡಿ ತೆಗೆದುಕೊಂಡು ಹೋಗಿ ಕೊಡುವಳು. ಅದನ್ನು ಅವನು ಮುಗಿಸುವ ವೇಳೆಗೆ ಮುಖ ಕ್ಷೌರಕ್ಕೆ ಅಣಿಮಾಡುವಳು. ಸ್ನಾನ ಮಾಡಿ ಹೊರಗೆ ಬರುವ ವೇಳೆಗೆ ಬಟ್ಟೆಗಳನ್ನು ಸಿದ್ಧಪಡಿಸುವಳು. ಅನಂತರ ತಾನೇ ಕೆಳಗೆ ಹೋಗಿ ಅವನಿಗೆ ತಿಂಡಿಯನ್ನೂ, ಪುನಃ ಕಾಫಿಯನ್ನೂ ತಂದು ಕೊಡುವಳು.

ಸಾಯಂಕಾಲ ಬೇಗ ಬಂದರೆ ಅವನು ಸ್ನಾನಮಾಡಿಕೊಂಡು ಕೆಳಗೆ ಬಂದನಂತರ ಕೆಳಗಿನ ಜಗುಲಿಯಲ್ಲಿಯೋ, ಬೀದಿಯ ಕೋಣೆಯಲ್ಲಿಯೋ ಕಾಫಿಯನ್ನು ಕೊಟ್ಟು ಮಾತನಾಡುತ್ತಾ ಕುಳಿತಕೊಳ್ಳುವಳು.

ಅನಿಲನಿಗೆ ಮಾವಿರಲಿ, ಮತ್ತೇನಾದರೂ ಆಗಲೀ ಬೇಡವಾಗಿ ಅವಳೊಡನೆ ಮಾತನಾಡುತ್ತಲೇ ಕುಳಿತು ಬಿಡುವನು.

ಅನೇಕ ಬಾರಿ ತನ್ನ ಮನೋಭಾವವನ್ನು ಅವಳಿಗೆ ವ್ಯಕ್ತಪಡಿಸಬೇಕೆನ್ನಿಸುವುದು. ಪ್ರಣಯ ಭಿಕ್ಷೆಯನ್ನು ಕೇಳಬೇಕೆಂದು ಮನಸ್ಸಾಗುವುದು. ಆದರೆಂದೂ ಅವನಿಗೆ ಆ ಧೈರ್ಯವು ಬರಲಿಲ್ಲ.

ಅನಿಲನಿಗೆ ಸ್ತ್ರೀಯರಿಂದಲೇ ಪ್ರಚೋದಿತನಾಗಿ ರೂಢಿಯಾಗಿದ್ದಿತು. ಅದೂ ತನಗಿಂತ ವಯಸ್ಸಾದ ಹೆಂಗಸರಿಂದ. ಮನಸ್ಸು ತನಗಿಂತ ವಯಸ್ಸಾದವರಲ್ಲಿ ಬೇಜಾರುಗೊಂಡು ಸಣ್ಣವರಿಗಾಗಿ ಹಾತೊರೆಯುತ್ತಿತ್ತು. ಅವರನ್ನು ತಾನೇ ಪ್ರಚೋದಿಸಿ, ಅವರನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂದು ಮನಸ್ಸಿನಲ್ಲಿಯೇ ಆಲೋಚಿಸುವನು. ಅವರು ಎದುರಿಗೆ ಬಂದಾಗ ಮನಸ್ಸು ಹಿಂಜರಿಯುವುದು.

ಅದರಲ್ಲಿಯೂ ಮಂಜುಳೆಯ ವಿಷಯದಲ್ಲಿ ಅತಿಕ್ರಮಿಸಲು ಅವನಿಗೆ ಹೆದರಿಕೆಯಾಗುವುದು. ಕನಕಳಂತೆ ನಡೆಗು ನಿಂತರೆ? ನಡೆದು ನಿಂತರೂ

ಅವಳ ಸ್ನೇಹವು ಉಳಿದಿತ್ತು. ಆದರೆ ಮಂಜುಳೆಯು ಹಾಗೆಯೇ ಉಳಿದು ಕೊಳ್ಳುವಳೆಂಬ ನಂಬಿಕೆಯೇನು?

ಅದರಿಂದ ಏನಾದರೂ ಗಲಾಟೆಯಾಗಿ ಮಂಜುಳೆಯೂ ಮುನಿದು, ಮಿಕ್ಕವರೂ ಕುಪಿತರಾದರೆ? ಎಲ್ಲರೂ ಮನೆಯನ್ನು ಬಿಟ್ಟು ಹೊರಟು ಹೋದರೆ?

ಈಗ ಇರುವ ಮಂಜುಳೆಯ ಸಾನ್ನಿಧ್ಯವೂ ಇಲ್ಲದೇ ಹೋಗುತ್ತದೆ. ಆದರಿಂದವನು ಯಾವುದನ್ನೂ ಇತ್ಯರ್ಥವಾಡದೇ ತೊಳಲುತ್ತಿದ್ದನು.

ಆದರೆ ಆ ವಿಷಯವನ್ನು ಅವನು ಇತ್ಯರ್ಥವಾಡಲೇ ಬೇಕಾದ ಪ್ರಮೇಯವೊಂದು ಪ್ರಾಪ್ತವಾಯಿತು.

ಜೀವ್ ಸ್ಟುಡಿಯೋದಲ್ಲಿ ಆಸಿಲನು ಅಭಿನಯಿಸುತ್ತಿರುವ ಚಿತ್ರ ವೊಂದು ತಯಾರಾಗುತ್ತಿತ್ತು.

ಅಲ್ಲಿಯೇ ಮಲಬಾರೀ ಭಾಷೆಯ ಚಿತ್ರದ ಷೂಟಿಂಗ್ ಭರದಿಂದ ಸಾಗು ತ್ತಿತ್ತು. ಆಗ ತಾನೇ ಕೊಚ್ಚಿನ್ನಿನ ಕೆಲವು ಮುಸ್ಲಿಂ ಶ್ರೀಮಂತರು ದೇಶಭಾ ಷೆಯ ಉದ್ಧಾರಕ್ಕೆಂದು ಚಿತ್ರ ನಿರ್ಮಾಣದಲ್ಲಿ ಕೈಹಾಕಿದ್ದರು.

ಅದರ ನಾಯಕಿಯಾಗಿ ಸರೋಜಿನಿ ಎಂಬಾಕೆ ಅಭಿನಯಿಸುತ್ತಿದ್ದಳು.

ಮಲಬಾರಿನ ಹೆಂಗಸರು ರೂಪವತಿಯರೆಂದು ಹೇಳುತ್ತಾರೆ. ಅದರ ಸತ್ಯಾಸತ್ಯತೆಗಳು ಹೇಗಿದ್ದರೂ ಸರೋಜಿನಿಯಂತೂ ಅತ್ಯಂತ ರೂಪವತಿ.

ಸುಮಾರು ನಲವತ್ತು ವರ್ಷಗಳ ಹಿಂದೆ ಕೊಚ್ಚಿನ್ನಿನ ನೂರಾರು ತಂಬು ರಾನರಲ್ಲಿ ಒಬ್ಬರಾದ ಕೇರಳ ವರ್ಮರು ರಾಜ್ಯಕ್ಕೆ ಎಪ್ಪತ್ತಾರನೆಯ ತಲೆ ಯಾಗಿದ್ದರು. ಎಪ್ಪತ್ತಾರೆಂದರೆ ರಾಜ್ಯಾಧಿಕಾರವು ಬರುವುದರೊಳಗಾಗಿ ಇವರ ತಲೆ ನೆಲಕ್ಕಿಳಿದು ಹೋಗುವುದು ಆ ದೇಶದಲ್ಲಿ ಸರ್ವೇಸಾಧಾರಣ ವಾಗಿದ್ದಿತು. ಅವರು ಐದರೊಳಗಿನ ಸ್ಥಾನ ಸಂಪಾದಿಸಬೇಕೆಂದು ಇಂಗ್ಲೆಂಡಿಗೆ ಹೋದರು. ಅವರ ಕುಂಟು ನ್ಯಾಯ ಅಲ್ಲಿಯೂ ಕುಂಟಿತು. ಬರುತ್ತಾ ಅವರೊಂದಿಗೆ ಒಬ್ಬ ಯೂರೋಪಿಯನ್ ಹುಡುಗಿ ಬಂದಳು.

ಹೀಗೆ ರಾಜ್ಯ ಲಕ್ಷ್ಮಿಯನ್ನು ಹುಡುಕಿಕೊಂಡು ಹೋದ ಕೇರಳವರ್ಮರು ಗೃಹಲಕ್ಷ್ಮಿಯನ್ನು ಕರೆತಂದರು.

ಅದರೊಂದಿಗೆ ಬರಬೇಕಾದುದೆಲ್ಲವೂ ಬಂದಿತು. ಬಾಂಧವರು ಆತ ಕುಲದಿಂದ ಹೊರಗು ಎಂಬಂತೆ ನೋಡತೊಡಗಿದರು. ಅವರ ಮಗಳೇ ಸರೋಜಿನಿ.

ಅವಳು ವಿದ್ಯಾವತಿಯೂ, ಕಳಾವತಿಯೂ ಆದಳು. ಮೊದಲೇ ರೂಪವತಿಯೂ, ಧನವತಿಯೂ ಆಗಿದ್ದಳು. ಆದರೂ ಒಳ್ಳೆಯ ಸಂಬಂಧವು ಬರಲಿಲ್ಲ. ಸಾಧಾರಣ ಸಂಬಂಧ ಮಾಡಲು ಕೇರಳ ವರ್ಮರಿಗೆ ಇಷ್ಟವಿರಲಿಲ್ಲ.

ಅವಳು ಮಗನಾಗಿಯೇ ಮನೆಯಲ್ಲಿದ್ದಳು.

ಮೊದಲ ಮಲಬಾರೀ ಚಿತ್ರಕ್ಕೆ ಬಹಳ ಕಷ್ಟದಿಂದ ಒಪ್ಪಿಸಿ ಅವಳನ್ನು ಆರಿಸಲಾಯಿತು.

ಸರೋಜಿನಿ ಎತ್ತರವಾದ ಪುಷ್ಟವಾದ ಹೆಣ್ಣು. ಪುಷ್ಟವೆಂದರೆ ಸ್ಥೂಲವಲ್ಲ. ಮೂಳೆಗಳನ್ನು ಮುಚ್ಚಿ ದೇಹವನ್ನು ಮಾಟವಾಗಿ ಅಳವಡಿಸಿರುವಷ್ಟು. ಅದು ದಂತಕ್ಕಿಂತಲೂ ಬಿಳುಪಾದ ಬಣ್ಣ. ಸ್ಪರ್ಶದಲ್ಲಿ ಸುಖವಾಗ್ಯವಷ್ಟೇ ಮೃದು.

ಅವಳು ಯಾರೊಂದಿಗೂ ಹೆಚ್ಚಾಗಿ ಮಾತನಾಡುತ್ತಿರಲಿಲ್ಲ. ಆದರೆ ಅವಳ ಪ್ರಕಾಶಮಾನವಾದ ವಿಶಾಲವಾದ ನೇತ್ರಗಳೇ ಅದನ್ನಾಡುತ್ತಿದ್ದುವು. ತಂದೆಯ ಕಡೆಯಿಂದ ಬಂದಿದ್ದ ಕೇಶರಾಶಿಯು ಅವಳ ಮುಖಚಂದ್ರನನ್ನು ಸುತ್ತುವರಿದ ಕಪ್ಪು ಮೇಘಗಳಂತಿದ್ದುವು.

ದಿನವೂ ಅನಿಲ ಅವಳನ್ನು ನೋಡುತ್ತಿದ್ದ. ನೋಡದಿರಲು ಸಾಧ್ಯವೇ ಇರಲಿಲ್ಲ. ಆದರೆ ಮಾತನಾಡುವ ಸಂದರ್ಭ ಬಂದಿರಲಿಲ್ಲ.

ಒಂದು ದಿನ ಮಧ್ಯಾಹ್ನ ಅನಿಲ ಹೊರಗಡೆ ಕುಳಿತು ಷರಬತ್ತು ಕುಡಿಯುತ್ತಿದ್ದ.

ಮದರಾಸ್‌ನಲ್ಲಿ ಕಾಂಗ್ರೆಸ್ ಸರ್ಕಾರವು ಬಂದಿತ್ತು. ಅದರೊಂದಿಗೇ ಪಾನನಿರೋಧವೂ ಬಂದಿದ್ದಿತು. ಅಲ್ಲಿ ಮಾದಕ ದ್ರವ್ಯಗಳು ಬಹಿರಂಗವಾಗಿ ಸಿಕ್ಕದೇ ಎರಡು ತಿಂಗಳುಗಳಾಗಿದ್ದುವು. ಛೆಟ್ಟಿಯಾರು ಕಳ್ಳಮಾಲು ಸ್ಟುಡಿಯೋಗೆ ಬರಲು ಒಪ್ಪುತ್ತಿರಲಿಲ್ಲ.

ಸರೋಜಿನಿಯೂ ಬಂದು ಕುಳಿತುಕೊಂಡಳು.

ಅನಿಲನು ತಿರುಗಿ ನೋಡುತ್ತಲೇ ಹುಡುಗ ಆಕೆಗೂ ಒಂದು ಗ್ಲಾಸಿನಲ್ಲಿ ಷರಬತ್ತು ತಂದು ಕೊಟ್ಟ.

ಅವಳಾಗತಾನೇ ಸ್ಟುಡಿಯೋಗೆ ಬಂದಿದ್ದಳು. ಐದು ಗಂಟೆಯ ವೇಳೆಗೆ ಸಿದ್ಧವಾಗ ಬೇಕಾಗಿತ್ತು.

ಅವನಿಗೆ ಸರೋಜಿನಿಯನ್ನು ನೋಡಿ ಅಬ್ಬಾ ಎನ್ನಿಸಿತು. ಅಷ್ಟು ಹತ್ತಿರವಾಗಿ ಅವಳನ್ನು ನೋಡಿರಲಿಲ್ಲ. ಅದೇನು ಕಣ್ಣುಗಳು. ಎಂತಹ ಹುಬ್ಬು. ಆ ಮೂಗು. ಆ ಕಪೋಲಗಳು. ಆ ತುಟಿಗಳು. ಯಾರ ಅಧರಗಳಾದರೂ ಹೂವಿನ ದಳಗಳಂತೆ ಇಷ್ಟು ಮೃದುವಾಗಿ ಇಷ್ಟು ರಕ್ತವರ್ಣವಾಗಿರಲು ಸಾಧ್ಯವೇ ?

ಅವಳು ಮಾತನಾಡಿದಳು !

ಧ್ವನಿಯೂ ಎಷ್ಟು ಮಧುರವಾಗಿದೆ.

" ನಿಮ್ಮೊಂದಿಗೆ ಬಹಳ ದಿನಗಳಿಂದಲೂ ಮಾತನಾಡಬೇಕೆಂದಿದ್ದೆ "

ಪುನಃ ತನಗೆ ಮತ್ತೊಬ್ಬ ಕಾಂಚನ ಲತೆಯು ಗಂಟುಬೀಳುತ್ತಾಳೋ-ಎಂದು ತೋರಿತು.

" ನಾನೇ ಬಂದು ತಮ್ಮನ್ನು ನೋಡಬೇಕೆಂದಿದ್ದೆ. ತಾವು ದೊಡ್ಡ ವಿದುಷಿ ಎಂದು ಕೇಳಿದ್ದೇನೆ "

ಅದಕ್ಕುತ್ತರವಾಗಿ ನಕ್ಕಳಷ್ಟೇ!

" ನಿಮ್ಮ ವಿಷಯ ಹೇಗೋ ಕಿವಿಗೆ ಬಿದ್ದಿತು. ಅನಂತರ ಆಸಕ್ತಿಯಿಂದ ವಿಚಾರಿಸಿ ತಿಳಿದುಕೊಂಡೆ "

" ನನ್ನ ವೈಯುಕ್ತಿಕ ವಿಷಯ ನಿನಗೇಕೆ ?" ಎನ್ನಬೇಕೆಂದು ತೋರಿತು.

ಆದರೆ ಅವಳ ಕಣ್ಣುಗಳಲ್ಲಿ ಕಂಡ ಸಹಾನುಭೂತಿ, ಆಸಕ್ತಿಗಳು ಆ ಮಾತನಾಡದಂತೆ ತಡೆದವು.

"ನೀವು ಈಗೀಗ ಬ್ರಹ್ಮಚಾರಿಗಳಂತೆ ಬಹಳ ಸಂಯಮದಿಂದ ಇದ್ದೀರೆಂದು ಕೇಳಿದ್ದೇನೆ."

ಇನ್ನು ತಡೆಯಲಾರದೇ ಅಸಮಾಧಾನದಿಂದ ಅರ್ಧ ಅರ್ಧವಾಗಿ-

"ನನ್ನ ವೈಯುಕ್ತಿಕವಾದ ವಿಷಯವನ್ನೇ ಮಾತನಾಡುತ್ತಿದ್ದೀರಿ."

"ಹೌದು. ಅದರಿಂದ ನಿಮಗೆ ಅಸಮಾಧಾನವೇನು ? ನನಗೆ ಅದರಲ್ಲಿ ಬಹಳ ಆಸಕ್ತಿಯಿದೆ."

ಸರೋಜಿನಿಯ ಮಾತಿನ ಬಗೆಯನ್ನು ನೋಡಿ ಅನಿಲನಿಗೆ ಆಶ್ಚರಿಯಾಯಿತು. ಅವನು ಆಶ್ಚರಿಪಡುತ್ತಿರುವಂತೆಯೇ–

"ಒಬ್ಬರು ಮತ್ತೊಬ್ಬರ ವೈಯುಕ್ತಿಕ ವಿಷಯಗಳನ್ನು ಗಮನಿಸುವುದು ಸರಿಯಲ್ಲವೆಂದು ಪ್ರತಿಯೊಬ್ಬರೂ ಹೇಳುತ್ತಾರೆ. ಅದನ್ನು ನೀವೂ ತಪ್ಪು ಎನ್ನುವುದಾದರೆ ಎಲ್ಲರೂ ಆ ತಪ್ಪು ಮಾಡುತ್ತಾರೆ—"

ಅವನು ಮಾತನಾಡುತ್ತಾನೆಯೋ ನೋ ಎಂದು, ಗಳಿಗೆ ತಡೆದು–

"ಈಗ ನಿಮ್ಮ ವಿಷಯವನ್ನೇ ನೋಡಿ. ಹದಿನೈದು ಇಪ್ಪತ್ತು ದಿನಗಳಿಂದಲೂ ನೀವು ನನ್ನನ್ನು ನೋಡುತ್ತಿದ್ದೀರಿ. ಆದರೆ ಈಗ ಎರಡು ಗಳಿಗೆಗಳಿಂದ ನನ್ನನ್ನು ನೋಡುತ್ತಿರುವ ರೀತಿಗೂ ಆ ಹಿಂದಿನ ರೀತಿಗೂ ವ್ಯತ್ಯಾಸವಿಲ್ಲವೇನು ?"

ಆ ದೃಷ್ಟಿಗಳೆರಡಕ್ಕೂ ಬೇಧವಿತ್ತು. ಅವಳು ಹೇಳಿದುದು ನಿಜ.

"ಮಿ॥ ಅನಿಲ್. ನಾನು ಯಾವಾಗಲೂ ಸ್ಪಷ್ಟವಾಗಿಯೇ ಮಾತನಾಡುವುದು. ನಾನು ನಿಮ್ಮನ್ನು ನೋಡುತ್ತಿದ್ದೆ. ನನ್ನ ದೃಷ್ಟಿಯಲ್ಲಿ ಬದಲಾವಣೆಯಾದುದರಿಂದಲೇ ಈ ದಿನ ನಾನು ಬಂದು ನಿಮ್ಮನ್ನು ನೋಡಿದ್ದು, ನೀವೇಕೆ ಮಾತನಾಡುವುದಿಲ್ಲ—"

"ಏನು ಹೇಳಬೇಕೆಂದೇ ನನಗೆ ತೋರುತ್ತಿಲ್ಲ."

ಎಂದವನು ಕಳಾರಹಿತವಾಗಿ ನಗುತ್ತಾ ಹೇಳಿದ.

"ನೀವು ಎಷ್ಟೋ ಮಂದಿ ಹೆಂಗಸರನ್ನು ನೋಡಿದ್ದೀರಿ. ಅವರಾರಿಂದಲೂ ನಿಮಗೆ ತೃಪ್ತಿಯಾಗಿಲ್ಲ. ಮೊದಲು ಅವರಲ್ಲಿ ಆಕರ್ಷಣೆಯಾಗಬಹುದು. ಆದರದು ಮರು ಭೂಮಿಯಲ್ಲಿ ಬಿದ್ದ ನೀರಿನಂತೆ ಒಣಗಿ ಹೋಗುತ್ತದೆ. ಹಾಗೇಕೆ ಆಗುತ್ತದೆಂದು ಎಂದಾದರೂ ಯೋಚಿಸಿದ್ದೀರಾ ?"

ಇಲ್ಲ. ಅವನು ಯೋಚಿಸಿರಲಿಲ್ಲ. ಆ ಭಾವನೆ ಬಂದಿದ್ದರೂ ತಿಳಿಯೋಡದಂತೆ ಬಂದು ಹೋಗಿತ್ತು. ಅರ್ಥವಾಗಿರಲಿಲ್ಲ.

"ಅದೇಕೆಂಬುದನ್ನು ತಿಳಿದುಕೊಳ್ಳಬೇಕೆಂದು ನಿಮಗೆಂದೂ ಅನಿಸ್ನಿಸಲಿಲ್ಲವೇ ?"

ತನ್ನ ಲೋಪ ಬಾಯಿ ಬಿಟ್ಟು ಹೇಳಲು ಅವನಿಗೆ ಮನಸ್ಸು ಬರಲಿಲ್ಲ.

"ಅದರ ಕಾರಣವನ್ನು ನಾನು ಹುಡುಕುತ್ತೇನೆ. ಹಾಗೆ ಹುಡುಕುವುದರಲ್ಲಿ ನನಗೆ ಬಹಳ ಆಸಕ್ತಿ. ನೀವು ಅದಕ್ಕೆ ಸಹಾಯ ಮಾಡುತ್ತೀರಾ ?"

"ನೀವು ಹೇಳಿದಂತೆ ಕೇಳುತ್ತೇ"ನೆಂಬಂತೆ ಅನಿಲ ಅವಳ ಕಡೆಗೆ ನೋಡಿದ.

"ಹಾಗಾದರೆ ಈ ದಿನ ಸಾಯಂಕಾಲ ಕೆಲಸ ಮುಗಿನ ನಂತರ ನನ್ನೊಂದಿಗೆ ಬನ್ನಿ"

ಅವಳು ಹೇಳಿದ್ದಂತೆ ಅನಿಲ ಎಷ್ಟೋ ಮಂದಿ ಹೆಂಗರನ್ನು ನೋಡಿದ್ದ. ಆದರೆ ಸರೋಜಿನಿಯಂತಹವಳನ್ನು ಅವನೆಂದೂ ನೋಡಿರಲಿಲ್ಲ. ಅವಳೊಬ್ಬ ವಿಚಿತ್ರ ಸ್ತ್ರೀ ಎಂದು ಸ್ಟುಡಿಯೋದಲ್ಲಿ ಮಾತನಾಡುತ್ತಿದ್ದುದನ್ನು ಕೇಳಿದ್ದ. ಆದರೆ ಈಗ ಅವನಿಗೆ ವಾಸ್ತವವಾಗಿ ಅವಳು ವಿಚಿತ್ರ ವ್ಯಕ್ತಿ ಎಂದು ತೋರಿತು.

ಅವಳ ವ್ಯಕ್ತಿತ್ವ, ಅವಳ ಮಾತುಗಳು ಒಂದೂ ಅರ್ಥವಾಗದೇ ತೊಳಲುತ್ತಿದ್ದ.

ಸಂಜೆ ಅನಿಲನ ಕಾರಿನಲ್ಲಿ ಅಡ್ಯಾರ್‌ನಲ್ಲಿದ್ದ ತನ್ನ ಮನೆಯ ಕಡೆಗೆ ಹೋಗುತ್ತಾ, ಸರೋಜಿನಿ-

"ನೀವು ಇನ್ನೂ ನಾಲ್ಕೈದು ದಿನ ನಮ್ಮ ಮನೆಯಲ್ಲಿಯೇ ಇರಬೇಕು"

ಮನೆಗೆ ಹೋದ ಕೂಡಲೇ ಶಂಕರನಾಯರ್ ಇಬ್ಬರಿಗೂ ಓವಲ್‌ಟೀ ತಂದುಕೊಟ್ಟ.

"ಇವನನ್ನು ಕಳಿಸಿ ನಿಮ್ಮ ಬಟ್ಟೆ ಬರೆಗಳನ್ನು ತರಿಸಿದರೆ ಒಳ್ಳೆಯದಲ್ಲವೇ?"

ಓವಲ್‌ಟೀ ಕುಡಿಯುತ್ತಾ ಅವಳು ಸೂಚಿಸಿದಳು

ಅನಿಲ ಕಾಗದ ಬರೆದುಕೊಟ್ಟ, ಟ್ಯಾಕ್ಸಿಯನ್ನು ಮಾಡಿಕೊಂಡು ಹೋಗಿ ತನ್ನ ಬಟ್ಟೆ ಬರೆಗಳನ್ನು ತೆಗೆದುಕೊಂಡು ಬರುವಂತೆ ನಾಯರ್‌ಗೆ ಹೇಳಿದ.

ಕೋಡಂಬಾಕಂನಿಂದ ಬಟ್ಟೆಬರೆಗಳು ಬರುವವರೆವಿಗೂ ಅನಿಲ ಸರೋಜಿನಿಯರು ಮಾತನಾಡುತ್ತಾ ಕುಳಿತಿದ್ದರು. ಬಂದನಂತರ ಸ್ನಾನಕ್ಕೆದ್ದರು.

ಅನಿಲ ಸ್ನಾನಮಾಡಿಕೊಂಡು ಪಂಚೆಯುಟ್ಟು ಸಿಲ್ಕ್ ಜುಬ್ಬಾ ಹಾಕಿಕೊಂಡು ಹೊರಗೆ ಬಂದ.

ಅಷ್ಟು ಹೊತ್ತಿಗೆ ಸರೋಜಿನಿಯ ಸ್ನಾನ ಮುಗಿದಿತ್ತು. ಬಿಳಿಯ ವಾಯಿಲ್ಲನ್ನು ಸೀರೆಯಂತೆ ಉಟ್ಟು, ಮೊಳಕಾಲಿನ ವರೆವಿಗೆ ಬಿದ್ದಿದ್ದ ಕೂದಲನ್ನು ಸಿಕ್ಕುಂಟಿಗೆಯಿಂದ ಬಿಡಿಸುತ್ತಾ ಹಾಸಿಗೆಯ ಮೇಲೆ ಕುಳಿತಿದ್ದಳು.

ಬಂದ ಅನಿಲನನ್ನು ತನ್ನ ಪಕ್ಕದಲ್ಲಿ ಕೂರಿಸಿ ಅವನ ಬೆನ್ನ ಮೇಲೆ ಕೈ ಹಾಕಿ.––

"ಸ್ನಾನವಾಯಿತೇನು?"

ಎಂದು ತಿಳಿದಿದ್ದ ವಿಷಯವನ್ನೇ ಕೇಳಿದಳು.

ಅನಿಲ ಅಷ್ಟು ನಯವಾದ, ನೀಳವಾದ, ಕಪ್ಪಾದ ಕೇಶರಾಶಿಯನ್ನು ನೋಡಿರಲಿಲ್ಲ.

ಅವನು ನೋಡುತ್ತಿದ್ದಂತೆಯೇ ಆ ನಿರಾಭರಣ ಸುಂದರಿಯು ಕೂದಲನ್ನೆಲ್ಲಾ ಹಿಂದೆಳೆದುಕೊಂಡು ಅಳಕವಾಗಿ ಮುಡಿ ಹಾಕಿಕೊಂಡಳು.

ಕೈಎತ್ತಿದಾಗ ಬಾಹು ಲತೆಗಳನ್ನೂ ವಕ್ಷೋಜಗಳನ್ನೂ ಮುಖ ಬಿಂಬವನ್ನೂ ನೋಡಿದ. ಮರುಗಳಿಗೆಯೇ ಅವಳೇನೆಂದು ಕೊಳ್ಳುವಳೋ ಎಂದು ದೃಷ್ಟಿಯನ್ನು ತಗ್ಗಿಸಿದಾಗ, ಕದಂಬಗಳಂತಹ ತೊಡೆಗಳು ಕಂಡುವು. ಅಲ್ಲಿಂದಲೂ ಕಷ್ಟದಿಂದ ಕಣ್ಣು ತೆಗೆದ.

ಸರೋಜನಿಗೆ ಅವನ ಅವಸ್ಥೆಯನ್ನು ಕಂಡು ನಗು ಬಂದಿತು.

ತಟ್ಟನವಳು ಅವನ ಭುಜಗಳ ಮೇಲೆ ಮೃದವಾದ ಕೈಗಳನ್ನು ಹಾಕಿ ಒಮ್ಮೆ ಅಲ್ಲಾಡಿಸಿ ನಗುತ್ತಾ—

"ಏನು ಯೋಚಿಸುತ್ತಿದ್ದೀರಿ?"

ಅದಕ್ಕುತ್ತರವಾಗಿ ಅವಳನ್ನು ಅಪ್ಪಿಕೊಳ್ಳಬೇಕೆಂದೆನಿಸಿತವನಿಗೆ.

ಕಣ್ಣುಗಳು ಆ ಕೋಣೆಯಲ್ಲಿ ಸುತ್ತಲೂ ನೋಡಿ, ಬೀರುವಿನಲ್ಲಿದ್ದ ಬಾಟಲುಗಳ ಮೇಲೆ ನಿಂತುವು.

ಆಗ ಸರೋಜಿನಿಯು ಮಂದಹಾಸ ಪರಿಪೂರಿತಳಾಗಿ.—

"ನೀವು ಮಾದಕ ಪದಾರ್ಥಗಳನ್ನು ತೆಗೆದುಕೊಳ್ಳಲು ನಾಸೀಗ ಬಿಡುವುದಿಲ್ಲ. ಮದ್ಯಗಳು ರತಿಯಲ್ಲಿ ಸುಖವನ್ನು ಹೆಚ್ಚಿಸುತ್ತವೆ-ಎಂದು ಅನೇಕರು ಭಾವನೆ ಮಾಡುತ್ತಾರೆ. ಅದು ತಪ್ಪು. ಮದ್ಯವು ಮನಸ್ಸನ್ನು ಜಾಗೃತಗೊಳಿಸುವುದಿಲ್ಲ. ಸುಪ್ತಗೊಳಿಸುತ್ತದೆ. ರತಿಯ ಸೂಕ್ಷ್ಮ ಸ್ಪರ್ಶಗಳನ್ನು ಅನುಭವ ಮಾಡಲು, ತನ್ಮೂಲಕ ಸುಖವನ್ನು ಪಡೆಯಲು, ಮನಸ್ಸು ಪೂರ್ಣ ಜಾಗೃತವಾಗಿರಬೇಕು. ನಾನಿಷ್ಟು ಸ್ಪಷ್ಟವಾಗಿ ಮಾತನಾಡುವುದು ನಿಮಗೆ ಅಸಹಜವಾಗಿ ಕಾಣಬಹುದು. ಹಾಗೇನೂ ಅಲ್ಲ. ರತಿ ಮತ್ತು ಅದರ ವಿಷಯವು ಅನೇಕರಿಗೆ ಭಯ ಅಥವಾ ತಪ್ಪೆನ್ನುವ ಭಾವನೆಯನ್ನು ಉಂಟುಮಾಡುತ್ತವೆ. ಎರಡನ್ನೂ ಉಂಟುಮಾಡಬಹುದು. ದೇಹಸಂಬಂಧವು ನಾಚಿಕೆಪಡುವಂತಹ ಅಂಶವೆಂದು ಭಾವಿಸುತ್ತಾರೆ. ಅದರಿಂದವರು ರತಿಯ ಪೂರ್ಣ ಸುಖವನ್ನು ಪಡೆಯಲಾರದೇ ಹೋಗುತ್ತಾರೆ. ಆತ್ಮವಂಚಕರಾದ ಅವರಿಗೆ ತಾವೇನು ಕಳೆದುಕೊಳ್ಳುತ್ತಿದ್ದೇವೆಂಬುದರ ಅರಿವಿಲ್ಲ. ರತಿಯು ಸುಂದರ. ಅತ್ಯಂತ ಸುಂದರತಮ."

ಸರೋಜಿನಿಗೆ ರತಿಯಲ್ಲಿ ಸುಖಾನುಭವ ಮಾಡುವುದು ಹೇಗೆಂದು ಚೆನ್ನಾಗಿ ತಿಳಿದಿತ್ತು. ಸುಖಾನುಭವದಲ್ಲಿ ಸ್ವಲ್ಪವೂ ಕೊರತೆಯಾಗದಂತೆ ಎಚ್ಚರವಾಗಿದ್ದಳು. ಸೂಕ್ಷ್ಮ ಸ್ಪರ್ಶವನ್ನು ಸಹ ಚೆನ್ನಾಗಿ ತಿಳಿದ, ಅದರಿಂದ ಪೂರ್ಣವಾಗಿ ಸುಖವನ್ನು ಪಡೆಯುವ ಅಂತಹ ಹೆಂಗಸನ್ನು ಅದುವರೆವಿಗೆ ಅನಿಲನು ಕಂಡಿರಲಿಲ್ಲ. ಯಾರೂ ಎಂದೂ ಮಾಡದಂತಹ ರೀತಿಯಲ್ಲಿ ಅವಳು ಅವನನ್ನು ಉದ್ರೇಕಿಸಿದಳು. ಹಾಗೆಯೇ ತೃಪ್ತಿಗೊಳಿಸಿದಳು.

ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಹೊರಗೆ ಬಂದನಂತರ ನಾಯರು ಜಿನ್, ಗ್ಲಾಸು, ಸೋಡಾಗಳನ್ನು ತಂದಿಟ್ಟ. ಅವರು ಮನದಣಿಯೆ ಕುಡಿದ ನಂತರ ಊಟ ಬಡಿಸಿದ.

ಸರೋಜಿನಿ ಬಾಯಿತುಂಬಾ ತಾಂಬೂಲವನ್ನು ಅಗೆಯುತ್ತಾ ಕುಳಿತಿರಲು, ಅನಿಲನು ಸಮೀಪಿಸಿ—

"ನೀವು ಹೇಳಿದ್ದು ಸರಿ. ನಾನು ಅನೇಕ ಮಂದಿ ಹೆಂಗಸರ ಸ್ನೇಹವನ್ನು ಮಾಡಿದ್ದೇನೆ. ಮಾಡುವಾಗ ಅವರಲ್ಲಿ ಆಕರ್ಷಿತನಾಗಿ, ಆಸೆಪಟ್ಟು,

ಬಯಸಿ, ಹಂಬಲಿಸಿದ್ದೇನೆ. ಆದರೆ ಕೆಲವು ದಿನಗಳಾಗುತ್ತಲೂ ಅವರುಗಳು ಅಪ್ರಿಯರಾಗುತ್ತಾ ಬರುತ್ತಾರೆ"

ಮಾತು ಕೇಳುತ್ತಾ ನಗುತ್ತಿದ್ದಳಾಕೆ !

ಅನಿಲ ಕಕ್ಕಾಬಿಕ್ಕಿಯಾಗಿ—

" ಈ ವಿಷಯ ಹೇಳುತ್ತೇನೆಂದಿರಲ್ಲವೇ ?"

"ಹೌದು. ಆದರೆ ಅದನ್ನು ಇದ್ದಕ್ಕಿದ್ದ ಹಾಗೆಯೇ ಹೇಳಲಾಗುವುದಿಲ್ಲ, ಅನಿಲ್. ಮೊದಲು ನೀವು ನನ್ನ ಮೇಲೆ ಪೂರ್ಣ ವಿಶ್ವಾಸವನ್ನಿಡಬೇಕು. ನಿಮ್ಮ ವಿಷಯವೆಲ್ಲಾ ನಾನು ಸರಿಯಾಗಿ ತಿಳಿದುಕೊಳ್ಳಬೇಕು"

ಸರೋಜಿನಿ ಅನಿಲನನ್ನು ಬೇರೊಂದು ಕೋಣೆಗೆ ಕರೆದುಕೊಂಡು ಹೋದಳು. ಅಲ್ಲಿ ಒಂದು ಕಡೆ ಮೇಜು ಕುರ್ಚಿಗಳನ್ನು ಹಾಕಿತ್ತು. ಮತ್ತೊಂದು ಕಡೆ ಸೋಫಾ ಇಟ್ಟು, ಅದರ ಪಕ್ಕದಲ್ಲಿ ಎತ್ತರವಾದ ಷೇಡೆಡ್ ಲ್ಯಾಂಪ್ ನಿಲ್ಲಿಸಿ, ಓದಲು ಅನುಮಾಡಲಾಗಿತ್ತು. ಮಗದೊಂದು ಕಡೆ ಮಂಚದ ಮೇಲೆ ಹಾಸಿಗೆಯನ್ನು ಹಾಕಿ, ಮಲಗಿ ಓದಲು ತಲೆಯ ಬದಿಯಲ್ಲಿ ದೀಪವಿಡಲಾಗಿತ್ತು.

ಅದೇ ಮಂಚದ ಮೇಲೆ ತಲೆ ಇಡುವ ದಿಂಬಿನಿಂದ ಹಿಡಿದು ಕಾಲಿಡುವ ಅಂಚಿನವರೆಗೆ ಪುಸ್ತಕಗಳನ್ನು ಬೀರುವಿನಲ್ಲಿ ಇಡುವಂತೆ ಸಾಲಾಗಿಡಲಾಗಿತ್ತು. ತೆಗೆದು ಓದುತ್ತಿದ್ದ ಪುಸ್ತಕವೊಂದು ಹಾಸಿಗೆಯ ಮಧ್ಯದಲ್ಲಿ ಬಿದ್ದಿತ್ತು.

ಆ ಹಾಸಿಗೆಯ ಮೇಲೆ ತಾನು ಕುಳಿತುಕೊಂಡು–

"ನೋಡಿದಿರಾ, ಈ ಪುಸ್ತಕಗಳನ್ನು. ಎಂದಾದರೂ ನೀವು ಎರ್ನಾಕುಲಂಗೆ ಬಂದರೆ ನನ್ನ ಪುಸ್ತಕ ಸಂಗ್ರಹವನ್ನು ತೋರಿಸುತ್ತೇನೆ. ಆ ಸಹಸ್ರಾರು ಪುಸ್ತಕಗಳಲ್ಲಿ ಇವು ಹಲ ಕೆಲವು ಮಾತ್ರ "

ಅವಳ ಮುಖವನ್ನೇ ನೋಡುತ್ತಿರಬೇಕು–ಎಂಬ ಇಷ್ಟದಿಂದ ಕುರ್ಚಿಯೊಂದನ್ನು ಎಳೆದು ಅನಿಲ ಕುಳಿತುಕೊಂಡ.

" ನಾನು ಲೈಂಗಿಕ ವಿಜ್ಞಾನವನ್ನು ಅರಿಯುವುದಕ್ಕಾಗಿಯೇ ಇದುವರೆವಿಗೆ ನನ್ನ ಜೀವನದ ಬಹು ಭಾಗವನ್ನು ಕಳೆದಿದ್ದೇನೆ. ಮುಂದೆಯೂ ಹಾಗೆಯೇ ಮಾಡಬೇಕೆಂದು ನನ್ನ ಆಶೆ. ಆ ಸಂಬಂಧವಾದ ಪುಸ್ತಕಗಳೆಲ್ಲ

ವನ್ನೂ ಕೂಡಿ ಹಾಕಿದ್ದೇನೆ. ಇದು ನಿಮಗೆ ಸರಿಯಾಗಿ ಅರ್ಥವಾಗದಿದ್ದರೆ ಕೆಲವರು ಸ್ಟಾಂಪುಗಳನ್ನು ಕೂಡಿ ಹಾಕುವಂತೆ ಪುಸ್ತಕಗಳನ್ನು ಕೂಡಿ ಹಾಕುತ್ತೇನೆಂದೂ, ಮತ್ತೆ ಕೆಲವರು ಇಸ್ಪೀಟಾಡುವಂತೆ ಅವುಗಳನ್ನು ಓದಿ ಅಭ್ಯಾಸ ಮಾಡುತ್ತೇನೆಂದೂ ಅಂದುಕೊಳ್ಳಿರಿ.

"ರತಿಶಾಸ್ತ್ರವೆಂದು ಹೇಳಿದ ಕೂಡಲೇ ಜನರು ಹೌಹಾರಿ ಬೀಳುತ್ತಾರೆ. ಅವರು ರತಿಯನ್ನು ಪಾಪಕಾರ್ಯವೆಂದುಕೊಂಡಿದ್ದಾರೆ. ಅವರು ಕೆಟ್ಟುದೇ ಅಲ್ಲದೇ ಇತರರಿಗೆ ಹೇಳಿ ಕೆಡಿಸುತ್ತಾರೆ. ಆ ಮೂಢಜನಗಳಂತೆ ನಾನು ರತಿಯನ್ನು ಪಾಪವೆಂದು ಕೊಳ್ಳುವುದಿಲ್ಲ. ಮನುಷ್ಯನ ಜನ್ಮವು ಪಾಪದಿಂದಾಗಿಲ್ಲ. ಅದು ಪ್ರೇಮದಿಂದ ಆಗಿದೆ. ಸ್ತ್ರೀ ಪುರುಷರು ಪ್ರವರ್ತರಾಗುವಂತಹ ರತಿಯು ಸಹಜವೂ ಸ್ವಾಭಾವಿಕವೂ ಆಗಿದೆ.

"ತಾನು ಮಾಡುವ ಎಲ್ಲ ಕಾರ್ಯಗಳಿಗೂ ರತಿಭಾವವೇ ಮೂಲವಾಗಿ, ಎಲ್ಲವೂ ಅದರಿಂದಲೇ ಪ್ರಚೋದಿತವಾಗಿದ್ದರೂ ಈ ಮೂಢ ಸಮಾಜವು ರತಿಯನ್ನೇ ತೆಗಳುತ್ತದೆ.

"ನಿಮ್ಮ ಕಡೆ ಹೇಗೋ ನನಗೆ ಗೊತ್ತಿಲ್ಲ. ನಮ್ಮ ಊರಿನ ಕಡೆ ಸ್ತ್ರೀ ಪುರುಷರು ಸ್ನಾನಕ್ಕಾಗಿ ಪುಷ್ಕರಿಣಿಗಳಿಗೆ ಬರುತ್ತಾರೆ. ಅವರೆಲ್ಲರೂ ಆಗ ಲಂಗೋಟಿಗಳನ್ನು ಕಟ್ಟಿಕೊಂಡು ಜನನೇಂದ್ರಿಯಗಳನ್ನು ಮುಚ್ಚಿಕೊಳ್ಳುತ್ತಾರೆ. ನನಗೆ ಅವರ ವರ್ತನೆಯು ವೈಪರೀತ್ಯವಾಗಿ ತೋರುತ್ತದೆ. ಲಂಗೋಟಿಗಳನ್ನು ಕಟ್ಟಿಕೊಂಡಿರುವುದಕ್ಕಾಗಿ ನಾಚಿಕೆಪಡಬೇಕು. ಹಾಗೆಯೇ ಇದ್ದರೆ ನಾಚಿಕೆ ಪಡಬೇಕಾದ ಕಾರಣವಿಲ್ಲ"

ಅನಿಲ ಬೆರಗಾಗಿ ಅವಳ ಕಡೆ ನೋಡುತ್ತಿದ್ದ.

"ನಿಮ್ಮನ್ನು ಇಲ್ಲಿಗೆ ಕರೆತಂದ ವಿಷಯವನ್ನು ಹೇಳುತ್ತೇನೆ, ಕೇಳಿರಿ. ಇಲ್ಲಿ ಲೈಂಗಿಕ ವಿಜ್ಞಾನದ ವಿವಿಧ ಪುಸ್ತಕಗಳಿವೆ. ಅವುಗಳಲ್ಲಿ ಅನೇಕವನ್ನು ಕಣ್ಣಿಲ್ಲದ ಸಮಾಜವು ಅಶ್ಲೀಲವೆನ್ನುತ್ತದೆ. ಆದರೆ ಇಲ್ಲಿ ಒಂದೇ ಒಂದು ಕೆಟ್ಟ ಪುಸ್ತಕ ಸಹ ಇಲ್ಲ. ಜ್ಞಾನಾರ್ಜನೆಯಲ್ಲಿ ಶೀಲ–ಶೀಲವಿಲ್ಲದ್ದು ಎಂದರೇನೋ ನನಗೆ ಅರ್ಥವಾಗುವುದಿಲ್ಲ.

"ನೀವು ಇಲ್ಲಿರುವ ಪುಸ್ತಕಗಳಷ್ಟನ್ನೂ ಓದಿ ತಿಳಿದುಕೊಂಡರೆ ಬೇಕಾದಷ್ಟಾಯಿತು.

" ಇಲ್ಲಿ ಇಂಗ್ಲೆಂಡ್ ದೇಶದ ಹೆವ್‌ಲಾಕ್ ಎಲ್ಲಿಸ್ ಬರೆದ ಪುಸ್ತಕಗಳಿವೆ. ಹಾಲೆಂಡಿನ ವಾನ್ ಡೆ ವೆಲ್‌ಡೇ, ಫ್ರಾನ್ಸಿನ ರೇಗಾರ್ಯ್, ಇಟಲಿಯ ಡಾ|| ಪ್ರೋಲೋ ಮಾಂಟೆಗಾಸಾ ಬರೆದ ಗ್ರಂಥಗಳಿವೆ. ಜರ್ಮನಿಯ ಮಹಾ ಪುರುಷರಾದ ಡಾ|| ವಿಲಿಯಂ ಸ್ಟೆಕೆಲ್, ಮ್ಯಾಗ್ನಸ್ ಹಿರ್ಸ್ಟ್‌ಫೀಲ್ಡ್ ಮತ್ತು ಕ್ರಾಫ್ಟ್ ಎಬಿಂಗ್‌ರು ಬರೆದ ಸಾಹಿತ್ಯವಿದೆ. ಅಮೇರಿಕ ಅನ್ವೇಷಕರಾದ ಆಲ್ಫ್ರೆಡ್ ಕೀಸಿಯವರ ಜಗತ್ತನ್ನೇ ಬೆರಗು ಮಾಡಿದ ಪುಸ್ತಕವಿದೆ.

" ಅಷ್ಟೇ ಅಲ್ಲ. ನೀವು ಸುಪ್ರಸಿದ್ಧ ಗ್ರೀಕ್ ವೇದಾಂತಿ ಸೋಕ್ರೆಟೀಸ್‌ನ ಹೆಸರು ಕೇಳಿದ್ದೀರೇನು ? ಅವನು ಗಂಡು ಹೆಣ್ಣುಗಳಿಬ್ಬರಲ್ಲಿಯೂ ಕೂಡುತ್ತಿದ್ದನೆಂದು ನಿರ್ಭಯವಾಗಿ ಹೇಳುವ ಪುಸ್ತಕಗಳಿವೆ. ರೋಮನ್ನರ ನಿಜಜೀವನದ ಮೇಲೆ ಬೆಳಕು ಚೆಲ್ಲುವ "ಡೈಲಾಗ್ಸ್ ಆಫ್ ಲ್ಯೂಸಾಸೀಗಾ" ಇದೆ. ಮಹಮದೀಯರು ಅಮೋಘವೆಂದು ಭಾವಿಸುವ ಸುಗಂಧ ವನವೆಂಬ ಪರ್ಷಿಯನ್ ಪುಸ್ತಕವಿದೆ.

" ಇವೆಲ್ಲಕ್ಕಿಂತಲೂ ಮೊದಲು ಕಾಮಶಾಸ್ತ್ರವನ್ನು ಬರೆದು ಮಹರ್ಷಿ ಎನ್ನಿಸಿಕೊಂಡ ವಾತ್ಸಾಯನನ ಕಾಮಸೂತ್ರಗಳಿವೆ "

ಒಂದೊಂದು ಪುಸ್ತಕವನ್ನೂ ತೆಗೆದು ತೋರಿಸುತ್ತಾ, ಅದರಲ್ಲಿರುವ ವಿಷಯವನ್ನು ಸರೋಜಿನಿಯು ಸೂಕ್ಷ್ಮವಾಗಿ ಹೇಳಿದಳು.

ಅನಿಲನು ಅಜ್ಞ ಬಾಲಕನಂತೆ—

" ಈ ವಯಸ್ಸಿನಲ್ಲಿಯೇ ನೀವಿಷ್ಟೊಂದು ಭಾಷೆಗಳನ್ನು ಹೇಗೆ ಕಲಿತುಕೊಂಡಿರಿ ?"

" ಇಲ್ಲಿರುವ ಪುಸ್ತಕಗಳೆಲ್ಲವೂ ಇಂಗ್ಲೀಷ್ ಭಾಷಾಂತರಗಳು. ನೀವು ಇಲ್ಲಿರುವ ಪುಸ್ತಕಗಳಲ್ಲಿ ಕೆಲವನ್ನಾದರೂ ಓದಲೇಬೇಕು. ನಿಮ್ಮಿಂದ ತಿಳಿದುಕೊಳ್ಳಬೇಕಾದುದೆಲ್ಲವನ್ನೂ ತಿಳಿದುಕೊಂಡ ನಂತರ ನಾನು ಹೇಳುವುದನ್ನು ಅರ್ಥ ಮಾಡಿಕೊಳ್ಳಬೇಕಾದರೆ ಇವುಗಳಲ್ಲಿ ಏನಾದರೂ ಓದಲೇಬೇಕು"

" ನೀವು ಹೇಳುವಷ್ಟು ಓದಿಕೊಳ್ಳಬಲ್ಲೆನೋ ಇಲ್ಲವೋ ಹೇಳಲಾರೆ. ಆದರೆ ನೀವು ಹೇಳಿದಂತೆ ಮಾಡಲು ಪ್ರಯತ್ನ ಮಾಡುತ್ತೇನೆ "

ಅವಳು ನಗುತ್ತಾ ಮುಂದೆ ಬಂದು ಅವನ ಕೆನ್ನೆಗಳೆರಡನ್ನೂ ಕೈಗಳಿಂದ ಸವರುತ್ತಾ—

" ನೀವು ಸ್ಪಷ್ಟವಾಗಿ ಮಾತನಾಡುತ್ತೀರಲ್ಲ. ಅದರಿಂದ ನನಗೆ ಬಹಳ ಸಂತೋಷವಾಗುತ್ತದೆ. ನೀವು ಪ್ರಯತ್ನಪಡುವಷ್ಟು ಪಡಿ. ನಾನೂ ಸಾಧ್ಯವಾದಷ್ಟು ತಿಳಿಸುತ್ತೇನೆ "

ಅನಿಲನು ಸರೋಜಿನಿಯ ಭುಜದ ಮೇಲೆ ತಲೆಯಿಟ್ಟು ನಿಂತು ಕೊಂಡನು. ಅದು ತಾಯಿಯನ್ನು ಅವಲಂಬಿಸಿ ನಿಲ್ಲುವ ಮಗುವಿನಂತೆ ಇದ್ದಿತು.

ಅಂದಿನಿಂದ ಅವರಿಬ್ಬರೂ ಒಟ್ಟಿಗೇ ಇರಲಾರಂಭಿಸಿದರು. ಸ್ಟುಡಿಯೋ ದಲ್ಲಿ ಕೆಲಸ ಮಾಡುವ ಕಾಲದಲ್ಲಿ ಬಿಟ್ಟರೆ ಅಗಲಿರುತ್ತಲೇ ಇರಲಿಲ್ಲ. ಮೊದ ಮೊದಲು ಸರೋಜಿನಿಯು ಅವನಿಗೆ ಏನೂ ಹೇಳಲಿಲ್ಲ. ಅವನಿಂದ ಏನನ್ನೂ ಕೇಳಿ ತಿಳಿದುಕೊಳ್ಳಲಿಲ್ಲ. ಎಳೆಬಿಸಿಲಿನಲ್ಲಿ ನಿರ್ಭಯವಾಗಿ ಹಾರುವ ಕಪೋತಗಳಂತೆ ಆ ಪ್ರೇಮಿಗಳು ವಿಹರಿಸುತ್ತಿದ್ದರು. ಅನಿಲನು ಜೀವನದಲ್ಲಿಯೇ ಕಂಡರಿಯದ ಎಷ್ಟೋ ಸುಖಗಳನ್ನು ಸರೋಜಿನಿಯ ಸಾನ್ನಿಧ್ಯದಲ್ಲಿ ಅನುಭವ ಮಾಡಿದನು. ಇನ್ನೂ ಅನುಭವಿಸುವುದಕ್ಕೆ ಹಾತೊರೆಯುತ್ತಿದ್ದನು.

ಅಧ್ಯಯನ ಹಾಗೂ ರತಿಕಾಲಗಳನ್ನುಳಿದು ವಿರಾಮವಿದ್ದಾಗ ಸರೋಜಿನಿಯು ಅನಿಲನ ವಿಷಯವನ್ನು ಕೇಳಿ ತಿಳಿದುಕೊಳ್ಳುತ್ತಿದ್ದಳು. ಯಾವುದನ್ನೂ ಬಿಡದೇ, ಗುಟ್ಟಿಸ್ಸದೇ, ಸಂಕೋಚವಿಲ್ಲದೇ ಅವನು ತನ್ನ ವಿಷಯಗಳೆಲ್ಲವನ್ನೂ ಹೇಳುವಂತೆ ಮಾಡುತ್ತಿದ್ದಳು. ಮೊದಮೊದಲು ಕೆಲವು ಅಂಶಗಳಲ್ಲಿ ಅವನು ಸುಳ್ಳು ಹೇಳಿದ್ದ. ಮುಂದೆ ಸಿಕ್ಕಿ ಬೀಳುತ್ತಿದ್ದ. ಆಗ ಸರೋಜಿನಿ ಅವನಿಗೆ ಪಷಟ್ಕಾರ ಹಾಕಿ ನಿಜ ಹೇಳಿಸುತ್ತಿದ್ದನು.

ಅನಿಲ ತನ್ನ ವಿಷಯವೆಲ್ಲವನ್ನೂ ಹೇಳಿದ. ತನ್ನ ಜೀವನದಲ್ಲಿ ಬಂದ ಎಲ್ಲ ಹೆಂಗಸರು ಹುಡುಗಿಯರ ವಿಷಯಗಳನ್ನು ಹೇಳಿದ. ಶ್ಯಾಮ ಲಮ್ಮನಿಂದ ಮೊದಲುಗೊಂಡು ತಿಳಿಸಿದ. ನಡುವೆ ಆಗಾಗ ಮಂಜುಳೆಯು ಬರುತ್ತಿದ್ದಳು. ಈಗ ಅವರೆಲ್ಲರೂ ತನ್ನ ಮನೆಯಲ್ಲಿರುವುದನ್ನು ಸಹ ಸೂಚಿಸಿದ.

ಒಂದೆರಡು ದಿನ ಸರೋಜಿನಿಯು ಅವನಿಂದ ಏನನ್ನೂ ಕೇಳಲಿಲ್ಲ. ತಾನೂ ಯಾವುದನ್ನೂ ಹೇಳಲಿಲ್ಲ. ಅವನ ವಿಷಯವನ್ನೇ ಕುರಿತು

ಯೋಚಿಸುತ್ತಿದ್ದಳು. ಆಗಾಗ ಅವನು ಹೇಳಿದ್ದುದರಲ್ಲಿ ಏನಾದರೂ ಮರೆತು ಹೋಗಿದ್ದರೆ ಕೇಳಿ ತಿಳಿದುಕೊಳ್ಳುತ್ತಿದ್ದಳು.

ಅನಂತರ ಒಂದು ದಿನ ಅವನನ್ನು ಅಧ್ಯಯನ ಭವನದಲ್ಲಿ ಕುಳ್ಳಿರಿಸಿಕೊಂಡು—

"ಅನಿಲ್ ! ನಾನು ನಿಮಗೆಷ್ಟು ಹೇಳುತ್ತೇನೆಂದು ಕೊಂಡಿದ್ದೆನೋ ಅಷ್ಟನ್ನು ಹೇಳುವುದು ಸಾಧ್ಯವೆಂದು ತೋರುವುದಿಲ್ಲ. ನನ್ನ ಬುದ್ಧಿ ಶಕ್ತಿಯನ್ನೆಲ್ಲಾ ಪ್ರಯೋಗಿಸಿ ಹುಡುಕಿದ್ದೇನೆ. ಆದರೆ ನಿಮ್ಮ ವಿಷಯ ವಷ್ಟೂ ನನಗೆ ಪೂರ್ಣವಾಗಿ ಗೊತ್ತಿಲ್ಲ. ಅದರಲ್ಲಿ ನೀವು ಹೇಳದೇ ಮುಚ್ಚಿಟ್ಟ ದೋಷವೂ ಇರಬಹುದು. ಅಥವಾ ನಿಮಗೂ ತಿಳಿಯದಿರುವ ದೋಷವೂ ಇರಬಹುದು. ನಾನು ಹೇಳುವುದರಿಂದ ನಿಮಗೆ ಹೆಚ್ಚು ಪ್ರಯೋಜನ ವಾಗುತ್ತದೆಯೋ, ಇಲ್ಲವೋ ಅದನ್ನೂ ಸಹ ಹೇಳಲಾರೆ.

"ನೀವು ಹೇಳಿದ್ದರಲ್ಲಿ, ನೀವು ಮಗುವಾಗಿದ್ದಾಗ ನಿಮ್ಮ ಮನಸ್ಸಿನ ಮೇಲೆ ಪರಿಣಾಮ ಮಾಡಿದಂತಹ ಘಟನೆಗಳೇನು ನಡೆದಿವೆ ಎಂಬುದನ್ನು ಗಮನಿಸುವಂತಿಲ್ಲ. ಅಂತೂ ಹುಟ್ಟಿದ ತಿಂಗಳು ದಿನದಲ್ಲಿಯೇ ನಿಮ್ಮ ತಾಯಿ ಸತ್ತು ಹೋದರು. ಅಕ್ಕ ತಾಯಿಯ ಸ್ಥಾನಕ್ಕೆ ಬಂದರು. ಅನೇಕ ಬಾರಿ ಹಾಗೆ ಬಂದವರೇ ಮಕ್ಕಳಿಗೆ ವಾಸ್ತವಶಃ ತಾಯಿಯಾಗುವುದುಂಟು. ಆದರೆ ನಿಮ್ಮ ವಿಷಯದಲ್ಲಿ ಹಾಗಾಗಲಿಲ್ಲವೆಂದು ಕಂಡು ಬರುತ್ತದೆ. ಅಕ್ಕ ಸರಿಯಾದ ತಾಯಾಗದಿದ್ದುದರಿಂದಲೂ, ತಂದೆಯು ಬಡತನದಿಂದ ನೋಯು ತ್ತಿದ್ದುದರಿಂದಲೂ ನೀವು ತಾಯಿ ತಂದೆಗಳಿಂದ ನಿರಾದರಣೆಯನ್ನು ಪಡೆದು ಜೀವನದಲ್ಲಿ ಪ್ರೇಮವನ್ನೇ ಕಾಣದಂತಹ ಮಗುವಾದಿರಿ. ಆ ಸಮಯದಲ್ಲಿ ಇನ್ನೊಬ್ಬರಿಗಿಂತಲೂ ನೀವು ಕೀಳು ಎಂಬ ಮನೋಭಾವವು ನಿಮ್ಮಲ್ಲಿ ಬೆಳೆದಿರಬಹುದು.

"ಅದಾದ ನಂತರ ನೀವು ಮಂಜುಳೆಯನ್ನು ನೋಡಿದಿರಿ. ಮಂಜುಳೆಯು ನಿಮ್ಮ ಜೀವನದಲ್ಲಿ ಮಿಂಚಿನಂತೆ ಆಗಾಗ ಬಂದು ಮಾಯ ವಾಗುತ್ತಿದ್ದರೂ ಅವಳ ಪ್ರಭಾವವು ನಿಮ್ಮ ಮೇಲೆ ಬಹಳವಾಗಿದೆ. ಅಚ್ಚಿನ ಸುತ್ತಲೂ ತಿರುಗುವ ಚಕ್ರದಂತೆ ನಿಮ್ಮ ಜೀವನ ಹೇಗೆ ಹೇಗೆ ಹರಿದರೂ ಆಕೆಯೇ ಅದರ ಕೇಂದ್ರವಾಗಿದ್ದಾಳೆ"

"ನೀವು ಮಂಜುಳೆಯನ್ನು ನೋಡಿದಾಗ ನಿಮಗೆ ಆಕೆಯಲ್ಲಿ ವಾಸ್ತವವಾದ ಪ್ರೇಮ ಉಂಟಾಯಿತೆಂದು ಹೇಳಲಾರೆ. ನಿಮ್ಮಲ್ಲಿಲ್ಲದುದನ್ನೆಲ್ಲಾ ನೀವು ಆಕೆಯಲ್ಲಿ ನೋಡಿರಿ. ಆ ಕಾಲದಲ್ಲಿ ಅವಳು ನಿಮಗಿಂತ ಅನುಕೂಲವಾಗಿದ್ದಿರಬೇಕು. ಅವಳ ಸ್ಥಿತಿ, ಅವಳ ಬಟ್ಟೆಬರೆಗಳು ಮುಂತಾದುವೆಲ್ಲ ನಿಮಗಿಂತ ಉತ್ತಮವಾಗಿದ್ದಿರಬೇಕು. ನಿಮ್ಮ ಮನಸ್ಸಿಗೆ ಅವಳ ಹಾಗಾಗಬೇಕು ಎನ್ನಿಸಿತು. ಅದೇ ನಿಮಗೆ ಅವಳಲ್ಲಿ ಅಂಕುರವಾಯಿತು ಎಂದು ನೀವೆಂದುಕೊಳ್ಳುವ ಪ್ರೇಮ.

"ಮೊದಮೊದಲು ಅವಳನ್ನು ಪಡೆಯಬೇಕು ಎಂದರೆ ಅವಳ ಹಾಗಾಗಬೇಕು ಎಂದುಕೊಂಡು ಪ್ರಯತ್ನ ಪಡಲಾರಂಭಿಸಿದಿರಿ. ಶ್ಯಾಮಲಮ್ಮ ನಿಮಗಿಂತ ದೊಡ್ಡವರಾಗಿ ನಿಮ್ಮನ್ನು ಬಲಾತ್ಕಾರ ಮಾಡಿರಬಹುದು. ಆಗೆಲ್ಲಾ ನಿಮ್ಮ ಒಳಮನಸ್ಸು ಮಂಜುಳೆಯನ್ನು ಪಡೆಯಲು ಸಹಾಯಕವಾಗುತ್ತದೆ-ಎಂದೇ ಅವೆಲ್ಲಕ್ಕೂ ಒಪ್ಪಿಕೊಂಡಿತು.

"ಹೀಗೆ ಮಾಡುವ ಕೆಲಸವನ್ನೆಲ್ಲಾ ಮಂಜುಳೆಯನ್ನು ಪಡೆಯಲು ಮಾಡಿ, ಮಂಜುಳೆಯನ್ನು ಪಡೆಯುವುದೇ ನಿಮಗೆ ಗೀಳಾಗಿದೆ. ಮಂಜುಳೆ ನಿಮ್ಮ ಜೀವನ ಚಿತ್ರದ ಅಚ್ಚಾಗಿಯೂ, ಹಾಸು ಹೊಕ್ಕಾಗಿಯೂ ಇದ್ದಾಳೆ.

"ಪುನಃ ಮೊದಲಿಗೆ ಬರುವುದಾದರೆ ನಿಮಗೇನು ಬೇಕೋ ಅದು ಸಿಕ್ಕುತ್ತಿಲ್ಲ. ಅಂದರೆ ನಿಮಗಾವುದು ಸಿಗುತ್ತಿದೆಯೋ ಅದು ನಿಮಗೆ ಬೇಡವಾದುದು. ವಯಸ್ಸಿನ ಒತ್ತಡದಿಂದ, ಪರಿಸ್ಥಿತಿಗಳ ಪರಿಣಾಮದಿಂದ ಕೆಲ ಹೆಂಗಸರು ನಿಮಗೆ ತಾತ್ಕಾಲಿಕವಾಗಿ ಪ್ರಿಯರಾಗಿ ಕಂಡು ಬರಬಹುದು. ಆದರೆ ಆ ಒತ್ತಡವು ಕಡಿಮೆಯಾದ ಕೂಡಲೇ ನಿಮ್ಮ ಒಳಮನಸ್ಸು ಅಂತಹ ವ್ಯಕ್ತಿಗಳನ್ನು ತಳ್ಳಿಬಿಡುತ್ತದೆ. ಅದುವರೆಗೆಪಿಗೆ ಪ್ರಿಯರಂತೆ ಕಂಡು ಬರುತ್ತಿರುವವರು ಇದ್ದಕ್ಕಿದ್ದಂತೆಯೇ ಅಪ್ರಿಯರಾಗುತ್ತಾರೆ."

"ನನ್ನನ್ನೀಗ ಏನು ಮಾಡಬೇಕೆಂದು ಹೇಳುತ್ತೀರಿ ?"

ಆ ಮಾತುಗಳಿಂದ ಪ್ರಭಾವಿತನಾಗಿದ್ದ ಅನಿಲ ಹೇಳಿದ.

"ಆ ವಿಷಯ ಹೇಳುವುದು ನನ್ನ ಉದ್ದೇಶವಾಗಿರಲಿಲ್ಲ. ಈಗಲೂ ಅಲ್ಲ. ಅದಕ್ಕೆ ನಾನೇನೂ ಹೇಳುವುದಿಲ್ಲ. ಈ ಪರಿಸ್ಥಿತಿಗಳಲ್ಲಿ ನಿಮಗಾವುದು ಸೂಕ್ತವಾಗಿ ಕಂಡು ಬರುವುದೋ ಅದನ್ನು ಮಾಡಿರಿ. ನನಗೆ ತೋ

ರುವಂತೆ ನೀವು ಅವಳನ್ನು ಪಡೆದರೆ ನಿಮಗೆ ಸುಖವಾಗುತ್ತದೆ. ಅನಂತರ ಸರಿಹೋಗುತ್ತೀರಿ. ಅವಳಿಗೆ ಮದುವೆಯಾಗಿರುವುದರಿಂದ ಅದಾಗದೇ ಹೋಗಬಹುದು. ಹಾಗಾದಲ್ಲಿ ನೀವು ಮಂಜುಳೆಯನ್ನು ಸಂಪೂರ್ಣವಾಗಿ ಮರೆತು ಬಿಡಬೇಕು. ಅದು ಸಮಸ್ಯೆಯನ್ನು ಎದುರಿಸುವ ರೀತಿ. ಅದನ್ನು ಮುಂದೆ ತಳ್ಳಿಡುವುದರಿಂದ ಸ್ವಲ್ಪವೂ ಪ್ರಯೋಜನವಿಲ್ಲ."

ಅನಿಲ ಆಕೆಯ ಕೈಯನ್ನು ತನ್ನ ಎರಡು ಕೈಗಳಲ್ಲಿಯೂ ಹಿಡಿದು ಕೊಂಡು ಮೃದುವಾಗಿ ಸವರುತ್ತಾ—

" ನನಗೇ ಗೊತ್ತಿಲ್ಲದೆ ಇದ್ದ ನನ್ನ ವಿಷಯಗಳನ್ನು ನೀವು ನನಗೆ ಹೇಳಿದಿರಿ "

" ಹೌದು. ನಾವು ನಮ್ಮನ್ನು ತಿಳಿದುಕೊಳ್ಳುವುದು ಬಹಳ ಮುಖ್ಯ. ಅದರಿಂದ ನಮ್ಮೆದುರಿಗೆ ಬರುವ ಸಮಸ್ಯೆಗಳನ್ನು ಸರಿಯಾಗಿ ಬಿಡಿಸ ಲಾಗುತ್ತದೆ "

ಈ ಮಾತುಗಳನ್ನು ಹೇಳಿದ ಸರೋಜಿನಿ ಅವನ ಕೈಗಳಲ್ಲಿದ್ದ ತನ್ನ ಕೈಯನ್ನು ಎಳೆದುಕೊಂಡು—

" ನಿಮಗೆ ಮತ್ತೊಂದು ವಿಷಯವು ಗೊತ್ತೋ ?"

ಅದೇನೆಂದು ಅನಿಲನು ಬಾಯಿಂದ ಕೇಳಲಿಲ್ಲ. ಆದರವನ ದೃಷ್ಟಿಯು ಅದನ್ನು ಹೇಳುತ್ತಿತ್ತು.

" ನಿಮ್ಮ ವ್ಯಕ್ತಿತ್ವದಿಂದ ನನ್ನಲ್ಲಿ ಕೆಲವು ಸಮಸ್ಯೆಗಳು ಹುಟ್ಟಿದುವು. ಅದರಿಂದ ನನಗೆ ನಿಮ್ಮಲ್ಲಿ ಆಸಕ್ತಿಯುಂಟಾಯಿತು. ಈಗ ನನ್ನ ಸಮಸ್ಯೆಯು ಬಗೆ ಹರಿದಿದೆ. ಸ್ಪಷ್ಟವಾಗಿ ಹೇಳುವುದಾದರೆ ನಿಮ್ಮಲ್ಲಿದ್ದ ಆಸಕ್ತಿಯು ನನಗೆ ತೀರಿತು ನನ್ನ ನಿಮ್ಮ ಸಂಬಂಧವು ಪ್ರಿಯವಾಗಿರು ವಾಗಲೇ ನಾವುಗಳು ದೂರವಾಗುವುದು ಇಬ್ಬರಿಗೂ ಹಿತಕರ "

ಅದೇ ದಿನ ಅನಿಲನು ಸರೋಜಿನಿಯ ಮನೆಯಿಂದ ತನ್ನ ಮನೆಗೆ ಹೊರಟು ಹೋದನು. ಹೋಗುವ ಮೊದಲು ಅವರು ಪರಸ್ಪರ ಚುಂಬಿ ಸಲೂ ಇಲ್ಲ.

ಸರೋಜಿನಿಯು ಅವನನ್ನು ಕಳುಹಿಬಿಟ್ಟಿದ್ದರೂ ಅವಳ ವಿಷಯದಲ್ಲಿ ಅವನು ಪ್ರಸನ್ನನಾಗಿಯೇ ಇದ್ದನು.

## ೨೪

ಹೊಳೆಯ ದಡದಲ್ಲಿ ವಾಸಮಾಡುವವರೂ ಸಹ ಮನೆಯಲ್ಲಿ ಭಾವಿಯೊಂದನ್ನು ತೋಡಿಕೊಳ್ಳಲು ಅಪೇಕ್ಷಿಸುತ್ತಾರೆ. ಇದು ವಿಚಿತ್ರವಾಗಿ ತೋರಿದರೂ ಸಹಜವೇ ಆಗಿದೆ. ಯಾಕೆಂದರೆ ಭಾವಿಯು ಸ್ವಂತವಾದಂತೆ ಹೊಳೆಯು ಸ್ವಂತವಾಗುವುದಿಲ್ಲ.

ಮದರಾಸಿಗೆ ಬಂದು ಬದುಕುತ್ತಿದ್ದರೂ ಗೋದಮ್ಮ ಮಂಡ್ಯವನ್ನು ಮರೆತಿರಲಿಲ್ಲ. ಹೆಂಚು ಕೈಯಾಡಿಸಿ, ನೆಲ ಸಿಮೆಂಟು ಮಾಡಿ, ಮನೆಗೆ ದೀಪ ಹಾಕಿಸ ಬೇಕೆಂದು ಅನಿಲನೊಂದಿಗೆ ಹೇಳುತ್ತಲೇ ಇದ್ದರು.

"ಇಷ್ಟೊಂದು ದೊಡ್ಡ ಬಂಗಲೆ, ಇಷ್ಟೊಂದು ಜಮಿನು ಇರುವಾಗ ಮಂಡ್ಯದ ಮುರುಕಲು ಮನೆ, ಹರಕಲು ಜಮೀನಿಗೇಕೆ ಹೊಡೆದು ಕೊಳ್ಳುತ್ತಿ?"

ಎಂದು ಆಗಾಗ ಅನಿಲ ನಗುತ್ತಾ ಹೇಳುತ್ತಿದ್ದ.

"ಎಷ್ಟಾದರೂ ಪಿತರಾರ್ಜಿತವಾದ ಆಸ್ತಿಯನ್ನು ಕಡೆಗಾಣಿಸಬಾರದಪ್ಪ. ನಮ್ಮ ಅಪ್ಪ, ತಾತ, ಮುತ್ತಾತಂದಿರು ಬಾಳಿ ಬದುಕಿದ ಮನೆ"

ಆಗೆಲ್ಲಾ ಗೋದಮ್ಮ ಸಮಾಧಾನವನ್ನು ಹೇಳುತ್ತಿದ್ದಳು.

ಕೆಂಚೇಗೌಡನಿಗೆ ಭೋಗ್ಯ ಹಾಕಿದ್ದ ಜಮೀನಿನ ಗಡವು ತೀರುತ್ತ

ಬಂದಿತು—ಎಂದು ಗೊತ್ತಾದಾಗ ಮಾತು ಮಾತಿನಲ್ಲಿಯೇ ನಿಲ್ಲಲು ಸಾಧ್ಯವಾಗಲಿಲ್ಲ.

ಗೆಜ್ಜಲುಗೆರೆಯ ಬಳಿ ಪಿತ್ರಾರ್ಜಿತವಾದ ಐದು ಎಕರೆಗಳಷ್ಟು ಹೊಲ ವಿತ್ತು. ಯಾವುದೋ ಕಷ್ಟಕಾಲದಲ್ಲಿ ರಾಘವೇಂದ್ರರಾಯರು ಅದನ್ನು ಏಳು ವರ್ಷಗಳ ಭೋಗ್ಯಕ್ಕೆ ಹಾಕಿದ್ದರು. ಅದಾದ ಮೂರು ನಾಲ್ಕು ವರ್ಷಗಳ ಮೇಲೆ ಅತ್ತಕಡೆಯ ಜಮೀನುಗಳಿಗೆಲ್ಲಾ ಕಟ್ಟೆಯ ನೀರು ಕೊಟ್ಟರು. ಹಾಗೆಯೇ ರಾಯರ ಜಮೀನಿಗೂ ನೀರು ಬಂದಿತು. ಕೆಂಚೇಗೌಡ ನೀರು ಬರುತ್ತಲೇ ಕಬ್ಬು ಹಾಕಿ ಬೇಕಾದ ಹಾಗೆ ಸಂಪಾದಿಸುತ್ತಿದ್ದ. ಐದು ಎಕರೆಗಳ ಕಬ್ಬು! ಬದುಕಿದ್ದಷ್ಟು ದಿನವೂ ತಾವು ಮಾಡಿದ ಅವಿವೇಕಕ್ಕೆ ರಾಘವೇಂದ್ರರಾಯರು ಕೊರಗುತ್ತಲೇ ಇದ್ದರು.

ಗಡವು ಕಾಲ ತೀರುವುದಕ್ಕೆ ತಿಂಗಳು ತಿಂಗಳೊವರೆ ಇದ್ದಿತು. ಅದನ್ನು ಬಿಡಿಸಿಕೊಳ್ಳುತ್ತೀರಾ ಹೇಗೆಂದು ಅಚ್ಯುತನ ಮಾವ ಶೇಷಾಚಾರ್ಯರು ಕಾಗದ ಹಾಕಿದ್ದರು.

ಮೊದಲು ತಮ್ಮನೊಡನೆ ಮನೆ, ಭೋಗ್ಯಕ್ಕೆ ಹಾಕಿದ್ದ ಜಮೀನುಗಳ ವಿಷಯದಲ್ಲಿ ಧಾರಾಳವಾಗಿ ಮಾತನಾಡುತ್ತಿದ್ದ ಗೋದಮ್ಮನಿಗೆ ಆ ಕಾಗದ ಬಂದ ಕೂಡಲೇ ಬಾಯಿ ಕಟ್ಟಿಹೋಯಿತು. ಅವಳು ಏನು ಮಾಡುವುದಕ್ಕೂ ತೋರದೇ ಪಿಲಿಪಿಲನೆ ಪರ್ದಾಡುತ್ತಿದ್ದಳು.

ಅಕ್ಕನನ್ನು ಸುಖಿಯಾಗಿ ಮಾಡುವುದು ತಮ್ಮನಿಗೆ ಕಷ್ಟಸಾಧ್ಯವಾದ ಕೆಲಸವೇನೂ ಆಗಿರಲಿಲ್ಲ. ಅವನ ತಂದೆ ಕೆಂಚೇಗೌಡನಿಂದ ತೆಗೆದುಕೊಂಡಿದ್ದುದು ಜುಜಿಬಿ ಸಾವಿರ ರೂಪಾಯಿ. ಮನೇ ರಿಪೇರಿಗೆಲ್ಲಾ ಮತ್ತೊಂದಿಷ್ಟು ಹಣವಾಗುತ್ತಿತ್ತು.

ಗೋದಮ್ಮ ಅಸಿಲರು ಜಮೀನು ಬಿಡಿಸಿಕೊಳ್ಳಲು ಅಚ್ಯುತನಿಗೆ ಪವರ್ ಆಫ್ ಅಟರ್ನಿ ಬರೆದುಕೊಟ್ಟು, ಮೂರು ಸಾವಿರ ರೂಪಾಯಿ ಕೈಗೆ ಕೊಟ್ಟು ಕಳಿಸಿದರು.

ಅಚ್ಯುತ ಹೊರಟು ಹೋದ ಮೇಲೆ ಅಸಿಲನ ಮನಸ್ಸಿನಲ್ಲಿದ್ದ ಆಸೆಗೆ ಮತ್ತೊಮ್ಮೆ ರೆಕ್ಕೆ ಪುಕ್ಕಗಳು ಬಂದವು. ಸರೋಜಿನಿಯು ಹೇಳಿದಂತೆ

ಮಂಜುಳೆಯನ್ನು ತನ್ನವಳಾಗಿ ಮಾಡಿಕೊಳ್ಳಬೇಕು. ಇಲ್ಲವೇ ಮರೆತು ಬಿಡಬೇಕು–ಎಂದು ಮನಸ್ಸು ಒತ್ತಾಯಪಡಿಸ ತೊಡಗಿತು.

ಆದರೆ ಅಚ್ಯುತನ ಪ್ರಯಾಣದಿಂದ ಯಾವ ಬದಲಾವಣೆಯೂ ಬಂದಂತೆ ಆಗಲಿಲ್ಲ.

ಮಂಜುಳೆ ಮೊದಲಿನಂತೆಯೇ ಅವನ ಕೆಲಸಗಳನ್ನು ಮಾಡುವಳು. ಬಂದು ಮಾತನಾಡುತ್ತಾ ಕುಳಿತುಕೊಳ್ಳುವಳು. ಗೋದಮ್ಮನೋ ಕನಕಮ್ಮೋ ಜೊತೆಗಿದ್ದರೆ ಸಿನಿಮಾಗೆ ಹೋಗಿ ಬರುವಳು. ರಾತ್ರಿ ಗೋದಮ್ಮ ಮಹಡಿಯ ಮೇಲೆ ಬಂದು ಅವಳ ಜೊತೆಗೆ ಮಲಗಿಕೊಳ್ಳುವಳು.

ಕಾಫೀ ತಂದಾಗ, ಬಡಿಸುವಾಗ, ಮಾತನಾಡುತ್ತಾ ಒಬ್ಬಳೇ ಕುಳಿತುಕೊಂಡಾಗ ಅವಳೊಂದಿಗೆ ತನ್ನ ಮನಸ್ಸನ್ನು ಬಿಚ್ಚಿ ಹೇಳಬೇಕೆಂದು ಅನಿಲನಿಗೆ ತೋರುವುದು. ಆದರೆ ಹಾಗೆ ಮಾಡಲು ಧೈರ್ಯವಾಗುವುದಿಲ್ಲ.

ಒಮ್ಮೊಮ್ಮೆ ನೋಡುವ ದೃಷ್ಟಿಯಲ್ಲಿ, ಆಡುವ ಹಾಸ್ಯೋಕ್ತಿಗಳಲ್ಲಿ ತನ್ನ ಮನೋಭಾವವನ್ನು ವ್ಯಕ್ತಪಡಿಸಲು ಪ್ರಯತ್ನ ಮಾಡುವನು.

ಅದಕ್ಕೆ ಪ್ರೋತ್ಸಾಹವಾಗಲೀ, ಪ್ರತಿರೋಧವಾಗಲೀ ಅವಳಲ್ಲಿ ಕಂಡು ಬರದೇ ಹೋದಾಗ, ನಿರಾಶೆಯಾಗುತ್ತದೆ. ತಾನು ದಕ್ಷಿಣ ಭಾರತವೇ ಮೆಚ್ಚಿಕೊಂಡಿರುವ ನಟ. ಆದರೂ ಹಾವ ಭಾವಗಳಲ್ಲಿ ತನ್ನ ಮನೋಭಾವವನ್ನು ಅವಳಿಗೆ ತಿಳಿಸಲಾರದೇ ಹೋಗುತ್ತೇನಲ್ಲಾ– ಎಂದುಕೊಳ್ಳುವನು. ಮಂಜುಳೆಗೆ ಅದನ್ನು ಅರ್ಥ ಮಾಡಿಕೊಳ್ಳಲು ಸಾಮರ್ಥ್ಯವಿಲ್ಲವೇ ? ಹಾಗೆ ಹೇಳಲಾಗುವುದಿಲ್ಲ. ಅವಳು ಚತುರೆ! ಕೃತ್ರಿಮತೆಯಲ್ಲಿ ಸಾಫಲ್ಯ ಹೊಂದುವ ತನ್ನ ಅಭಿನಯವು ವಾಸ್ತವ ಜೀವನದಲ್ಲಿ ಪ್ರಯೋಜನಕ್ಕೆ ಬರುವುದಿಲ್ಲವೆಂದು ತೋರುತ್ತದೆ.

ಇವು ಮಂಜುಳೆಗೆ ಅರ್ಥವಾಗದೇ ಹೋಗುತ್ತಿರಲಿಲ್ಲ. ಆಗಾಗ ಅವನ ದೃಷ್ಟಿಯಲ್ಲಿ, ಮಾತಿನಲ್ಲಿ ಅವಳು ದೋಷವನ್ನು ಕಾಣುತ್ತಾಳೆ. ಕೆಲವು ಸಾರಿ ಅವು ಸಲಿಗೆ ಎಂದು ಸಮಾಧಾನವನ್ನು ತಂದುಕೊಳ್ಳುತ್ತಾಳೆ. ಮತ್ತೆ ಕೆಲವು ಸಲ ಸಮಾಧಾನವಾಗದಾಗ ಅಣ್ಣನೊಂದಿಗಾಡುವ ತಂಗಿಯಂತೆ ಆಡಿ, ಆ ಸನ್ನಿವೇಶದಿಂದ ತಪ್ಪಿಸಿಕೊಳ್ಳುತ್ತಾಳೆ.

ಅಂತಹ ಸಮಯಗಳಲ್ಲಿ ಅನಿಲನ ಮನಸ್ಸಿಗೆ ಅನೇಕ ಆಲೋಚನೆ

ಗಳು ಬರುತ್ತವೆ. ಯಾರಾದರೂ ಹೆಣ್ಣನ್ನು ಪ್ರೀತಿಸುವಾಗ ಬೇರೊಂದು ರೀತಿಯಲ್ಲಿ ಅವಳ ಪರಿಚಯ ಬಳಕೆಗಳನ್ನು ಮಾಡಿಕೊಳ್ಳಬಾರದು. ಅದರಿಂದ ಅನುಕೂಲದ ಬದಲು ಅಡಚಣೆಯೇ ಆಗುತ್ತದೆಂದು ತೋರುತ್ತದೆ. ತಾನು ಮಂಜುಳೆಗೆ ದೂರದೂರವಾಗಿಯೇ ಇದ್ದಿದ್ದರೆ ಅವಳ ಅನುಗ್ರಹ ಅಥವಾ ಔದಾಸೀನ್ಯವು ಒಮ್ಮೆಗೇ ಕಂಡುಬರುತ್ತಿದ್ದಿತೆಂದು ಭಾಸವಾಗುತ್ತದೆ.

ಹೀಗೆಯೇ ಎರಡು ತಿಂಗಳುಗಳು ಕಳೆದುವು.

ಅಚ್ಯುತ ಮದರಾಸಿಗೆ ವಾಪ್ಸು ಬಂದ. ಕೆಂಚೇಗೌಡನಿಂದ ಜಮೀನು ಬಿಡಿಸಿಕೊಳ್ಳಲು ಬಹಳ ಪ್ರಯಾಸವಾಯಿತೆಂದೂ, ತನ್ನ ಮಾವನವರು ಕೂಲಿ ಆಳುಗಳನ್ನಿಟ್ಟು ಈ ಬಾರಿ ಕಬ್ಬು ಹಾಕಿಸುತ್ತಾರೆಂದೂ ಹೇಳಿದ. ಮನೆಯ ರಿಪೇರಿ ಮಾಡಿಸಿದುದನ್ನೆಲ್ಲಾ ಬಗೆಬಗೆಯಾಗಿ ಬಣ್ಣಿಸಿದ. ನೆಲಕ್ಕೆಲ್ಲಾ ಕೆಂಪು ಸಿಮೆಂಟು ಮಾಡಿರುವುದಾಗಿ ತಿಳಿಸಿದ. ಮನೆಗೆ ದೀಪ ನಲ್ಲಿಗಳು ಬಂದಿರುವುದೆಂದೂ, ಹೆಂಚ್ಚುಕ್ಕೆ ಮಾಡಿಸಿರುವುದಾಗಿಯೂ ಹೇಳಿದ. ಈಗ ಹೋಗಿ ನೋಡಿದರೆ ಮನೆ ಹೊಸದಾಗಿ ಗುರುತು ಸಿಗುವುದೇ ಕಷ್ಟವೆಂದೂ ಹೇಳಿಕೊಂಡ.

"ಇಷ್ಟೆಲ್ಲಾ ಮಾಡಿಸಿದವನು ಸೂರಿನ ಗಳುಗಳನ್ನೂ ಬದಲಾಯಿಸಿದ್ದರೆ ಚೆನ್ನಾಗಿದ್ದಿತು"

ಗೋದಮ್ಮ ದಾರ ಕಿತ್ತು ಹೋಗಿ ಆಡುತ್ತಿದ್ದ ಕಪ್ಪು ಹತ್ತಿದ ಗಳುಗಳನ್ನು ನೆನೆಸಿಕೊಂಡು ಹೇಳಿದಳು.

ಅಚ್ಯುತ ಅದನ್ನು ಮಾಡಿಸಿರುವುದಾಗಿಯೂ, ಹಳೆಯ ಗಾರೆ ಕೆತ್ತಿಸಿ ಗೋಡೆಗಳಿಗೆ ಹೊಸ ಗಾರೆ ಸುಣ್ಣಗಳನ್ನು ಮಾಡಿಸಿರುವುದಾಗಿಯೂ ತಿಳಿಸಿದ.

ಎಲ್ಲರಂತೆ ಅನಿಲನೂ ವಿಷಯವೆಲ್ಲವನ್ನೂ ವಿವರವಾಗಿ ಕೇಳಿದ. ಅವನಿಗೆ ಯಾವ ಬಗೆಯಾದ ಆನಂದವೂ ಆಗಲಿಲ್ಲ. ಗೋದಮ್ಮ ಮಂಜುಳೆಯರಿಗಂತೂ ವಿಪರೀತ ಸಂತೋಷವಾಗಿತ್ತು. ಅವರು ಎಂದೂ ಇಲ್ಲದಷ್ಟು ಖುಷಿಯಾಗಿ ಓಡಿಯಾಡುತ್ತಿದ್ದರು.

ಆದರೆ ಹೆಚ್ಚು ದಿನ ಅವರು ಆನಂದದಲ್ಲಿ ತಂದುಲಿತರಾಗಿಯೇ ಇರಲ್ಕಾಗಲಿಲ್ಲ.

ಇದ್ದಕ್ಕಿದ್ದಂತೆಯೇ ಬಂಗಾಳಾ ಕೊಲ್ಲಿಯಲ್ಲಿ ಗಾಳಿಯ ಒತ್ತಡವು ಬದಲಾವಣೆಯಾಯಿತು. ಅದರಿಂದ ಮದರಾಸಿನಲ್ಲಿ ಒಂದೇ ಸಮನಾಗಿ ಮಳೆಯು ಬೀಳಲು ಆರಂಭವಾಯಿತು.

ಜನಜೀವನದಲ್ಲಿಯೂ ಹೆಚ್ಚು ಕಡಿಮೆಯಾಯಿತು. ಜನಗಳು ಅನುದಿನದ ಕೆಲಸವನ್ನು ಮಾಡುವುದು ಕಷ್ಟವಾಯಿತು. ಇಪ್ಪತ್ತು ನಾಲ್ಕು ಗಂಟೆಯ ಹೊತ್ತು ಮಳೆಯು ಬೀಳುತ್ತಿದ್ದುದರಿಂದ ಸ್ಟುಡಿಯೋದಲ್ಲಿ ಸಹ ಕೆಲಸಕಾರ್ಯಗಳು ಸರಿಯಾಗಿ ನಡೆಯುತ್ತಿರಲಿಲ್ಲ. ಆಗಾಗ ವಿದ್ಯುತ್ ಸರಬರಾಜಿಗೂ ಅಡಚಣೆಯಾಯಿತು.

ಸತತ ಧಾರೆಯು ಅನಿಲ ನಿವಾಸದಲ್ಲಿಯೂ ಕಲ್ಲೋಲವನ್ನು ಉಂಟುಮಾಡಿತು.

ಮಳೆಯು ಆರಂಭವಾದ ಎರಡನೆಯ ದಿನದಿಂದಲೇ ಅಚ್ಯುತನಿಗೆ ಉಬ್ಬಸವು ಹೆಚ್ಚಾಗ ತೊಡಗಿತು. ಸದಾ ತಂಡಿಯಿಂದ ಕೂಡಿರುತ್ತಿದ್ದ ವಾತಾವರಣದಲ್ಲಿ ಅಚ್ಯುತ ಯಾವಾಗಲೂ ಇಟ್ಟುಕೊಂಡಿರುತ್ತಿದ್ದ ಎಫಿಡ್ರೈನ್, ಆಸ್ಮಾಕ್ರ ಪುಡಿಗಳು ಕೆಲಸ ಮಾಡಲಾರದೇ ಹೋದುವು. ಎದೆಯು ಕಟ್ಟಿಕೊಂಡು ಕಲ್ಲಿನಂತಾಗಿದ್ದಿತು. ಏದುಬ್ಬಸವು ಬಂದಿತು. ಒಂದು ಬಾರಿ ಉಸಿರು ತೆಗೆದುಕೊಂಡು ಬಿಡುವುದೇ ಪ್ರಯಾಸವಾಯಿತು.

ಗೋದಮ್ಮ ಮಂಜುಳೆಯರಿಗೆ ಅಚ್ಯುತ ಈ ಗಂಡಾಂತರದಿಂದ ಕಡೆ ತೇರುತ್ತಾನೆಯೋ ಎಂದು ಹೆದರಿಕೆಯಾಯಿತು.

ಚಿಕಿತ್ಸೆಗಾಗಿ ಬರುತ್ತಿದ್ದ ಡಾ|| ಕೊಳಂದೆ ವೇಲೂರವರು ಜನರಲ್ ಆಸ್ಪತ್ರೆಯಲ್ಲಿರುವ ಹಾರ್ಟ್ ಸ್ಪೆಷಲಿಸ್ಟ್ ಮಾಧವ ಮೇನ್ನರವರಿಗೆ ತೋರಿಸುವುದು ಒಳ್ಳೆಯದೆಂದೂ, ಅವರು ತಮಗೆ ಬಹಳ ಸ್ನೇಹಿತರೆಂದೂ ಹೇಳಿದರು.

ಅದೇ ದಿನ ಕಾರಿನಲ್ಲಿ ಅಚ್ಯುತನನ್ನು ಜನರಲ್ ಆಸ್ಪತ್ರೆಗೆ ಕರೆದುಕೊಂಡು ಹೋಗಿ ತೋರಿಸಲಾಯಿತು. ಮೇನ್ನರು ಪರೀಕ್ಷೆ ಮಾಡಿ ಎರಡು ದಿನ ಆಸ್ಪತ್ರೆಯಲ್ಲಿರಲಿ ಎಂದು ಅಡ್ಮಿಟ್ ಮಾಡಿಕೊಂಡರು.

ಮಧ್ಯಾಹ್ನದ ಹೊತ್ತು ಐತಾಳನು ಕಾರಿನಲ್ಲಿ ಹೋಗಿ ಅನ್ನ, ತಿಳಿಸಾರು, ಮಜ್ಜಿಗೆಗಳನ್ನು ಕೊಟ್ಟು ಬರುತ್ತಿದ್ದನು. ಸಾಯಂಕಾಲದ ಹೊತ್ತು

ಎಲ್ಲರೂ ಆಸ್ಪತ್ರೆಗೆ ಹೋಗಿ ಅಚ್ಯುತನೊಡನಿದ್ದು, ರಾತ್ರಿಯ ಊಟವನ್ನು ಕೊಟ್ಟು ಬರುತ್ತಿದ್ದರು.

ಅಚ್ಯುತನಿದ್ದುದು ಸ್ಪೆಷಲ್ ವಾರ್ಡಿನಲ್ಲಿ. ಇತರ ವಾರ್ಡುಗಳಂತೆ ಅಲ್ಲಿ ಗಲಾಟೆಯಿಲ್ಲದೇ ಬಹಳ ಅನುಕೂಲವಾಗಿದ್ದಿತು. ಡಾಕ್ಟರರು ಬಹಳ ಮುತುವರ್ಜಿಯಿಂದ ರೋಗಿಯನ್ನು ನೋಡಿಕೊಳ್ಳುತ್ತಿದ್ದರು. ಒಂದೆರಡು ಅಡ್ರಿನಲ್ ಇಂಜಕ್ಷನ್ನುಗಳನ್ನು ಕೊಟ್ಟನಂತರ ಉಬ್ಬಸದ ವೇಗವು ಕಡಿಮೆಯಾಯಿತು. ಬಹಳ ನಿಶ್ಶಕ್ತನಾಗಿದ್ದರೂ ಅಚ್ಯುತ ಮುಖದಲ್ಲಿ ನಗುವನ್ನು ತಂದುಕೊಳ್ಳುತ್ತಿದ್ದ. ಒಂದೆರಡು ಮಾತುಗಳನ್ನಾಡುತ್ತಿದ್ದ.

ಅಷ್ಟು ಮಾಡಿದ ಡಾಕ್ಟರರಲ್ಲಿ ಅವರೆಲ್ಲರಿಗೂ ಬಹಳ ಕೃತಜ್ಞತೆ ಇದ್ದಿತು. ಅವರೂ ಇಷ್ಟೇ. ಸಾಯಂಕಾಲ ಇವರೆಲ್ಲರೂ ಬರುವ ವೇಳೆಗೆ ತಾವೂ ಬರುತ್ತಿದ್ದರು. ಬಂದವರು ಹೊರಡುವವರೆವಿಗೆ ಮನೆಯವರಂತೆ ಮಾತನಾಡುತ್ತಾ ಅವರು ಇದ್ದು ಬಿಡುತ್ತಿದ್ದರು.

ಮಾಧವ ಡಾಕ್ಟರರು ಅತಿಯಾಗಿ ಮಂಜುಳೆಯೊಂದಿಗೆ ಮಾತನಾಡುವರು. ಅಕಾರಣವಾಗಿ ಅವಳನ್ನು ನೋಡಿ ನಗುವರು. ಅವನ್ನು ಅಚ್ಯುತನು ಮೊದಲುಗೊಂಡು ಎಲ್ಲರೂ ಗಮನಿಸಿದ್ದರು. ಆದರೆ ಯಾರೂ ಆ ವಿಷಯ ಮಾತನಾಡುತ್ತಿರಲಿಲ್ಲ ಹೇಗಾದರೂ ಮಾಡಿ ಆದಷ್ಟು ಬೇಗ ಅಚ್ಯುತನನ್ನು ಮನೆಗೆ ವಾಪಸ್ಸು ಕರೆದುಕೊಂಡು ಬಂದರೆ ಸಾಕೆಂದುಕೊಳ್ಳುತ್ತಿದ್ದರು.

ಮಂಜುಳೆ ಒಬ್ಬಳೇ ಆಸ್ಪತ್ರೆಗೆ ಹೋಗುತ್ತಿರಲಿಲ್ಲ ಯಾವಾಗಲೂ ಅನಿಲ ಅಥವಾ ಗೋದಮ್ಮ ಇಬ್ಬರಲ್ಲಿ ಒಬ್ಬರೊಡನೆ ಇರುತ್ತಿದ್ದಳು.

ಹೀಗೆ ಆಸ್ಪತ್ರೆಯಲ್ಲಿ ಅಚ್ಯುತ ಮೂರು ದಿನಗಳನ್ನು ಕಳೆದ.

ನಾಲ್ಕನೆಯ ದಿನ ಬೆಳಗಾಗ ಹತ್ತು ಗಂಟೆಯಲ್ಲಿ ಡಾ|| ಕೊಳಂದೆ ವೇಲೂರವರು--

"ಅಚ್ಯುತನಿಗೆ ಆಪರೇಷನ್ ಮಾಡಬೇಕಂತೆ."

ಆಪರೇಷನ್ ಎಂಬ ಮಾತು ಕೇಳಿದ ಕೂಡಲೇ ಮಂಜುಳೆಯ ಎದೆಯು ಧಡಕ್ಕೆಂದಿತು. ಗೋದಮ್ಮ ವಿಚಾರಿಸಿದರು.

"ಅವರಿಗೆ ಪ್ಲೂರಸಿ ಇದೆಯಂತೆ. ಎದೆಯಲ್ಲಿ ನೀರು ತುಂಬಿದೆ. ಅದನ್ನು ತೆಗೆಯುವವರೆವಿಗೆ ಕಾಯಿಲೆ ಗುಣವಾಗುವುದಿಲ್ಲವೆಂದು ಡಾಕ್ಟರು ಹೇಳಿದರು"

ಪ್ಲೂರಸಿ, ಎದೆಯಲ್ಲಿ ನೀರು ತುಂಬಿಕೊಳ್ಳುವ ಬಗೆ, ಅದನ್ನು ತೆಗೆಯದಿದ್ದರೆ ಸಂಭವಿಸಬಹುದಾದ ಅಪಾಯ ಮುಂತಾದುವನ್ನೆಲ್ಲಾ ಕೊಳಂದೆವೇಲು ವಿವರಿಸಿದರು. ಅದು ಸಾಧಾರಣವಾದ ಆಪರೇಷನ್ ಎಂದೂ, ಅದನ್ನು ಮಾಡಿಸುವುದಕ್ಕೆ ಯಾವರೀತಿಯಾಗಿಯೂ ಹೆದರಬೇಕಾಗಿಲ್ಲವೆಂದೂ ಭರವಸೆ ಮಾಡಿದರು.

ಸ್ವಲ್ಪ ಹೆಚ್ಚು ಚರ್ಚೆ ಮಾಡಿ, ಎಲ್ಲರೂ ಆಪರೇಷನ್‌ಗೆ ಒಪ್ಪಿದರು.

ಮಂಜುಳೆಯು ಅನಿಲನಿಗೂ ಡಾಕ್ಟರಿಗೂ ಕಾಫಿಯನ್ನು ತಂದು ಕೊಟ್ಟಳು.

ಕಾಫಿಯನ್ನು ಕುಡಿದ ನಂತರ ಡಾಕ್ಟರು ಹೊರಟು ಹೋಗುವರೆಂದು ಎಲ್ಲರೂ ನಿರೀಕ್ಷಿಸಿದ್ದರು. ಅವರು ಹೋಗದೇ ಕುಳಿತುಕೊಂಡು, ಮಾತನಾಡಲು ಸಂಕೋಚಿಸತೊಡಗಿದರು.

ಆದರೂ ಸರಿಮಾಡಿಕೊಂಡು—

"ಮೇಡಿಯರಿಗೆ ಏನಾದರೂ ಗೌರವ ಮಾಡಬೇಕು"

"ಖಂಡಿತವಾಗಿ. ಇಷ್ಟೆಲ್ಲಾ ಮಾಡುವವರಿಗೆ ನಾವು ಮರ್ಯಾದೆ ಮಾಡದಿದ್ದರೆ ಆಗುತ್ತದೆಯೆ?"

ಎಂದು ತಾನೇ ಮುಂದುವರಿದು ಉತ್ತರವಿತ್ತ, ಅನಿಲ.

"ಹಾಗಲ್ಲ. ಅವರು ದೊಡ್ಡ ಡಾಕ್ಟರು. ಬಹಳ ಗಟ್ಟಿಗರು. ಆದರೂ ಕೈಶುದ್ಧವಿಲ್ಲ. ಅವರು ಆಸಕ್ತಿಯಿಂದ ಆಪರೇಷನ್ ಮಾಡುವಂತೆ ಮಾಡಲು ಆಮೇಲೆ ಮರ್ಯಾದೆ ಮಾಡುವುದಕ್ಕಿಂತ ಮೊದಲೇ ಮಾಡುವುದು ಒಳ್ಳೆಯದೆಂದು ನನ್ನ ಭಾವನೆ"

"ಆಗಬಹುದು. ಕೊಡುವುದು ಎಂದಾದ ಮೇಲೆ ಆಮೇಲೆ ಕೊಟ್ಟರೇನು, ಮೊದಲು ಕೊಟ್ಟರೇನು? ನೀವು ಹೇಳುವಂತೆ ಮೊದಲು ಕೊಡುವುದೇ ಒಳ್ಳೆಯದು. ಎಷ್ಟು ಕೊಡಬೇಕೆನ್ನುತ್ತೀರಿ?"

"ನಿಮ್ಮ ಯೋಗ್ಯತೆ, ಅವರ ಯೋಗ್ಯತೆಗಳನ್ನು ಲೆಕ್ಕ ಹಾಕಿದರೆ ಸಾವಿರವಾದರೂ ಕೊಡಬೇಕೆಂದು ತೋರುತ್ತದೆ."

ಅರ್ಧ ಅರ್ಧವಾಗಿ ನುಂಗಿಕೊಳ್ಳುತ್ತಾ ಡಾಕ್ಟರು ಹೇಳಿದರು.

ಸಾವಿರ ರೂಪಾಯಿ ಎಂದು ಕೇಳುತ್ತಲೂ ಅನಿಲನ ಮುಖದಲ್ಲಿ ಏನು

ಬದಲಾವಣೆಯಾಗುತ್ತಯೋ ಎಂದು ಮಂಜುಳಾ ನೋಡಿದಳು. ಅವನ ದೃಷ್ಟಿಯಲ್ಲಿ ದೃಷ್ಟಿಯು ಕೂಡುತ್ತಲೇ ನಾಚಿಕೆಯಾಗಿ ಕಣ್ಣನ್ನು ಎಳೆದುಕೊಂಡಳು.

ಗೋದಮ್ಮ ಸಹ ಅವನ ಕಡೆಗೆ ನೋಡಿದರು. ಆದರೆ ಮಂಜುಳೆಯಂತೆ ದೃಷ್ಟಿಯನ್ನು ಎಳೆದುಕೊಳ್ಳಲಿಲ್ಲ. ನೋಡುತ್ತಲೇ ಇದ್ದಳು. ಆಕೆಯ ದೃಷ್ಟಿಯಲ್ಲಿ ಆರ್ತತೆ ಇತ್ತು.

"ಏನಾದರೂ ಮಾಡಿ ಆ ಹುಡುಗನನ್ನು ಉಳಿಸು. ಅದು ನಿನಗೇನೂ ದೊಡ್ಡದಲ್ಲ" ಎಂದು ಅನಿಲನನ್ನು ಕೇಳಿಕೊಳ್ಳಬೇಕೆಂದು ಕೊಂಡರು.

ಆದರೆ ಬಾಯಿಂದ ಮಾತು ಬರಲಿಲ್ಲ.

"ಆಗಲಿ, ಕೊಳಂದೆ ವೇಲೂರವರೇ! ಚಕ್ ಕೊಡುತ್ತೇನೆ. ಅವರಿಗೆ ಕೊಡಿ. ನಮ್ಮಿಂದ ತೆಗೆದುಕೊಳ್ಳಲು ಮೋರ್ನರಿಗೆ ಸಂಕೋಚವಾಗಬಹುದು"

ಅನಿಲನೇ ಮುಂದುವರಿದು ಹೇಳಿದ-

"ಹಾಗೆ ಬೇಡಿ. ಸಾಯಂಕಾಲ ಆಸ್ಪತ್ರೆಗೆ ಬರುವಾಗ ಹತ್ತು ರೂಪಾಯಿನ ನೋಟುಗಳನ್ನು ಕವರೊಂದರಲ್ಲಿ ಹಾಕಿಕೊಂಡು ಬನ್ನಿ. ನಾನೂ ಬರುತ್ತೇನೆ. ನೀವೇ ಕವರನ್ನು ಅವರ ಕೈಗೆ ಕೊಡುವಿರಂತೆ."

ಅನಿಲ ಒಪ್ಪಿಕೊಂಡ.

ಆ ದಿನ ಏತಾಳ ಆಸ್ಪತ್ರೆಗೆ ಊಟ ತೆಗೆದುಕೊಂಡು ಹೋಗುವಾಗ ಚಕ್ ಬರೆದು ಅನಿಲ ಹಣ ತರಿಸಿದನು.

ಸಾಯಂಕಾಲ ಗೋದಮ್ಮ ಆಸ್ಪತ್ರೆಗೆ ಹೋಗಲಿಲ್ಲ. ಅನಿಲ ಸಾವಿರ ರೂಪಾಯಿ ಕೊಡುವಾಗ ತಾವಿರುವುದು ಆಕೆಗೆ ಇಷ್ಟವಿರಲಿಲ್ಲ. ಮಂಜುಳೆಯು ಅನಿಲನೊಂದಿಗೆ ಹೋದಳು.

ಕೊಳಂದೆ ವೇಲೂರವರು ಅಷ್ಟು ಹೊತ್ತಿಗೇ ಬಂದಿದ್ದರು.

ಡಾ॥ ಮೋರ್ನರು ಮಾಮೂಲಿನಂತೆ ಬಂದರು. ಕೊಳಂದೆ ವೇಲೂ ಮನೆಯವರು ಆಪರೇಷನ್‌ಗೆ ಒಪ್ಪಿಕೊಂಡಿರುವುದಾಗಿ ತಿಳಿಸಿದರು.

"ಆಪರೇಷನ್ ಆದರೆ ನಿಮ್ಮ ಯಜಮಾನರಿಗೆ ಪೂರ್ಣ ಗುಣವಾಗುತ್ತದೆ"

ಮಂಜುಳೆಯ ಕಡೆ ತಿರುಗಿ ನಗುತ್ತಾ ಮೋರ್ನರು ಹೇಳಿದರು.

ಅವಳು ಸುಮ್ಮನಿದ್ದು ಬಿಟ್ಟಳು.

ಮಾತು ಮುಗಿದು ಕಡೆಯಲ್ಲಿ ಹೊರಡುವಾಗ ಕೊಳಂದೆ ವೇಲೂ ಅನಿಲನಿಂದ ಕವರು ತೆಗೆದುಕೊಂಡು, ಮೇನನ್‌ರ ಜೇಬಿನಲ್ಲಿಟ್ಟರು. ಮೇನನ್ ಏನೂ ತಿಳಿಯದಂತೆ ಸುಮ್ಮನಿದ್ದುಬಿಟ್ಟರು.

ಬೆಲ್ ಹೊಡೆಯುತ್ತಲೂ ಅನಿಲನೂ ಮಂಜುಳೆಯೂ ಆಸ್ಪತ್ರೆಯಿಂದ ಹೊರಗೆ ಬಂದರು.

ಆಸ್ಪತ್ರೆಯಿಂದ ಅನಿಲ ಮೌಂಟ್ ರೋಡಿನ ಬಳಿ ಬಂದ. ಅಲ್ಲಿಳಿದು ಮಂಜುಳೆಯನ್ನು ಕರೆದುಕೊಂಡು ಹೋಟಲಿಗೆ ಹೋದ. ಅಲ್ಲಿ ಇಬ್ಬರೂ ಮಿಲ್ಕ್ ಷೇಕ್ ತೆಗೆದುಕೊಂಡರು.

ಗಂಟೆ ಏಳೂವರೆಯಾಗಿದ್ದಿತು.

ಅಷ್ಟು ಬೇಗ ಮನೆಗೆ ಹೋಗಿ ಮಾಡುವುದೇನೆಂದು ಅನಿಲ ಬೀಚ್‌ಗೆ ಹೋದ. ಕಾರು ನಿಲ್ಲಿಸಿ ಇಬ್ಬರೂ ಸಮುದ್ರ ತೀರದಲ್ಲಿ, ಮರಳಿನ ಮೇಲೆ ಕುಳಿತು ಮಾತನಾಡುತ್ತಿದ್ದರು.

ಎರಡು ಮೂರು ಬಾರಿ ಮಂಜುಳೆಗೆ ಹೋಗೋಣವೆಂದು ತೋರಿತು. ಆದರವಳು ಹೇಳಲಿಲ್ಲ.

'ಎರಡು ಮೂರು ದಿನಗಳಲ್ಲಿಯೇ ಮೇನನ್‌ರು ಅಚ್ಯುತನಿಗೆ ನೀರು ತೆಗೆಯುವುದಾಗಿ ಹೇಳಿದರು.

ಆ ದಿನ ಬೆಳಗಾಗ ಒಂಬತ್ತು ಗಂಟೆಯ ಒಳಗಾಗಿ ಎಲ್ಲರೂ ಆಸ್ಪತ್ರೆಗೆ ಹೋದರು. ಹನ್ನೊಂದೂವರೆಯ ಹೊತ್ತಿಗೆ ಅಚ್ಯುತನನ್ನು ಆಪರೇಷನ್ ಥಿಯೇಟರಿಗೆ ಕರೆದುಕೊಂಡು ಹೋದರು. ಪುನಃ ವಾಪ್ಸು ತರಲು ಅರ್ಧ ಗಂಟೆ ನಲವತ್ತು ನಿಮಿಷಗಳಾದುವು. ಅವನನ್ನು ಸ್ಟ್ರೆಚರಿನಲ್ಲಿ ವಾರ್ಡ್ ಕಡೆಗೆ ತೆಗೆದುಕೊಂಡು ಹೋದ ನಂತರ ಮೇನನ್‌ರು ಹೊರಗೆ ಬಂದು ಆಪರೇಷನ್ ಜಯಪ್ರದವಾಗಿ ಆಯಿತೆಂದು ಹೇಳಿದರು.

ವಾರ್ಡಿಗೆ ಹೋದನಂತರ ಗೋದಮ್ಮ ತಾನು ರೋಗಿಯನ್ನು ನೋಡಿಕೊಂಡು ಅಲ್ಲಿಯೇ ಇರುವುದಾಗಿಯೂ, ಅಲ್ಲಿಯೇ ಏನಾದರೂ ಹಾಲೋ ಹಣ್ಣೋ ತೆಗೆದುಕೊಳ್ಳುವುದಾಗಿಯೂ ಹೇಳಿದಳು.

ಅನಿಲ ಒಪ್ಪಲಿಲ್ಲ. ಅಕ್ಕನನ್ನು ಮನೆಗೆ ಹೋಗಿ ಸ್ನಾನ, ಊಟಗಳನ್ನು ಮಾಡಿಕೊಂಡು ಬರಬೇಕೆಂದು ಹೇಳಿದ. ಆಕೆ ವಾಪ್ಸು ಬರುವವರೆವಿಗೆ ಅನಿಲನೂ ಮಂಜುಳೆಯೂ ಕಾದಿದ್ದು ಅನಂತರ ಮನೆಗೆ ಬಂದರು.

ಸಾಯಂಕಾಲ ಪುನಃ ಆಸ್ಪತ್ರೆಗೆ ಹೋದರು. ಡಾಕ್ಟರು ಬಂದು ಮಾತ ನಾಡಿಸಿ, ಭರವಸೆಯನ್ನು ಹೇಳಿದರು.

"ಯಾರಾದರೂ ರಾತ್ರಿ ಇಲ್ಲಿ ಮಲಗುತ್ತೀರೇನು?"

"ಅದೇ ಯೋಚಿಸುತ್ತಿದ್ದೇವೆ"

ಎಂದು ಅನಿಲ ಉತ್ತರ ಕೊಟ್ಟ.

"ಮಲಗದಿದ್ದರೂ ಪರವಾಯಿಲ್ಲ. ನಾವು ನೋಡಿಕೊಳ್ಳುತ್ತೇವೆ. ಯಾರಾದರೂ ಇರುವುದಾದರೆ ಇರಬಹುದು. ಇಲ್ಲಿ ಭಯವೇನಿಲ್ಲ."

ಡಾಕ್ಟರು ಹೋಗುವಾಗ ಈ ಮಾತು ಹೇಳಿ ಹೋದರು. ಹೋಗು ವಾಗ ಯುವಕರಾದ ಅವರ ಕಣ್ಣುಗಳು ಮಂಜುಳೆಯ ಕಡೆಗೆ ನೋಡಿದವು.

ಆ ರಾತ್ರಿ ಮಂಜುಳೆಯು ಆಸ್ಪತ್ರೆಯಲ್ಲಿರುವುದೇ ಎಂಬ ಮಾತು ಬಂದಿತು.

"ಯಾರಾದರೂ ಜೊತೆಯಲ್ಲಿದ್ದರೆ ಇರುತ್ತೇನೆ. ನನಗೊಬ್ಬಳಿಗೇ ಇರಲು ಹೆದರಿಕೆ."

ಮಂಜುಳೆ ಮೆಲ್ಲನೆಯ ದನಿಯಲ್ಲಿ ಹೇಳಿದಳು.

ಗೋದಮ್ಮನಿಗೆ ಅಷ್ಟು ಹೊತ್ತಿಗಾಗಲೇ ಆ ಆಸ್ಪತ್ರೆಯ ವಿಷಯ ತಿಳಿದಿತ್ತು.

"ಈ ಆಸ್ಪತ್ರೆಯಲ್ಲಿ ಇಬ್ಬರು ಮೂವರು ಮಲಗುವುದಕ್ಕಾಗುವುದಿ ಲ್ಲಮ್ಮ. ಇಲ್ಲಿ ಬಹಳ ರೂಲ್ಸು. ಒಬ್ಬರು ಮಲಗಲು ಅವಕಾಶ ಕೊಡು ತ್ತಾರಂತೆ."

"ಹಾಗಾದರೆ ನಾನು ಇಲ್ಲಿ ಮಲಗುವುದಿಲ್ಲ. ಮನೆಗೇ ಹೋಗುತ್ತೇನೆ."

"ಹೋಗಲಿ, ಬಿಡು. ಇನ್ನು ಒಂದೆರಡು ರಾತ್ರಿ ತಾನೇ. ನಾನೇ ಇದ್ದು ಬಿಡುತ್ತೇನೆ."

ಗೋದಮ್ಮ ತನ್ನ ಒಪ್ಪಿಗೆಯನ್ನು ಸೂಚಿಸಿದಳು.

ಆ ದಿನವೂ ಮಾಮೂಲಿನಂತೆ ಸ್ವಲ್ಪ ಹೊತ್ತು ಸಮುದ್ರದ ಪಕ್ಕದಲ್ಲಿ ಕುಳಿತಿದ್ದು, ಅನಿಲಾ ಮಂಜುಳೆಯರು ಮನೆ ಬಂದರು.

ಕಾರಿನಲ್ಲಿ ಕುಳಿತುಕೊಂಡು ಕೋಡಂಬಾಕಂ ಕಡೆಗೆ ಹೋಗುತ್ತಿದ್ದಾಗಲೇ ಮಂಜುಳೆಯ ಎದೆಯು ಹೊಡೆದುಕೊಳ್ಳಲು ಮೊದಲಾಯಿತು. ಊಟಕ್ಕೆ ಬಡಿಸಿ, ಆ ತಾಳ ಮಲಗಿಕೊಳ್ಳಲು ಹೊರಟು ಹೋಗುತ್ತಾನೆ. ಆಮೇಲ ಮನೆಯಲ್ಲಿ ತಾನೂ ಮತ್ತು ಅನಿಲ ಇಬ್ಬರೇ !

ಅಷ್ಟು ದೊಡ್ಡ ಮನೆಯಲ್ಲಿ, ಕೂಗಿಕೊಂಡರೆ ಮತ್ತೊಬ್ಬರ ಕಿವಿಗೆ ಶಬ್ದವು ಸಹ ಬೀಳದ ಅಷ್ಟು ದೊಡ್ಡ ತೋಟದಲ್ಲಿ ತಾವಿಬ್ಬರೇ ! ಇಬ್ಬರಲ್ಲಿ ಒಬ್ಬನಾದ ಅನಿಲ ತನಗಾಗಿ ಹಸಿದಿರುವ ವ್ಯಕ್ತಿ. ನಡೆಯಲ್ಲಿ, ನುಡಿಯಲ್ಲಿ ಅವನ ಮನೋಭಾವವನ್ನು ಎಷ್ಟೋ ದಿನಗಳಿಂದ ಅವಳು ನೋಡಿದ್ದಾಳೆ. ಮತ್ತೊಬ್ಬಳು ತಾನು. ಯಾರ ಸಹಾಯವೂ ಇಲ್ಲದ ಅನಾಥೆ. ಮೊದಲು ಗಂಡ, ಗೋದಮ್ಮ ಇವರಗಳಿದ್ದರು. ಅನಂತರ ಗಂಡ ಊರಿನಲ್ಲಿಲ್ಲದಾಗ, ಆಸ್ಪತ್ರೆಗೆ ಸೇರಿದನಂತರ ಗೋದಮ್ಮ ಇದ್ದರು. ಈ ದಿನ ಆಕೆಯೂ ಇಲ್ಲ.

ಆಸ್ಪತ್ರೆಯಲ್ಲಿ ಏನಾಗುವುದೋ ಎಂದು ಹೆದರಿ ಇಲ್ಲಿ ಬಂದರೆ, ಇಲ್ಲಿ ಅದಕ್ಕಿಂತಲೂ ದೊಡ್ಡ ಭಯವು ಕಾದಿದೆ.

ರಾತ್ರಿ ಕಂಡ ಬಾವಿಯಲ್ಲಿ ಹಗಲು ಬಿದ್ದ ಹಾಗಾದರೆ ?

ಮಂಜುಳೆಯ ಮನಸ್ಸಿನಲ್ಲಿ ಅನೇಕ ವಿಧವಾದ ಭಾವನೆಗಳು ಬಂದುವು. ಅವುಗಳಲ್ಲಿ ಸ್ವಲ್ಪ ಭಾಗವು ಮೋಡದಂತೆ ತೇಲಿಯೂ ಹೋಯಿತು. ಇನ್ನು ಸ್ವಲ್ಪ ಭಾಗವು ಸಂದೇಹಗಳಾಗಿ ಅಲ್ಲಿಯೇ ಉಳಿದುಕೊಂಡಿತು.

ಇದ್ದುದರಲ್ಲಿಯೇ ಅವಳು ಧೈರ್ಯವನ್ನು ತಂದುಕೊಂಡಳು. "ಎಂದಾದರೂ ಸಂಭವಿಸಲೇ ಬೇಕಾದುದು. ಇಂದೇ ಸಂಭವಿಸಲಿ" ಎಂದು ಮನಸ್ಸಿನಲ್ಲಿ ಸಮಾಧಾನವನ್ನು ತಂದುಕೊಂಡಳು.

ಮನೆಗೆ ಹೋಗುವ ವೇಳೆಗೆ ಅಡಿಗೆಯಾಗಿದ್ದಿತು. ಊಟ ಮಾಡಿದರು. ಕೆಳಗೆ ಜಗುಲಿಯ ಕುರ್ಚಿಗಳ ಮೇಲೆ ಕುಳಿತು ತಾಂಬೂಲ ಚರ್ವಣ ಮಾಡಿದರು.

ಅನಂತರ ಅನಿಲ ಮಹಡಿಯ ಮೇಲೆ ಹೊರಟು ಹೋದ. ಮಂಜುಳೆ ಎಲ್ಲ ಕಡೆಗೂ ಹೋಗಿ ಬಾಗಿಲುಗಳು ಹಾಕಿದೆಯೇ ಎಂದು ನೋಡಿಕೊಂಡು

ಬಂದಳು. ಅಡಿಗೆಯ ಮನೆಗೆ ಹೋಗಿ ಥರ್ಮಾಫ್ಲಾಸ್ಕಿನಲ್ಲಿದ್ದ ಹಾಲನ್ನು ತೆಗೆದುಕೊಂಡು ತನ್ನ ಕೋಣೆಗೆ ಹೋದಳು. ಅಲ್ಲಿ ಎರಡು ಲೋಟಾಗಳಿಗೆ ಬಗ್ಗಿಸ ಬೇಕಾದವಳು ಒಂದು ಲೋಟಾಗೆ ಬಗ್ಗಿಸಿ, ಅದನ್ನು ತೆಗೆದುಕೊಂಡು ಅನಿಲನ ಕೋಣೆಯ ಕಡೆಗೆ ಹೋದಳು. ಬಾಗಿಲಿನಲ್ಲಿ ನಿಂತುಕೊಂಡಳು.

ಅರೆಗಳಿಗೆಯಲ್ಲಿ ಬಗೆಬಗೆಯಾಗಿ ಮಂಜುಳೆಗೆ ತೋರಿತು. ಒಂದು ಬಾರಿ ಒಳಗೆ ಹೋಗಿ ಮಾಮೂಲಿನಂತೆ ಹಾಲು ಕೊಡಬೇಕೆಂದು ತೋರುವುದು. ಕೂಡಲೇ ದಿಗಿಲಾಗಿ ಹಿಮ್ಮೆಟ್ಟುವಳು. ಆಗ ಧೈರ್ಯವನ್ನೂ ಸಮಾಧಾನವನ್ನು ತಂದುಕೊಳ್ಳುವಳು. ಎಷ್ಟು ಧೈರ್ಯವನ್ನು ತಂದುಕೊಳ್ಳಲು ಪ್ರಯತ್ನ ಮಾಡಿದರೂ ಎದೆಯು ಬಡಿದುಕೊಳ್ಳುತ್ತಲೇ ಇದ್ದಿತು. ಕಡೆಗೆ ಆದುದಾಗಲಿ ಎಂದುಕೊಂಡು ಸೇರಿಸಿದ್ದ ಬಾಗಿಲು ತೆಗೆದುಕೊಂಡು ಒಳಗೆ ಪ್ರವೇಶಮಾಡಿದಳು. ದೀಪವು ಆರಿಸಿತ್ತು. ವಾತಾಯನ ಉದ್ಯಾನಗಳ ಬಾಗಿಲು ತೆರೆದಿದ್ದು ಬೆಳದಿಂಗಳ ಮಂದ ಪ್ರಕಾಶವು ಕೋಣೆಯಲ್ಲಿ ಬಿದ್ದಿತ್ತು.

ಅನಿಲನು ಹಾಸಿಗೆಯ ಮೇಲೆ ಹೊರಳುತ್ತಾ ಬಿದ್ದಿದ್ದನು.

ಬಾಗಿಲು ಸರಿಸಿಕೊಂಡು ಒಳಗೆ ಬಂದವರಾರೆಂಬ ಕುತೂಹಲದಿಂದ ಅನಿಲ ಮೇಲೇಳುವ ವೇಳೆಗೆ ಮಂಜುಳೆ ದೀಪ ಹತ್ತಿಸಿದಳು.

ಮಾಮೂಲಿನಂತೆ ಹಾಲಿನ ಲೋಟಾವನ್ನು ಟೀಪಾಯಿಯ ಮೇಲಿಟ್ಟು ನಿಂತುಕೊಂಡಳು. ಅನಿಲನಲ್ಲಿ ಯಾವ ವಿಪರೀತ ವರ್ತನೆಯೂ ಕಂಡು ಬರಲಿಲ್ಲ. ಅವನು ಎಂದಿನಂತೆ ಹಾಲು ಕುಡಿದು ಲೋಟಾ ಕೆಳಗಿಟ್ಟ. ಮಂಜುಳಾ ಅದನ್ನು ತೆಗೆದುಕೊಂಡು, ದೀಪವಾರಿಸಿ, ಬಾಗಿಲು ಸೇರಿಸಿಕೊಂಡು ಹೊರಗೆ ಹೊರಟು ಹೋದಳು.

ತನ್ನ ಕೋಣೆಗೆ ಬಂದು ಬಾಗಿಲು ಚಿಲಕ ಹಾಕಿಕೊಂಡು, ಥರ್ಮಾಫ್ಲಾಸ್ಕಿನಿಂದ ಹಾಲು ಬಗ್ಗಿಸುತ್ತಿದ್ದಾಗ ಮಂಜುಳೆಯು ಆದಿನ ಸಾಯಂಕಾಲದಿಂದ ನಡೆದ ಘಟನೆಗಳಲ್ಲವನ್ನೂ ನೆನೆದುಕೊಂಡಳು. " ಎಷ್ಟು ಭಯ ಪಟ್ಟೆ. ಭಾವನವರ ವಿಷಯದಲ್ಲಿ ಎಷ್ಟು ಸಂದೇಹ ಪಟ್ಟೆ. ಅವರ ಮನಸ್ಸು ತಿಳಿ ನೀರಿನಂತೆ ನಿರ್ಮಲವಾಗಿದೆ. ನನ್ನ ಮನಸ್ಸೇ ಕಲ್ಮಶ ಪರಿಪೂರಿತ

ಮಾಡಿದ್ದ. ಅದರಿಂದಲೇ ಬಗೆ ಬಗೆಯ ಆಲೋಚನೆಗಳು" ಎಂದು ಕೊಂಡಳು.

ಸುಮಾರು ಅರ್ಧ ಮುಕ್ಕಾಲು ಗಂಟೆಯ ಹೊತ್ತು ಹಾಗೆಯೇ ಕಳೆಯಿತು. ಆ ದಿನವೇಕೋ ಮಂಜುಳೆಗೆ ನಿದ್ದೆ ಬರಲಿಲ್ಲ.

ಆ ಸಮಯದಲ್ಲಿ ಯಾರೋ ಬಾಗಿಲಿನಲ್ಲಿ ನಿಂತು ಕರೆದರು.

"ಮಂಜುಳಾ! ಎಚ್ಚರವಾಗಿದ್ದೀಯಾ?"

ಧ್ವನಿಯು ಅನಿಲನದಿದ್ದಂತೆ ಇದ್ದಿತು!

ಭಾವನವರು ಬಾಗಿಲಿನಲ್ಲಿ ಬಂದು ಕೂಗುತ್ತಿದ್ದಾರೆ. ಮಂಜುಳೆಯ ಮನಸ್ಸಿನಲ್ಲಿ ಬಂದಿದ್ದ ಭಯ, ಸಂದೇಹಗಳು ಮರುಕಳಿಸಿದವು.

ಮೊದಲು ಬಾಗಿಲು ತೆಗೆಯದೇ ಅವನನ್ನು ನಿವಾರಿಸಲೇ ಎಂದು ಕೊಂಡಳು. ಮರುಕ್ಷಣದಲ್ಲಿಯೇ ಅವನಲ್ಲಿ ತಪ್ಪು ಕಾಣುವವರೆವಿಗೆ ಸಂದೇಹಿಸುವುದು ಸರಿಯಲ್ಲವೆಂದು ಕೊಂಡಳು.

ಎದ್ದು ಬಂದು ಬಾಗಿಲು ತೆಗೆದಳು !

" ನಿನಗೂ ನಿದ್ದೆ ಬರಲಿಲ್ಲವೇನು ?"

ಅವಳು ಸುಮ್ಮನಿದ್ದಳು. ಮಾತನಾಡಲಿಲ್ಲ.

" ಎಷ್ಟು ಹೊತ್ತಾದರೂ ನಿದ್ದೆ ಬರಲಿಲ್ಲ. ಹೊರಗಡೆ ತೋಟದಲ್ಲಿ ಹೋಗಿ ಸ್ವಲ್ಪ ಹೊತ್ತು ಕುಳಿತಿದ್ದರೆ ನಿದ್ದೆ ಬರಬಹುದೆಂದು ಕಂಡಿತು. ಹೊರಗೆ ಬಂದೆ. ನಿನಗೆ ಎಚ್ಚರವಾಗಿದೆಯೋ ಇಲ್ಲವೋ ನೋಡೋಣವೆಂದು ಕರೆದೆ"

ಅವಳ ಮನಸ್ಸಿನ ಪ್ರಶ್ನೆಯನ್ನು ಕಣ್ಣಿನಲ್ಲಿ ಕಂಡವನಂತೆ—

" ನಿನಗೆ ನಿದ್ದೆ ಬಂದಿದ್ದರೆ ಒಬ್ಬನೇ ಹೋಗಿ ಕುಳಿತುಕೊಳ್ಳುತ್ತಿದ್ದೆ"

ಅವಳಿಗೆ ನಿದ್ದೆ ಬಂದಿರಲಿಲ್ಲ. ಅವನು ಒಬ್ಬನೇ ಹೋಗಿ ಕುಳಿತುಕೊಳ್ಳಬೇಕಾಗಿಯೂ ಬರಲಿಲ್ಲ.

ಇಬ್ಬರೂ ಹೋಗಿ ಮನೆಯ ಮುಂದೆ ಬೆಳದಿಂಗಳಿನಲ್ಲಿ ಹುಲ್ಲಿನ ಮೇಲೆ ಕುಳಿತುಕೊಂಡರು.

ಮಂಜುಳೆಯೊಂದಿಗೆ ಅನಿಲ ಆ ದಿನ ಎಷ್ಟೋ ಮಾತನಾಡಬೇಕೆಂದು ಕೊಂಡಿದ್ದ. ಆದರೆ ಏನೂ ಮಾತನಾಡಲಿಲ್ಲ. ಬಹಳ ಹೊತ್ತು ಕುಳಿತಿದ್ದು ಹೋಗಿ ಮಲಗಿಕೊಂಡರು.

ಮೂರನೆಯ ದಿನ ಅಚ್ಯುತ ಸ್ವಲ್ಪ ಚೇತರಿಸಿಕೊಂಡಿದ್ದ. ಹಿಂದಿನ ದಿನ ರಾತ್ರಿಯೇ ಸ್ವಲ್ಪ ಸ್ವಲ್ಪವಾಗಿ ಮಾತನಾಡಿದ್ದ. ಬೆಳಗಾಗ ಮಂಜುಳೆಯೂ ಐತಾಳನೂ ಅಚ್ಯುತನ ಜೊತೆಗಿದ್ದರು. ಅನಿಲ ಸಾಯಂಕಾಲ ಗೋದಮ್ಮನನ್ನು ಕರೆದುಕೊಂಡು ಹೋಗಿಬಿಟ್ಟು, ಮಂಜುಳೆಯನ್ನು ಕರೆತಂದ.

ಆ ದಿನ ರಾತ್ರಿ ಮೈ ಚೆನ್ನಾಗಿರಲಿಲ್ಲವೆಂದು ಅನಿಲ ಊಟ ಮಾಡಲಿಲ್ಲ. ಕಡೆಯಲ್ಲಿ ಮಂಜುಳೆಯು ಬಂದು ನೋಡಿಕೊಂಡು ಹೋಗುವವರೆಗೆ ತಡೆದ. ಅವಳು ತಂದು ಕೊಟ್ಟ ಹಾಲು ಸಹ ತೆಗೆದುಕೊಳ್ಳಲಿಲ್ಲ.

ಅನಂತರ ಬಾಗಿಲು ಹಾಕಿಕೊಂಡು ಡ್ರೈವರ್ ತಂದಿಟ್ಟಿದ್ದ ವಿಸ್ಕಿಯನ್ನು ಸೇವಿಸತೊಡಗಿದ.

ಹಾಗೆ ಮಾಡಲು ಒಂದು ಕಾರಣವೂ ಇತ್ತು.

ಅನಿಲ ಮಂಜುಳೆಗೆ ತನ್ನ ಮನೋಭಾವವನ್ನು ತಿಳಿಸಬೇಕೆಂದು ಎಷ್ಟೋ ಬಾರಿ ಸಂಕಲ್ಪಿಸಿಕೊಂಡು ಕಟ್ಟಕಡೆಯಲ್ಲಿ ಧೈರ್ಯವಿಲ್ಲದೇ ಹೋಗಿತ್ತು. ಅವಳೊಡನೆ ಸ್ಪಷ್ಟವಾಗಿ ಮಾತನಾಡಲು ಹಿಂದಿನ ದಿನ ಒಳ್ಳೆಯ ಅವಕಾಶವು ಸಿಕ್ಕಿತು. ಕಾರಿನಲ್ಲಿ ಮನೆಗೆ ಬರುವಾಗ ಮಾತನಾಡಬಹುದಾಗಿತ್ತು. ಊಟಮಾಡಿ, ತಾಂಬೂಲ ಚರ್ವಣ ಮಾಡುತ್ತಿದ್ದಾಗ ಮನಸ್ಸಿನ ಬಯಕೆಯನ್ನು ಅವಳ ಮುಂದೆ ತೋಡಿಕೊಳ್ಳಬಹುದಾಗಿತ್ತು. ಹಾಲು ತೆಗೆದುಕೊಂಡು ಬಂದಾಗ, ಹಾಲಿನಂತಹ ಬೆಳದಿಂಗಳಲ್ಲಿ ಕುಳಿತು ಮಾತನಾಡುತ್ತಿದ್ದಾಗ ಅವಳಲ್ಲಿ ಪ್ರಣಯ ಭಿಕ್ಷೆಯನ್ನು ಕೇಳಬಹುದಾಗಿತ್ತು.

ಆದರೆ—ಆದರೆ ಅದಕ್ಕೆ ಧೈರ್ಯವಾಗಲಿಲ್ಲ.

ಇನ್ನಿರುವುದು ಒಂದೆರಡು ದಿನಗಳ ಅವಕಾಶ. ಅಷ್ಟರಲ್ಲಿ ಮಂಜುಳೆಯನ್ನು ಒಲಿಸಿಕೊಳ್ಳಬೇಕು. ಅನಂತರ ಗೋದಮ್ಮ, ಅಚ್ಯುತ ಎಲ್ಲರೂ ಬಂದು ಬಿಡುತ್ತಾರೆ. ಅವರುಗಳು ಬಂದನಂತರ ಅವಕಾಶವಾಗುತ್ತದೆಯೋ ಇಲ್ಲವೋ ?

ಮನಸ್ಸಿಗೆ ಧೈರ್ಯ ತಂದುಕೊಳ್ಳಲು ಅನಿಲ ಆ ದಿನ ವಿಸ್ಕಿಯನ್ನು ತರಿಸಿದ್ದ.

ಆದರೂ ಪ್ರಯೋಜನವಾಗಲಿಲ್ಲ.

ವಿಸ್ಕಿಯನ್ನು ಕುಡಿಯುತ್ತಿದ್ದಂತೆ ಬುದ್ಧಿಗೆ ಮಾಲಿನ್ಯವು ಬರುತ್ತಿತ್ತು.

ಆಗ ಮನಸ್ಸಿನಲ್ಲಿ ಧೈರ್ಯವು ಬರುವುದು. ನೇರವಾಗಿ ಹೋಗಿ ಮಂಜುಳೆಯನ್ನು ಕೇಳಿ ಬಿಡುತ್ತೇನೆಂದು ಕೊಳ್ಳುವನು. ಅವಳ ಕೋಣೆಯ ಬಾಗಿಲ ಸಮೀಪಕ್ಕೆ ಹೋಗುವನು. ಇನ್ನೇನು ಬಾಗಿಲು ತಟ್ಟಬೇಕು, ಹೆಸರು ಹಿಡಿದು ಕೂಗಬೇಕು, ಎಂದುಕೊಳ್ಳುವಷ್ಟು ಹೊತ್ತಿಗೆ ಮದ್ಯದಿಂದ ಉಂಟಾದ ವೈಕವು ಇಳಿದು ಹೋಗುವುದು.

ಪುನಃ ಮೊದಲಿನಂತೆ ಕುದಿತ! ಪುನಃ ಧೈರ್ಯ! ಪುನಃ ಮನೋದೌರ್ಬಲ್ಯ!

ಅರ್ಧ ರಾತ್ರಿಯಾದ ನಂತರ ಅನಿಲನಿಗೆ ಎಚ್ಚರವಾಯಿತು. ಅಷ್ಟು ಹೊತ್ತಿಗೆ ಮದ್ಯದ ಮತ್ತತೆಯು ಇಳಿದು ಹೋಗಿತ್ತು. ಆದರೆ ಅತಿಸೇವನೆಯಿಂದ ಶರೀರವು ಅಸ್ವಸ್ಥವಾದಂತಾಗಿ ಚೆನ್ನಾಗಿ ನಿದ್ದೆ ಬರಲಿಲ್ಲ.

ಅರೆನಿದ್ದೆ, ಅರೆ ಎಚ್ಚರಗಳಲ್ಲಿ ಅವನೆಷ್ಟೋ ಕನಸುಗಳನ್ನು ಕಂಡನು. ಅವೆಲ್ಲವೂ ಮಂಜುಳೆಗೆ ಸಂಬಂಧಿಸಿದ್ದವುಗಳೇ ಆಗಿದ್ದವು.

ಅದು ಅಪರೇಷನ್ ಆದ ಮೂರನೆಯ ದಿನ. ಇನ್ನೂ ಗೋದಮ್ಮ ಮನೆಗೆ ಬಂದು ಮಲಗುತ್ತಿರಲಿಲ್ಲ.

ಅನಿಲ ನಿವಾಸದಲ್ಲಿ ಎರಡು ರಾತ್ರಿಗಳು ನಿರಾಪಾದಿಕವಾಗಿ ಕಳೆದುದರಿಂದ ಮಂಜುಳೆ ಧೈರ್ಯವಾಗಿ ಆ ಮನೆಯಲ್ಲಿ ಓಡಿಯಾಡುತ್ತಿದ್ದಳು.

ಮಾಮೂಲಿನಂತೆಯೇ ಅನಿಲ ಮಂಜುಳೆಯರು ಆಸ್ಪತ್ರೆಗೆ ಹೋಗಿ ಅಚ್ಯುತನನ್ನು ನೋಡಿದರು. ಬೀದಿನಲ್ಲಿ ಮಾತನಾಡುತ್ತಿದ್ದು ಮನೆಗೆ ಬಂದರು. ಊಟಮಾಡಿ ತಾಂಬೂಲ ಚರ್ವಣ ಮಾಡಿದರು. ಅನಿಲ ಮೆಟ್ಟಲುಗಳನ್ನು ಹತ್ತಿಹೋದ. ಮಂಜುಳೆ ಎಲ್ಲ ಬಾಗಿಲುಗಳನ್ನೂ ನೋಡಿಕೊಂಡು ಲೋಟದಲ್ಲಿ ಹಾಲು ತೆಗೆದುಕೊಂಡು ಅನಿಲನ ಕೋಣೆಗೆ ಹೋದಳು.

ಕೋಣೆಯಲ್ಲಿ ದೀಪ ಆರಿಸಿತ್ತು. ಅನಿಲ ಹಾಸಿಗೆಯ ಮೇಲೆ ಬಿದ್ದು ಹೊರಳುತ್ತಿದ್ದ.

ಮಂಜುಳೆಯು ಒಳಗೆ ಹೋಗಿ ದೀಪವನ್ನು ಹಾಕಿದಳು. ಮಂಚದ ಬಳಿಗೆ ಹೋದಳು. ಮಲಗಿದ್ದ ಅನಿಲನು ಏಳಲಿಲ್ಲ.

ಹಾಸಿಗೆಯ ಮೇಲೆ ಕುಳಿತುಕೊಂಡು ಅವನ ಭುಜವನ್ನು ಅಲ್ಲಾಡಿಸುತ್ತಾ "ಏಳಿ. ಹಾಲು ತೆಗೆದುಕೊಳ್ಳಿ" ಎಂದು ಅನಿಲನನ್ನು ಎಬ್ಬಿಸಿದಳು.

ಅನಿಲ ತಾಯಿಯ ಕೈಯಿಂದ ತೆಗೆದುಕೊಳ್ಳುವ ಮಗುವಿನಂತೆ ಹಾಲಿನ ಲೋಟಾವನ್ನು ತೆಗೆದುಕೊಂಡ.

ಒಂದು ಗುಟುಕು ಕುಡಿದು ತುಂಟ ಹುಡುಗನಂತೆ ಲೋಟಾವನ್ನು ಕೆಳಗಿಟ್ಟು "ಸಕ್ಕರೆ ಸಾಲದು" ಎಂದ.

ಅವಳು ಸಕ್ಕರೆ ಹಾಕಿಕೊಂಡು ಬಂದಿದ್ದಳು.

ಸಕ್ಕರೆಯು ಮಹಡಿಯ ಮೇಲೆ ಇರಲಿಲ್ಲ. ಅಡಿಗೆ ಮನೆಯಲ್ಲಿಯೇ ಇದ್ದಿತು. ಬಟ್ಟಲಿನಲ್ಲಿ ಸ್ವಲ್ಪ ಸಕ್ಕರೆಯನ್ನು ಹಾಕಿಕೊಂಡು, ಚಮಚಾವನ್ನೂ ಹಿಡಿದುಕೊಂಡು ಬಂದಳು.

ಮಂಜುಳೆಯು ಬರಲು ಸ್ವಲ್ಪ ಹೊತ್ತಾಯಿತು.

ಲೋಟಾದಲ್ಲಿ ಹಾಲು ಇಲ್ಲದ್ದನ್ನು ನೋಡಿ—

"ಹಾಲು ಕುಡಿದುಬಿಟ್ಟರೇನು ? ಹಾಗಾದರೆ ಸಕ್ಕರೆಯನ್ನೇಕೆ ತರಿಸಿದಿರಿ"

ಉತ್ತರವನ್ನು ಹೇಳದೇ ಅನಿಲ ನಗತೊಡಗಿದ.

"ಈ ಸಕ್ಕರೆಯನ್ನೇನು ಮಾಡುವುದು ?"

ಕುಪಿತಳಾದಂತೆಯೇ ಕೇಳಿದಳು.

"ನೀನು ತಿಂದುಬಿಡು"

"ನೀವು ಕೇಳಿದಿರಿ. ನೀವು ತಿನ್ನಿ"

ಅನಿಲನು ಮಂಜುಳೆಯನ್ನು ಹಿಡಿದು ಕೂರಿಸಿ, ಬಲಾತ್ಕಾರದಿಂದ ಅವಳ ಬಾಯಿ ಬಿಡಿಸಿ, ಎರಡು ಚಮಚಾ ಸಕ್ಕರೆಯನ್ನು ಹಾಕಿದನು.

ಮಂಜುಳೆ ಕುಪಿತಳಾದವಳಂತೆ ಹಾಸಿಗೆಯ ಕೊನೆಯಲ್ಲಿ ಕುಳಿತುಕೊಂಡಳು. ಅನಿಲ ತಾನೂ ಒಂದು ಚಮಚಾ ಸಕ್ಕರೆಯನ್ನು ಬಾಯಲ್ಲಿ ಹಾಕಿಕೊಂಡು ನಕ್ಕ. ಅವಳ ಮುಖದಲ್ಲಿಯೂ ನಗುವು ಕಂಡಿತು.

"ಮಂಜುಳಾ"

ಏನು ಎಂಬಂತೆ ಮಂಜುಳೆಯು ಅವನ ಕಡೆಗೆ ನೋಡಿದಳು,

"ನಾನು ನಿನ್ನನ್ನು ಪ್ರೇಮಿಸುತ್ತೇನೆ"

ಅನಿಲ ಬಾಯಿಗೆ ಬಂದಿದ್ದ ಮಾತನ್ನು ಆಡಿಬಿಟ್ಟಿದ್ದ. ಆದರೆ ಅದರ ಪರಿಣಾಮ ಏನಾಗುತ್ತದೆಯೋ ಎಂದು ಹೆದರಿದ.

" ಅದು ನನಗೆ ಗೊತ್ತು "

ಆ ಉತ್ತರವನ್ನವನು ನಿರೀಕ್ಷಣೆ ಮಾಡಿರಲಿಲ್ಲ. ಅದು ಅಷ್ಟು ಗಾಂಭೀರ್ಯದಿಂದಲೂ, ಶಾಂತಭಾವದಿಂದಲೂ ಹೇಳಲ್ಪಡುವುದು ಎಂದು ಕೊಂಡಿರಲಿಲ್ಲ.

ಇಬ್ಬರಲ್ಲಿ ಯಾರೂ ಮಾತನಾಡಲಿಲ್ಲ. ಅನಿಲನು ಮೆಲ್ಲನೆ ತನ್ನ ಕೈ ಮುಂದೆ ತಂದು, ಅವಳ ಕೈಯನ್ನು ತೆಗೆದುಕೊಳ್ಳುವುದಕ್ಕೆ ಹೋದನು.

ಮಂಜುಳೆಯು ತಟ್ಟನೆ ತನ್ನ ಕೈಯನ್ನು ಎಳೆದುಕೊಂಡು ಹಿಂದೆ ಸರಿದು ಕುಳಿತುಕೊಂಡು–

" ಈಗ ಕೆಲವು ದಿನಗಳಿಂದ ಎಂದೋ ಒಂದು ದಿನ ಹೀಗಾಗುತ್ತದೆಂದು ನನಗೆ ಗೊತ್ತಿತ್ತು. ಮೊನ್ನೆಯಿಂದ ನಿಮ್ಮ ಬಾಯಿಂದ ಈ ಮಾತು ಬರು ವುದೆಂದು ನಿರೀಕ್ಷಿಸುತ್ತಿದ್ದೇನೆ. ಗೃಹಿಣಿಯಾದ ನನ್ನನ್ನು ಬಯಸುವುದು ನಿಮಗೂ ಸರಿಯಲ್ಲ. ನನಗೂ ತಕ್ಕದಲ್ಲ. ಇದನ್ನು ನೀವೆಂದೂ ಯೋಚಿಸ ಲಿಲ್ಲವೇನು ?"

ಮಾತಿನಲ್ಲಿ ನಾಚಿಕೆ ಸಂಕೋಚಗಳಾಗಲೀ, ಅಧೋಕ್ತಿ ವ್ಯಂಗೋಕ್ತಿ ಗಳಾಗಲೀ ಇರಲಿಲ್ಲ.

ಮಂಜುಳೆ ಚತುರತೆಯಿಂದ ವಿಷಯವನ್ನು ವಿವೇಚಿಸುವ ಸ್ಥಿತಿಗೆ ಎಳೆದು ತಂದಿದ್ದಳು.

ಅನಿಲ ಮಾತನ್ನು ಆರಂಭಿಸಿದ ಧೋರಣೆಯು ಯಾವಾಗಲೋ ಮಾಯವಾಗಿತ್ತು. ಆದರೂ ಅವಳಾಡಿದ ಮಾತಿನ ತರಹವು ಅವನೂ ಮಾತನಾಡುವುದಕ್ಕೆ ಅವಕಾಶವನ್ನು ತಂದುಕೊಟ್ಟಿತ್ತು.

" ಎಷ್ಟೋ ದಿನಗಳು ಯೋಚಿಸಿದ್ದೇನೆ, ಮಂಜುಳಾ. ಹಲವಾರು ರಾತ್ರಿಗಳು ನಿದ್ದೆಗೆಟ್ಟು ಈ ವಿಷಯ ಯೋಚಿಸಿದ್ದೇನೆ. ನೀನು ಈಗ ಹೇಳಿ ದುದೆಲ್ಲ ನನ್ನ ಮನಸ್ಸಿಗೂ ಬಂದಿದೆ. ಏನಾದರೂ ನನ್ನ ಮನಸ್ಸಿಗೆ ಸಮಾ ಧಾನವಾಗದೇ ಇದೆ''

[೩೩]

ಅವಳು ಮಾತನಾಡಲಿಲ್ಲ.

" ಒಂದು ಬಾರಿ ಸಮಾಧಾನವಾಗಿ ಯೋಚಿಸು, ಮಂಜುಳ. ನಿನ್ನನ್ನು ನೋಡಿದಾಗಿನಿಂದಲೂ ನಾನು ನಿನ್ನನ್ನು ಪ್ರೇಮಿಸುತ್ತಿದ್ದೇನೆ. ನಿನಗಾಗಿಯೇ ನಾನು ಶ್ಯಾಮಲಮ್ಮನ ಮನೆಗೆ ಬರುತ್ತಿದ್ದೆ. ಅಂದಿನಿಂದ ಹುಚ್ಚನಂತೆ ನಿನಗಾಗಿ ಹಂಬಲಿಸುತ್ತಿದ್ದೇನೆ. ನಾನು ನಟನಾದುದು, ಸಂಪಾದನೆ ಮಾಡಿದ್ದು, ಈ ಮನೆ, ಈ ತೋಟ ಇವೆಲ್ಲವನ್ನೂ ಮಾಡಿದ್ದು ನಿನಗಾಗಿ. ನಿನ್ನ ನಿರಾಕರಣೆಯಿಂದ ನನ್ನ ಆಶೆ, ನನ್ನ ಜೀವನ ಎಲ್ಲವೂ ಭಗ್ನವಾಗಿ ಹೋಗುತ್ತವೆ. ಒಂದು ಬಾರಿ, ಒಂದು ಬಾರಿ ನನ್ನನ್ನು ಕರುಣೆಯಿಂದ ನೋಡು, ಅನುಗ್ರಹಿಸು"

ಅನಿಲ ಭಾವೋದ್ರೇಕದಿಂದ ಮಾತನಾಡಿದ. ಮಂಜುಳೆಯು ಅಷ್ಟೇ ಉದ್ರೇಕರಹಿತಳಾಗಿ—

" ನೀವು ಹಾಗೆ ದೀನತೆಯ ಮಾತನಾಡಬೇಡಿ. ನಾನು ನಿಮ್ಮನ್ನು ಎಷ್ಟೋ ದೊಡ್ಡವರೆಂದು ಕೊಂಡಿದ್ದೇನೆ. ಅಂತಹವರು ದೀನರಾಗುವುದು ನನ್ನ ಮನಸ್ಸಿಗೆ ದುಃಖವಾಗುತ್ತದೆ. ನೀವು ನನಗಾಗಿ ಎಷ್ಟೋ ಮಾಡಿದ್ದೀರಿ. ಅದಕ್ಕಾಗಿ ನಾನು ಆಜನ್ಮವೂ ಕೃತಜ್ಞಳಾಗಿರಬೇಕು. ನಿಮಗಾಗಿ ಈ ದೇಹವನ್ನು ತೇಯುವುದಕ್ಕೂ ಸಿದ್ಧವಾಗಿದ್ದೇನೆ. ಆದರೆ ಧರ್ಮದಿಂದ ಚ್ಯುತಳಾಗು ಎಂದು ನೀವು ತಾನೇ ಹೇಗೆ ಹೇಳುತ್ತೀರಿ?"

" ಧರ್ಮ ! ಧರ್ಮ ! ಪ್ರೇಮಕ್ಕಿಂತ ಧರ್ಮವು ದೊಡ್ಡದೇ ? ಮಂಜುಳಾ "

" ನನಗಂತಹ ದೊಡ್ಡ ವಿಷಯಗಳು ಅರ್ಥವಾಗುವುದಿಲ್ಲ. ನೀವು ಮಂಡ್ಯಕ್ಕೆ ಮೊದಲನೆಯ ಸಾರಿ ಬಂದಾಗ ನನಗೊಬ್ಬ ಅಣ್ಣ ಸಿಕ್ಕಿದನೆಂದು ಕೊಂಡೆ. ನೀವು ನನ್ನ ಮೇಲೆ ಕರುಣೆಯನ್ನು ತೋರಿಸಲಾರಂಭಿಸಿದ ಮೇಲೆ ಅಣ್ಣ ನನ್ನನ್ನು ವಿಶ್ವಾಸ ಮಾಡುತ್ತಾನೆಂದುಕೊಂಡೆ. ನೀವೂ ನನ್ನನ್ನು ತಂಗಿಯಾಗಿ ಸ್ವೀಕರಿಸಿರಿ. ನೀವು ಪ್ರೀತಿಸುತ್ತಿದ್ದ ಮಂಜುಳೆಯು ಸತ್ತಳೆಂದುಕೊಳ್ಳಿ. ಅವಳನ್ನು ಮರೆತುಬಿಡಿ''

ಅವನಿಗೆ ಏನು ಹೇಳುವುದಕ್ಕೂ ತೋರಲಿಲ್ಲ.

" ಮರೆಯಲು ಪ್ರಯತ್ನ ಮಾಡುತ್ತೇನೆ "

ಆ ಮಾತು ಕೇಳಿದ ಮಂಜುಳೆ ದೀಪವಾರಿಸಿ, ಬಾಗಿಲು ಸೇರಿಸಿಕೊಂಡು ಹೊರಗೆ ಹೋದಳು.

ಅನಿಲ ಮೇಲೆದ್ದು ಹೋಗಿ ಬಾಗಿಲಿನ ಚಿಲಕ ಹಾಕಿದ. ದೀಪ ಹಚ್ಚಿದ. ಚರ್ಮದ ಸೂಟುಕೇಸಿನಲ್ಲಿದ್ದ ವಿಸ್ಕಿ ಬಾಟಲು ನೋಡಿದ. ಹಿಂದಿನ ದಿನ ಉಳಿಸಿದ್ದ ಮದ್ಯವು ಅರ್ಧದಷ್ಟಿತ್ತು. ಬಾಟಲನ್ನು, ಗ್ಲಾಸು, ನೀರನ್ನು ಹಾಸಿಗೆಯ ಬಳಿ ಇದ್ದ ಟೀಪಾಯಿಯ ಮೇಲೆ ಇಟ್ಟುಕೊಂಡ.

ಬಾಟಲಿನಿಂದ ವಿಸ್ಕಿಯನ್ನು ಗ್ಲಾಸಿಗೆ ಬಗ್ಗಿಸುತ್ತಾ "ಹೌದು. ಮಂಜುಳಾ, ನೀನು ಹೇಳಿದ್ದು ಸರಿ. ನಿನ್ನನ್ನು ಮರೆಯಲು ಪ್ರಯತ್ನ ಮಾಡುತ್ತೇನೆ" ಎಂದು ಹೇಳಿದ.

# ೨೫

ಅನಿಲ ಅಂದು ರಾತ್ರಿಯಲ್ಲಿ ಎತ್ತಿದ ಬಾಟಲನ್ನು ಕೆಳಗಿಳಿಸಲೇ ಇಲ್ಲ.

ಆಸ್ಪತ್ರೆಯಲ್ಲಿ ಮಲಗುತ್ತಿದ್ದ ಗೋದಮ್ಮ ಎರಡು ಮೂರು ದಿನಗಳ ನಂತರ ಮನೆಯಲ್ಲಿಯೇ ಮಲಗಲಾರಂಭಿಸಿದಳು. ಎಂಟು ಹತ್ತು ದಿನಗಳಲ್ಲಿ ಅಚ್ಯುತನೂ ಮನೆಗೆ ಬಂದ. ಮಂಜುಳೆಯಂತೂ ಅಲ್ಲಿಯೇ ಇರುತ್ತಿದ್ದಳು.

ಇತರರ ಎದುರಿಗೆ ಮನೆಯಲ್ಲಿ ಸಿಗರೇಟು ಸಹ ಸೇದಲು ಹಿಂತೆಗೆಯುತ್ತಿದ್ದ ಅನಿಲ ಯಾರನ್ನೂ ಲಕ್ಷ್ಯವೇ ಮಾಡುತ್ತಿರಲಿಲ್ಲ. ಕುಡಿತದ ಮತ್ತಿನಲ್ಲಿಯೇ ದಿನವೆಲ್ಲವೂ ಕಳೆಯುತ್ತಿತ್ತು.

ಮೊದಮೊದಲು ಕೆಲಸ ಮಾಡಲು ಸ್ಟುಡಿಯೋಗೆ ಹೋಗುತ್ತಿದ್ದ. ಅಲ್ಲಿ ತೋರಿದಾಗ, ತನ್ನ ಕಾರಿಗೆ ಹೋಗಿ ಕುಡಿದುಕೊಂಡು ಬಂದು ಪುನಃ ಕೆಲಸದ ಮೇಲ್ಗೆ ನಿಲ್ಲುತ್ತಿದ್ದ. ಯಾರಾದರೂ ಸ್ವಲ್ಪ ಹೆಚ್ಚು ಕಡಿಮೆಯಾಗಿ ಮಾತನಾಡಿದರೆ ಅಥವಾ ನಡೆದುಕೊಂಡರೆ ಉದ್ರೇಕಗೊಳ್ಳುತ್ತಿದ್ದ. ಹಸನ್ಮುಖಿಯಾಗಿದ್ದ ಅನಿಲನಿಗೆ ಈಗ ಕೋಪವು ಮೂಗಿನ ಮೇಲೆಯೇ ಇರುತ್ತಿದ್ದಿತು. ಅವನು ಜಗಳವಾಡದೇ ಮನೆಗೆ ಬರದ ದಿನವೇ ಇರುತ್ತಿರಲಿಲ್ಲ.

ಅನಿಲನಲ್ಲಿ ಆದ ಈ ಬದಲಾವಣೆಯನ್ನು ಎಲ್ಲರೂ ಗಮನಿಸಿದ್ದರು. ಆದರ ಕಾರಣವನ್ನು ಕುರಿತು ಒಬ್ಬೊಬ್ಬರು ಒಂದೊಂದು ವಿಧವಾಗಿ ಮಾತನಾಡಿಕೊಳ್ಳುತ್ತಿದ್ದರು. ಆದರೆ ವಾಸ್ತವವಾದ ಸಂಗತಿಯು ಯಾರಿಗೂ

ಗೊತ್ತಾಗಿರಲಿಲ್ಲ. ಮಂಜುಳೆಯೂ ಅದರ ಕಾರಣವನ್ನು ಯಾರಿಗೂ ಹೇಳದೇ ಮನಸ್ಸಿನಲ್ಲಿಯೇ ಕೊರಗುತ್ತಿದ್ದಳು.

ಕುಡಿತದಿಂದಲೇ ಅನಿಲನಲ್ಲಿ ಈ ಬದಲಾವಣೆಯಾಗಿದೆಯೆಂದೂ ಎಲ್ಲಿಯೋ ಕೆಟ್ಟ ಸಹವಾಸದಲ್ಲಿ ಕುಡಿತವು ಅವನಿಗೆ ಅಭ್ಯಾಸವಾಗಿದೆಯೆಂದೂ ಎಲ್ಲರೂ ತಿಳಿದುಕೊಂಡಿದ್ದರು. ಕುಡಿತವನ್ನು ಬಿಟ್ಟುಬಿಟ್ಟರೆ ಮೊದಲಿನಂತೆ ಸರಿ ಹೋಗುವನೆಂದು ಭಾವಿಸುತ್ತಿದ್ದರು.

ಬಹಳ ದಿನ ಇದು ಗೋದಮ್ಮನಿಗೆ ತಿಳಿಯದೇ ಇರಲಿಲ್ಲ. ಆಕೆ ಒಂದೆರಡು ಬಾರಿ ಸೂಕ್ಷ್ಮವಾಗಿ ವಿಷಯವನ್ನು ಪ್ರಸ್ತಾಪ ಮಾಡಿದಳು. ಆ ಎರಡು ಸಲವೂ ಅನಿಲ ಕೋಪ ಮಾಡಿಕೊಂಡು ಹೊರಟು ಹೋಗಿದ್ದ.

ಅನಿಲನಿಂದ ಬಹಳ ಮಟ್ಟಿಗೆ ಉಪಕೃತನಾಗಿದ್ದರೂ ಅಚ್ಯುತನಿಗೆ ಆ ಮನೆಯಲ್ಲಿರಲು ಮೊದಲಿನಿಂದಲೂ ಬಹಳ ಸಂಕೋಚವಾಗುತ್ತಿತ್ತು. ಅನಿಲನ ಸ್ಥಿತಿ ಹೀಗಾದನಂತರವಂತೂ ಅವನಿಗೆ ಅಲ್ಲಿರುವುದು ಇಷ್ಟವೇ ಇರಲಿಲ್ಲ.

ಒಮ್ಮೆ ಅವನು ಬಹಳ ನೊಂದುಕೊಂಡು—

"ನಾನು ಮಂಡ್ಯದಲ್ಲಿಯೇ ಇದ್ದಿದ್ದರೆ ಚೆನ್ನಾಗಿತ್ತು. ಅಲ್ಲಿ ಬಡತನ ವಿದ್ದರೂ ಗೌರವದಿಂದ ಬದುಕಿರಬಹುದಾಗಿತ್ತು. ಇಲ್ಲಿ ಬಿಟ್ಟೀಕೂಳು ತಿಂದು ಕೊಂಡು ಇಷ್ಟು ದಿನ ಬಿದ್ದಿದ್ದುದಾಯಿತು. ಇನ್ನು ಮೇಲೆ ಇವರು ಕೆಟ್ಟದಕ್ಕೆ ನಾವೇ ಕಾರಣ ಎಂಬ ಅಪಕ್ವಾತಿಯನ್ನು ಬೇರೆ ಹೊರಬೇಕಾಗಿ ಬರುತ್ತದೆ"

ಹಿಂದೆ ಅಚ್ಯುತ ಸಂಕೋಚಪಡುತ್ತಿದ್ದಾಗ ಗೋದಮ್ಮ ಸಮಾಧಾನ ಮಾಡುತ್ತಿದ್ದಳು. "ಅನಿಲ ನಿಮ್ಮ ಅಣ್ಣನಂತೆ. ಅಣ್ಣನ ಮನೆಯಲ್ಲಿ ತಮ್ಮ ನಿದ್ದರೆ ಬಿಟ್ಟೀ ಕೂಳು ತಿಂದ ಹಾಗಾಗುತ್ತದೆಯೆ? ಅದೇನೋ ನೋಟಾದು ಕೆಲಸಕ್ಕೆ ಓಡಿಯಾಡುತ್ತಿದ್ದೀಯಲ್ಲ. ಸ್ವಲ್ಪ ತಡೆದುಕೋ" ಎಂದು ಹೇಳುತ್ತಿದ್ದಳು.

ಗೋದಮ್ಮನ ಸಂಸಾರ ಅನಿಲ ನಿವಾಸಕ್ಕೆ ಬಂದ ಏಳೆಂಟು ದಿನಗಳಲ್ಲಿಯೇ ಅಚ್ಯುತ ತಾನು ಸುಮ್ಮನೆ ಕುಳಿತಿರಲಾಗುವುದಿಲ್ಲವೆಂದು ಹಠ ಹಿಡಿದಿದ್ದ. ಆಗ ಅನಿಲ ಕಾಲ್‌ಟೆಕ್ಸ್ ಪೆಟ್ರೋಲ್ ಬಂಕ್ ಮತ್ತು ಸರ್ವಿಸ್ ಸ್ಟೇಷನ್ ಮಾಡಿಸಿ ಕೊಡುವುದಾಗಿ ಹೇಳಿದ್ದ. ಅಚ್ಯುತ ಅನಿಲ

ಇಬ್ಬರೂ ಭಾಗಸ್ಥರಾಗಿ ಅದಕ್ಕೆ ಅರ್ಜಿ ಹಾಕಿದ್ದರು. ಆ ಏಜನ್ಸಿಗಾಗಿ ಅಚ್ಯುತ ಓಡಿಯಾಡುತ್ತಿದ್ದ.

ಇನ್ನು ಕೆಲವು ದಿನಗಳಲ್ಲಿಯೇ ಕೆಲಸವಾಗುತ್ತದೆ ಎಂಬಂತಿದ್ದಾಗ ಭೋಗ್ಯಕ್ಕೆ ಹಾಕಿದ್ದ ಜಮೀನು ಬಿಡಿಸಿಕೊಳ್ಳುವುದು, ಮನೇ ರಿಪೇರಿ ಇವೆಲ್ಲ ಬಂದುವು. ಅಚ್ಯುತ ಮಂಡ್ಯದಲ್ಲಿದ್ದರೂ ಏಜನ್ಸಿ ವಿಷಯಕ್ಕಾಗಿ ಅನಿಲನಿಗೆ ಆಗಾಗ ಕಾಗದ ಬರೆಯುತ್ತಲೇ ಇದ್ದ. ಕೆಲಸವೆಲ್ಲಾ ಮುಗಿಸಿಕೊಂಡು ಬರಬಹುದೆಂದು ಅನಿಲ ಧೈರ್ಯ ಕೊಟ್ಟು ಉತ್ತರಿಸುತ್ತಿದ್ದ.

ಅಚ್ಯುತ ಮಂಡ್ಯದಿಂದ ವಾಪಸ್ಸು ಬಂದ ಮೇಲೆ ಇಬ್ಬರೂ ಕಾಲ್ ಟೆಕ್ಸ್ ಮ್ಯಾನೇಜರನ್ನು ಹೋಗಿ ಕಂಡಿದ್ದರು.

ಆದರೆ ಅಷ್ಟರಲ್ಲಿ ಅಚ್ಯುತ ಆಸ್ಪತ್ರೆಗೆ ಸೇರಬೇಕಾಗಿ ಬಂದಿತು.

ಆಸ್ಪತ್ರೆಯಿಂದ ಮನೆಗೆ ಬಂದನಂತರ ಯಾವ ವಿಷಯವನ್ನೂ ಪ್ರಸ್ತಾಪಿಸುವಂತೆಯೇ ಇರಲಿಲ್ಲ. ಅಷ್ಟು ಹೊತ್ತಿಗೆ ಅನಿಲನ ತರಹ ಪೂರ್ಣವಾಗಿ ಬದಲಾಯಿಸುತ್ತಿತ್ತು.

ಈ ಸಮಯದಲ್ಲಿ ಅಚ್ಯುತನಾಡಿದ ಮಾತಿಗೆ ಗೋದಮ್ಮ ಏನೂ ಹೇಳಲಾರದವಳಾಗಿದ್ದಳು.

ಅಚ್ಯುತ ಹೇಳಬೇಕೆಂದಿದ್ದುದನ್ನು ಪೂರಾ ಹೇಳಿರಲಿಲ್ಲ.

" ನನ್ನ ಕೆಲಸ ಅವರು ಮಾಡಿಕೊಡುವುದಿಲ್ಲವಲ್ಲ ಎಂದು ನನಗೆ ಹೊಟ್ಟೆಯುರಿ ಇಲ್ಲ. ನಾವು ಬಂದು ಇವರು ಹಾಳಾದರು ಎಂಬ ಮಾತು ಬರುವುದಲ್ಲಾ ಎಂದು ಭಯ "

" ಆ ಮಾತು ಯಾಕೆ ಬರುತ್ತದೆ ? ನಮ್ಮದೇನು ತಪ್ಪು?"

" ನಮ್ಮದು ತಪ್ಪಿಲ್ಲದಿರಬಹುದಲ್ಲಮ್ಮ. ಆದರೆ ನೋಡಿದವರು ಹಾಗೆಂದುಕೊಳ್ಳುತ್ತಾರೆಯೇ ? ಮೊನ್ನೆ ಕನಕಮ್ಮ ಬಂದಿದ್ದಳಂತೆ. ಅವಳು ಮಂಜುಳೆಯೊಂದಿಗೆ ನೀವು ಬಂದನಂತರ ಅನಿಲ ಸರಿಯಾಗಿ ಕೆಲಸದ ಮೇಲೆ ಬರುತ್ತಿಲ್ಲ. ಅವರಿಗೆ ಮೊದಲಿನಂತೆ ಮುತುವರ್ಜಿ ಇಲ್ಲ. ಹೀಗೇ ಇದ್ದರೆ ಇನ್ನು ಬಹು ದಿನ ನಡೆಯುವುದಿಲ್ಲ–ಎಂದು ಹೇಳಿದಳಂತೆ "

ಗೋದಮ್ಮನಿಗೆ ಚೇಳು ಕುಟುಕಿದಂತಾಯಿತು.

" ನನಗೂ ಇಲ್ಲಿಂದ ಹೊರಟು ಹೋಗಬೇಕೆಂದಿದೆ. ಎರಡು ದಿನ

ತಡೆದುಕೋ, ಅಚ್ಚು. ಏನಾದರೂ ಒಂದು ಕಾರಣ ಸಿಕ್ಕಲಿ, ಹೊರಟು ಹೋಗೋಣ ”

ಎಂದಾಕೆ ಅಚ್ಯುತನನ್ನು ಸಮಾಧಾನ ಪಡಿಸಿದಳು.

ಒಂದು ಬಾರಿ ರಾಜರತ್ನಂ ಚೆಟ್ಟಿಯಾರರು ಸಹ ಅನಿಲನನ್ನು ಕಂಡು ಹೇಳಿದರು. ವೆಂಕಪ್ಪಯ್ಯನವರು ನೋಡಿ ಎಚ್ಚರಿಸಿದರು. ಕನಕಂ ನಾಲ್ಕು ದಿನ ಅನಿಲನೊಡನಿದ್ದು ಕುಡಿತವನ್ನು ಕಡಿಮೆ ಮಾಡಿಸಲು ಪ್ರಯತ್ನ ಮಾಡಿದಳು.

ಯಾವುದೂ ಸಾರ್ಥಕವಾಗಲಿಲ್ಲ. ಅವನಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ.

ಆದರೆ ಪರಿಸ್ಥಿತಿಗಳು ಮಾತ್ರ ಒಂದೇ ರೀತಿಯಾಗಿರಲು ಸಾಧ್ಯವಾಗಲಿಲ್ಲ. ಅನಿಲ ಸ್ಟುಡಿಯೋಗಳಿಗೆ ಕೆಲಸಕ್ಕೆ ಹೋದರೆ ಹೋಗುತ್ತಿದ್ದ. ತೋರಿದ್ದರೆ ಹೋಗುತ್ತಾ ಇರಲಿಲ್ಲ. ಹೋದರೂ ಅನೇಕ ವೇಳೆ ಅಭಿನಯಿಸುವ ಸ್ಥಿತಿಯಲ್ಲಿರುತ್ತಿರಲಿಲ್ಲ.

ಎರಡು ಚಿತ್ರಗಳವರು ಅವನು ಅಭಿನಯಿಸಿದ್ದ ಭಾಗವನ್ನು ಕತ್ತರಿಸಿ ಹಾಕಿ, ಬೇರೊಬ್ಬ ಹೀರೋವನ್ನು ಮಾಡಿಕೊಂಡು ಚಿತ್ರವನ್ನು ಮುಂದುವರಿಸಬೇಕಾಗಿ ಬಂದಿತು. ಅವರು ಡ್ಯಾಮೇಜ್‌ಗಾಗಿ ಸೂಟು ಫೈಲು ಮಾಡುವುದಾಗಿ ನೋಟೀಸು ಕೊಟ್ಟಿದ್ದರು.

ಕೇಸಾದರೆ ಗಲಾಟೆಯಾಗಿ ಹೆಸರು ಕೆಡುವುದೆಂದು ವೆಂಕಪ್ಪಯ್ಯನವರು ರಾಜೀ ಕಬೂಲಿ ಮಾಡಿ ಅನಿಲನಿಂದ ಆ ಚಿತ್ರನಿರ್ಮಾಪಕರಿಗೆ ನಷ್ಟವನ್ನು ಕೊಡಿಸಿ ಕೊಟ್ಟಿತು.

ಈ ನಡುವೆ ಅನಿಲನು ಅಭಿನಯಿಸಿದ್ದ ಚಿತ್ರಗಳೆರಡು ಪ್ರದರ್ಶಿಸಲ್ಪಟ್ಟವು. ಅದು ಚೆನ್ನಾಗಲಿಲ್ಲವೆಂದು ಚಿತ್ರ ನಿರ್ಮಾಪಕರಿಗೂ ಗೊತ್ತಾಯಿತು. ಪತ್ರಿಕೆಗಳಿಗೆ ಧಾರಾಳವಾಗಿ ಜಾಹಿರಾತು ಕೊಟ್ಟು, ಒಳ್ಳೆಯ ವಿಮರ್ಶೆಗಳನ್ನೇ ಬರೆಸಿದರು. ಆದರೆ ಚಿತ್ರಗಳು ಹಣ ತರಲಿಲ್ಲ. ಎಲ್ಲ ಕೇಂದ್ರಗಳಲ್ಲಿಯೂ ಎರಡು ಮೂರು ದಿನಗಳು ಚೆನ್ನಾಗಿ ಕಲೆಕ್ಷನ್ ಆಗಿ ಅನಂತರ ಬಿದ್ದು ಹೋಗುತ್ತಿತ್ತು.

ಅದರಿಂದ ಹೆಚ್ಚು ಹಣವನ್ನು ಸುರಿದು ಅನಿಲನನ್ನು ಬುಕ್ ಮಾಡಲು

ನಿರ್ಮಾಪಕರು ಹೆದರಲಾರಂಭಿಸಿದರು. ಕಡಿಮೆಯ ಮೊತ್ತಕ್ಕೆ ಅನಿಲ ಒಪ್ಪಿಕೊಳ್ಳುತ್ತಿರಲಿಲ್ಲ.

ಬುಕ್ ಮಾಡಿದ್ದವರು ಅವನನ್ನು ಅನುಸರಿಸಿ ಕೆಲಸ ತೆಗೆದುಕೊಳ್ಳುತ್ತಿದ್ದರು. ಮೊದಲಿನಂತೆ ಹೊಸ ಕಂಟ್ರಾಕ್ಟುಗಳು ಬರುತ್ತಿರಲಿಲ್ಲ.

ಹೀಗಾಗಿ ಅನಿಲನಿಗೆ ಕೆಲಸವೂ ಕಡಿಮೆಯಾಗ ತೊಡಗಿತು. ಆದರೆ ಅವನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಮನೆಯಲ್ಲಿಯೇ ಇದ್ದು ಬಿಡುತ್ತಿದ್ದನು.

ಒಂದು ದಿನ ಬೆಳಗಾಗ ಹತ್ತುಗಂಟೆಯಲ್ಲಿ ಕನಕಂ ಕೈಯಲ್ಲೊಂದು ಪತ್ರಿಕೆಯನ್ನು ಹಿಡಿದುಕೊಂಡು ಅವಸರವಸರವಾಗಿ ಅನಿಲ ನಿವಾಸಕ್ಕೆ ಬಂದಳು.

"ಮಂಜುಳಾ. ಅನಿಲ್ ಮನೆಯಲ್ಲಿದ್ದಾರೆಯೆ ?"

ಬಂದವಳೇ ಗಾಬರಿಯಿಂದ ಕೇಳಿದಳು.

ಮಂಜುಳಾ ಕೆಳಗಿನ ಹುಗುಲಿಯಲ್ಲಿ ಕುರ್ಚಿಯ ಮೇಲೆ ಕುಳಿತು ಅನನ್ಯ ಮನಸ್ಕಳಾಗಿ ಯಾವುದೋ ಪುಸ್ತಕವನ್ನು ನೋಡುತ್ತಿದ್ದಳು.

"ಮಹಡಿಯ ಮೇಲಿದ್ದಾರೆ ? ಏನು ಸಮಾಚಾರ ?"

ಅವಳ ಮಾತಿಗೆ ಉತ್ತರವನ್ನು ಕೊಡದೇ ಕನಕಂ ಮೆಟ್ಟಲುಗಳ ಕಡೆಗೆ ಓಡಿಹೋದಳು.

ಕನಕಂಳ ಮುಖದಲ್ಲಿ ಕಂಡು ಬರುತ್ತಿದ್ದ ಭಾವ, ಅವಳ ಗಾಬರಿಗಳನ್ನು ನೋಡಿದ ಮಂಜುಳೆಗೆ ಏನೋ ಅನಾಹುತವು ನಡೆದಿದೆ ಎಂದು ಗೊತ್ತಾಯಿತು. ಅದನ್ನು ತಿಳಿದುಕೊಳ್ಳಬೇಕೆಂಬ ಆಸಕ್ತಿಯಿಂದ ತಾನೂ ಹೋದಳು.

ಎರಡು ಮೆಟ್ಟಲು ಹತ್ತಿದ್ದವಳಿಗೆ ತಾನು ಹೋದರೆ ಅವರಿಬ್ಬರಿಗೂ ಸಂಕೋಚವಾಗಬಹುದೆಂದು ತೋರಿತು. ಪುನಃ ಮೊದಲು ಕುಳಿತಿದ್ದೆಡೆಯೇ ಕುಳಿತು, ಗಲ್ಲದ ಮೇಲೆ ಕೈಯಿಟ್ಟುಕೊಂಡು ಆಲೋಚನಾಪರಳಾದಳು.

ಕನಕಂ ಅನಿಲನ ಕೋಣೆಯ ಬಾಗಿಲು-ತೆಗೆದುಕೊಂಡು ಪ್ರವೇಶ ಮಾಡಿದಳು.

ಕೋಣೆಯ ಕಿಟಕಿ ಬಾಗಿಲುಗಳನ್ನೆಲ್ಲಾ ಹಾಕಿತ್ತು. ಹೊಗೆಸೊಪ್ಪಿನ ಹೊಗೆಯು ತುಂಬಿಕೊಂಡಿತ್ತು ಮಂಚದ ಕೆಳಗೂ ಟೀಪಾಯಿಯ ಮೇಲೆಯೂ ಸಿಗರೇಟಿನ ತುಂಡುಗಳು ಬಿದ್ದಿದ್ದವು.

ಅನಿಲ ಕೆಮ್ಮುತ್ತಾ ಗ್ಲಾಸಿಗೆ ವಿಸ್ಕಿಯನ್ನು ಬಗ್ಗಿಸುತ್ತಿದ್ದ.

"ಸದಾ ಕುಡಿದು ಜ್ಞಾನವಿಲ್ಲದೇ ಬಿದ್ದಿರುತ್ತೀರಿ. ಎಲ್ಲಿ ಏನಾಗುತ್ತಿದೆ ಎಂಬುದನ್ನು ನೋಡುವುದೇ ಇಲ್ಲ."

ಕನಕಂ ಬಾಟಲು, ಗ್ಲಾಸುಗಳನ್ನು ಅವನ ಕೈಯಿಂದ ಕಿತ್ತು ಕೆಳಗಿಟ್ಟು ಹೇಳಿದಳು.

ಅವಳನ್ನು ನೋಡಿದ ಅನಿಲನ ಮುಖ ಪ್ರಸನ್ನವಾಯಿತು.

" ಏನು ಕನಕ, ಸಮಾಚಾರವೇನು ?"

ಅವಳು ಕೈಯಲ್ಲಿದ್ದ ಪತ್ರಿಕೆಯನ್ನು ಅವನ ಮುಂದೆ ಹಾಕಿದಳು.

ಅನಿಲ ತೆಗೆದುಕೊಂಡು ನೋಡಿದ. ತನಗೆ ಸಂಬಂಧ ಪಟ್ಟ ವಿಷಯ ಪತ್ರಿಕೆಯಲ್ಲಿ ಕಂಡು ಬರಲಿಲ್ಲ.

" ಏನಿದೆ ? ನೀನೇ ಓದಿ ಹೇಳು "

ಕನಕಂ ಓದಿ ಹೇಳಿದಳು.

ಬೊಂಬಾಯಿ ಬಂದರಿನಲ್ಲಿ ರಫ್ತಿಗೆ ಸಿದ್ಧವಾಗಿದ್ದ ಕೆಲವು ಪೆಟ್ಟಿಗೆಗಳನ್ನು ಎಕ್ಸೈಜ್ ಪೋಲೀಸರು ಹಿಡಿದಿದ್ದರು. ಅವುಗಳಲ್ಲಿ ಎರಡು ಲಕ್ಷ ರೂಪಾಯಿ ಬೆಲೆ ಬಾಳುವ ಓಪಿಯಂ ಸಿಕ್ಕಿತ್ತು. ಅವು ಅರಸು ರತ್ನೆ ಎಂಬ ಸಿಲೋನೀ ಹೆಂಗಸಿನದೆಂದು ಗುರುತಿಸಿ, ಅವಳನ್ನು ದಸ್ತಗಿರಿ ಮಾಡಿದ್ದರು. ವಿಚಾರಣೆ ನಡೆದು ಅವಳು ಇಪ್ಪತ್ತೈದು ಸಾವಿರ ರೂಪಾಯಿ ಜುಲ್ಮಾನೆ ಕೊಡಬೇಕೆಂದೂ, ಇಲ್ಲದಿದ್ದರೆ ಮೂರು ತಿಂಗಳು ಕಾರಾಗೃಹ ವಾಸ ಮಾಡಬೇಕೆಂದೂ ತೀರ್ಪಾಗಿತ್ತು. ಅರಸುರತ್ನೆ ತನ್ನ ಬಳಿ ಹಣವಿಲ್ಲವೆಂದು ಕೋರ್ಟಿನಲ್ಲಿ ಹೇಳಿದ್ದಳು.

ಅನಿಲನ ಮುಖ ಪೆಚ್ಚಾಯಿತು.

ಇದುವರೆವಿಗೆ ಅವನಿಗೆ ಅರಸುರತ್ನೆ ಓಪಿಯಂ ವ್ಯಾಪಾರ ಮಾಡುತ್ತಿದ್ದಾಳೆಂದು ಗೊತ್ತಿರಲಿಲ್ಲ.

ಕುಡಿತದ ಪ್ರ್ರಕವು ಒಮ್ಮೆಗೇ ಇಳಿದು ಹೋಗಿದ್ದ ಅವನಿಗೆ ತನ್ನ ಮಂಕುತನವು ಸ್ಪಷ್ಟವಾಯಿತು. ಅರಸುರತ್ನೆ ವಿಪರೀತ ಹಣ ಖರ್ಚು ಮಾಡುತ್ತಿದ್ದಳು. ಬಗೆ ಬಗೆಯ ಜನರು ಬಂದ ಅವಳನ್ನು ನೋಡುತ್ತಿದ್ದರು. ಯಾವಾಗಲೂ ಅವಳ ಪೆಟ್ಟಿಗೆ, ಸಾಮಾನುಗಳಲ್ಲಿ ಕರ್ಪೂರದ ವಾಸನೆಯು ಬರುತ್ತಿತ್ತು.

ಆ ದಿನ ರಾತ್ರಿ ಹೋಟೆಲಿನಲ್ಲಿ ಅನೇಕ ಸೂಟು ಕೇಸುಗಳನ್ನು ನೋಡಿದ್ದ. ಆಸಕ್ತಿಯಿಂದ ನೋಡಲು ಹೋದರೆ ಪ್ರತಿರೋಧ ಮಾಡಿದಳು. ಕೈಯಲ್ಲಿರುವುದನ್ನು ಕಿತ್ತುಕೊಂಡು ಹಠ ಮಾಡುವ ಮಗುವಿಗೆ ಮಿಠಾಯಿ ಕೊಡುವಂತೆ ಟ್ರೈಬಲ್ ಕಾಸ್ಟ್ಯೂಂ ತೋರಿಸಿದ್ದಳು.

"ಈಗೇನು ಮಾಡುತ್ತೀರಿ?"

ಕನಕಂ–ಅನಿಲನ ಮನಸ್ಸಿಗೆ ಬರುತ್ತಿದ್ದ ಪ್ರಶ್ನೆಯನ್ನೇ ಹಾಕಿದಳು.

"ಸರ್ವಸ್ವವೂ ಹೋದರೂ ಅರಸುರತ್ನೆಯನ್ನು ಬಿಡಿಸಿಕೊಳ್ಳಬೇಕು, ಕನಕಂ."

ಅನಿಲ ಇದ್ದಕ್ಕಿದ್ದಂತೆಯೇ ಹೊರಗೆ ಹೊರಡಲು ಅನುವಾದ. ಅಷ್ಟು ಹೊತ್ತಿಗೆ ಮೇಲೆ ಬಂದ ಮಂಜುಳಾ ಹಾಗೆ ಹೊರಡಬಾರದೆಂದು ಹಠಹಿಡಿದಳು. ಷೇವ್ ಮಾಡಿ, ಸ್ನಾನ ಮಾಡಿ, ಬೇರೆಯ ಬಟ್ಟೆಗಳನ್ನು ಹಾಕಿಕೊಂಡು ಹೊರಟ. ಕನಕಂ ಸಹ ಅವನೊಡನೆ ಹೋದಳು.

ಕಾರಿನಲ್ಲಿ ಮದರಾಸ್ ಕಡೆಗೆ ಹೋಗುತ್ತಾ ಅನಿಲ ಏನು ಮಾಡುವುದೆಂದು ಯೋಚಿಸ ತೊಡಗಿದ. ಬ್ಯಾಂಕಿನಲ್ಲಿ ಮೂರು ನಾಲ್ಕು ಸಾವಿರಗಳಿಗಿಂತಲೂ ಹೆಚ್ಚಾಗಿರಲಿಲ್ಲ. ಇನ್ನೆಲ್ಲಿಯೂ ದುಡ್ಡು ಹುಟ್ಟುವುದಿಲ್ಲ. ಏನು ಮಾಡುವುದು ? ಎಲ್ಲಿಂದ ಹಣ ಎತ್ತುವುದು?

ಬ್ಯಾಂಕಿಗೆ ಹೋಗಿ ಮನೆಯ ಮೇಲೆಯೇ ಇನ್ನೂ ಇಪ್ಪತ್ತೈದು ಸಾವಿರ ರೂಪಾಯಿ ತೆಗೆದುಕೊಳ್ಳ ಬೇಕೆಂದುಕೊಂಡ.

ಅಂದುಕೊಂಡಂತೆಯೇ ಬ್ಯಾಂಕ್ ಮೇನೇಜರನ್ನು ಹೋಗಿ ಕೇಳಿದ. ಅವರು ಒಪ್ಪಲಿಲ್ಲ.

ಅನಿಲ, ಕನಕಂ ಇಬ್ಬರೂ ಹೋಗಿ ವೆಂಕಪ್ಪಯ್ಯನವರನ್ನು ಕಂಡು

ಏನಾದರೂ ಮಾಡಬೇಕೆಂದು ಹೇಳಿದರು. ಅವನೂ ಹೋಗಿ, ಪೈಗಳನ್ನು ನೋಡಿ, ತಮ್ಮ ಕಚೇರಿಗೆ ಬಂದು ಕುಳಿತುಕೊಂಡು–

"ಅನಿಲ್! ಆ ಮ್ಯಾನೇಜರು ಸಾಧ್ಯವಿಲ್ಲವೆಂದು ಕಡಿಮುಷ್ಟಿ ಹಿಡಿದು ಕುಳಿತಿದ್ದಾನೆ. ಏನು ಮಾಡುವುದು?"

"ನನಗೇನೂ ತೋರುವುದಿಲ್ಲ. ಈ ಮನೆಯನ್ನು ಮಾರಿಸಿ ಬಿಡಿ. ಬ್ಯಾಂಕಿನವರ ಹಣ ಅವರಿಗೆ ಕೊಟ್ಟರೆ ಇಪ್ಪತ್ತೈದಾದರೂ ಬರುತ್ತದೆ"

"ಅದು ಅಷ್ಟು ಸುಲಭವಲ್ಲ, ಅನಿಲ್. ಮನೆ ಮಾರುವುದಕ್ಕೆ ಎರಡು ಮೂರು ತಿಂಗಳುಗಳಾಗುತ್ತವೆ. ಆಮೇಲೆ ಹಣ ಬಂದರೆ ತಾನೇ ಪ್ರಯೋಜನ ವೇನು?

ನಿರಾಶೆಯಿಂದ ವೆಂಕಪ್ಪಯ್ಯ ಹೇಳಿದರು.

" ಹಾಗಾದರೇನು ಮಾಡಲಿ ? ಅರಸುರತ್ನೆ ಕಾರಾಗೃಹಕ್ಕೆ ಹೋದ ನಂತರ ನಾನು ಬದುಕಿದ್ದು ಫಲವೇನು ?"

ಕರುಣಾರ್ದ್ರವಾದ ಧ್ವನಿಯಿಂದ ಹೇಳಿದ ಮಾತು ವೆಂಕಪ್ಪಯ್ಯನ ಮೇಲೆ ಬಹಳ ಪರಿಣಾಮವನ್ನುಂಟು ಮಾಡಿತು.

ಮಾರನೆಯ ದಿನ ಪುನಃ ಪೈಗಳನ್ನು ನೋಡುವುದಾಗಿ ಹೇಳಿದರು.

ಅನಿಲ ಕನಕಂಳನ್ನು ಬಿಟ್ಟು ಮನೆಗೆ ಬಂದ. ಊಟ ಮಾಡಿ ಹೋಗಿ ಮಲಗಿ ಕೊಂಡ. ಅವನಾ ದಿನ ಮದ್ಯವನ್ನು ಮುಟ್ಟದಿದ್ದುದನ್ನು ನೋಡಿ ಮಂಜುಳೆಗೆ ಸಂತೋಷವಾಯಿತು.

ಸಾಯಂಕಾಲ ಕಾಫಿಯನ್ನು ಕೊಡುವುದಕ್ಕೆ ಹೋದ ಮಂಜುಳೆಯು ಅರಸುರತ್ನೆಯ ವಿಷಯ ವಿಚಾರಿಸಿದಳು.

ಅವಳು ತನಗೆ ಬಹಳ ಬೇಕಾದವಳೆಂದೂ, ತಾನು ಈ ಸ್ಥಿತಿಗೆ ಬರಲು ಅವಳೇ ಕಾರಣಳೆಂದೂ ಅನಿಲ ಸೂಕ್ಷ್ಮವಾಗಿ ತಿಳಿಸಿದ.

ಮಾರನೆಯ ದಿನ ಪೈಗಳನ್ನು ಭೇಟಿ ಮಾಡಿಕೊಂಡು ಬಂದ ವೆಂಕಪ್ಪಯ್ಯನವರ ಮುಖದಲ್ಲಿ ಕಳೆಯು ಕಂಡಿತು.

" ಹೆಡ್ಡಾಫೀಸಿಗೆ ಶಿಫಾರಸು ಮಾಡಿ ಕಾಗದ ಬರೆಯುವುದಾಗಿಯೂ ಉತ್ತರ ಬಂದನಂತರ ನೋಡೋಣವೆಂದು ಹೇಳುತ್ತಾರೆ "

ಬಂದವರೇ ಅವರು ಹೇಳಿದರು.

ಒಂದೊಂದು ಗಳಿಗೆಯೂ ಒಂದೊಂದು ಯುಗವಾಗಿ ಅನಿಲನಿಗೆ ತೋರಿದರೂ, ವೆಂಕಪ್ಪಯ್ಯನವರ ಕೆಲಸವು ಫಲಿಸಲು ಐದಾರು ದಿನಗಳಾದುವು.

ಬ್ಯಾಂಕಿನಲ್ಲಿ ಹಣ ಸಿಕ್ಕಿದೊಡನೆಯೇ ಬೊಂಬಾಯಿನ ಮೇಲೆ ಡ್ರಾಫ್ಟ್ ತೆಗೆದುಕೊಂಡು, ಮದರಾಸಿನಿಂದ ವಕೀಲ ಶಿವರಾಮಯ್ಯನವರನ್ನೂ ಕರೆದುಕೊಂಡು, ಬೊಂಬಾಯಿಗೆ ಪ್ರಯಾಣ ಮಾಡಿದ.

ಬೊಂಬಾಯಿ ಸೇರುತ್ತಲೇ ಕೋರ್ಟಿಗೆ ಹಣ ಕಟ್ಟಿ ಬಿಡುಗಡೆಯ ಆರ್ಡರ್ ತೆಗೆದುಕೊಂಡೇ ಅರಸುರತ್ನಿಯನ್ನು ಹೋಗಿ ನೋಡಬೇಕೆಂದು ಅನಿಲನಿಗೆ ಇಷ್ಟವಿತ್ತು.

ಆದರೆ ಶಿವರಾಮಯ್ಯನವರು ಅದಕ್ಕೆ ಒಪ್ಪಲಿಲ್ಲ. ಅರಸುರತ್ನಿಯನ್ನು ಕಂಡು ಮಾತನಾಡದೇ ಅದೊಂದನ್ನೂ ಮಾಡಕೂಡದೆಂದೂ ಹಾಗೆ ಮಾಡುವುದಾದರೆ ತಾವು ವಾಪ್ಸು ಹೊರಟು ಹೋಗುವುದಾಗಿಯೂ ಖಂಡಿತವಾಗಿ ಹೇಳಿಬಿಟ್ಟರು.

ಶಿವರಾಮಯ್ಯನವರು ಅದೇ ದಿನ ಜೈಲಿಗೆ ಹೋಗಿ ಅರಸುರತ್ನಿಯನ್ನು ನೋಡಲು ಪ್ರಯತ್ನ ಮಾಡಿದರು.

ಮಾರನೆಯ ದಿನ ಇವರಿಗೆ ಭೇಟಿಯು ಸಿಕ್ಕಿತು.

ಅರಸುರತ್ನಿಯು ದುಃಖಿನಿಯಾಗಿರಲಿಲ್ಲ. ಮಾಮೂಲಿನಂತೆಯೇ ಇದ್ದಳು.

" ಏನು ಬಂದೆ ?"

ಅನಿಲನನ್ನು ನೋಡಿ ನಗುತ್ತಾ ಕೇಳಿದಳು.

ಅವನು ಮಾತನಾಡಲು ಹೋಗಿ ತೊದಲುತ್ತಾ ಮಾತು ಹೊರಡಲಿಲ್ಲ.

ಶಿವರಾಮಯ್ಯನವರು ಇಪ್ಪತ್ತೈದು ಸಾವಿರ ತಂದಿರುವುದಾಗಿಯೂ ಅವಳನ್ನು ಬಿಡಿಸಿಕೊಂಡು ಹೋಗಲು ಬಂದಿರುವುದಾಗಿಯೂ ಹೇಳಿದರು.

" ನಾನು ಒಪ್ಪಿಕೊಳ್ಳುವುದಿಲ್ಲ. ನೀವು ಹಣ ಖರ್ಚು ಮಾಡಬೇಡಿ. ವಾಪ್ಸು ಹೊರಟು ಹೋಗಿ "

ಅನಿಲ ಒಪ್ಪಿಕೊಳ್ಳಬೇಕೆಂದು ಅಂಗಲಾಚಿದನು. ಅಳುತ್ತಾ ಕೇಳಿಕೊಂಡನು.

ಅರಸುರತ್ನೆ ಒಪ್ಪಲಿಲ್ಲ. ಅನಿಲನನ್ನು ಸಮಾಧಾನ ಪಡಿಸುತ್ತಾ—

"ಅನಿಲಾ. ನಿನಗೆ ಗೊತ್ತಿಲ್ಲ. ಈ ವ್ಯಾಪಾರವೇ ಹೀಗೆ. ಇದುವರೆಗೆ ಎಷ್ಟೋ ಬಾರಿ ಸರಕು ಹಿಡಿದರು. ಈ ಬಾರಿ ಅಕಸ್ಮಾತ್ ನನ್ನನ್ನು ಹಿಡಿದರು. ಈಗಲೇ ಇಪ್ಪತ್ತು ದಿನ ಆಗಿ ಹೋಯಿತು. ಎರಡು ತಿಂಗಳುಗಳಿಗೆ ಇಪ್ಪತ್ತೈದು ಸಾವಿರ ಯಾಕೆ ಖರ್ಚು ಮಾಡಬೇಕು. ನನ್ನ ಹತ್ತಿರ ಈಗ ಹಣವಿಲ್ಲ. ಹೊರಗೆ ಬಂದನಂತರ ಯಾತಕ್ಕಾದರೂ ಹಣಬೇಕಾಗುತ್ತದೆ. ಇದನ್ನು ಖರ್ಚು ಮಾಡದೇ ಇಟ್ಟುಕೊಂಡಿರು. ಮುಂದೆ ನನಗೇ ಬೇಕಾಗಬಹುದು"

ಆ ಮಾತು ಹೇಳಿದನಂತರ ಅನಿಲನ ಬಾಯಿ ಕಟ್ಟಿ ಹೋಯಿತು.

ಅಷ್ಟು ಹೊತ್ತಿಗೆ ಐದು ನಿಮಿಷವಾಯಿತು. ಅರಸುರತ್ನೆ ಒಳಗೆ ಹೊರಟು ಹೋಗಬೇಕಾಗಿತ್ತು.

ದೀನನಾಗಿ ನಿಂತಿದ್ದವನನ್ನು ನೋಡಿ--

" ಇನ್ನೇನು, ಅನಿಲ "

" ನೀವು ಬಿಡುಗಡೆಯಾದ ಕೂಡಲೇ ನನ್ನನ್ನು ಬಂದು ನೋಡುತ್ತೀರಾ ?"

" ಖಂಡಿತ ಬಂದು ನೋಡುತ್ತೇನೆ, ಅನಿಲ. ನೀನು ಹೋಗು. ನನಗೆ ಸಂತೋಷವಾಗುತ್ತದೆಂದು ಇಪ್ಪತ್ತೈದು ಸಾವಿರ ಸರ್ಕಾರದ ಬಾಯಿಗಿಡ ಬೇಡ. ಈಗಲೇ ಎರಡು ಲಕ್ಷ ಅವರ ಬಾಯಿಗೆ ತುಕ್ಕಿದ್ದಾಗಿದೆ "

ಎಂದು ಹೇಳಿ ಒಳಗೆ ಹೊರಟು ಹೋದಳು.

ಅನಿಲ ಮದರಾಸಿಗೆ ವಾಪ್ಸು ಬಂದ.

ಅಂದಿನಿಂದ ಪರಿಸ್ಥಿತಿಯು ಮತ್ತಷ್ಟು ಕೆಡುತ್ತಾ ಬಂದಿತು.

ಬೆಳಗಾಗ ಎದ್ದವನು ಮನಸ್ಸು ಬಂದರೆ ಮುಖ ಕ್ಷೌರ ಮಾಡಿಕೊಂಡು ಸ್ನಾನಮಾಡುವನು. ಏನಾದರೂ ಸ್ವಲ್ಪ ತಿಂಡಿಯನ್ನು ತಿಂದು ಕುಡಿಯುವುದಕ್ಕೆ ಆರಂಭಿಸುವನು. ರಾತ್ರಿ ನಿದ್ದೆ ಬಂದನಂತರ ವಿಧಿ ಇಲ್ಲದೇ ಕುಡಿತಕ್ಕೆ ಕೆಲವು ಗಂಟೆಗಳ ಕಾಲ ವಿಶ್ರಾಂತಿ ಸಿಕ್ಕುವುದು.

ಅನೇಕ ದಿನಗಳು ಹಾಸಿಗೆಯ ಮೇಲೆ ಕಾಫೀ ತೆಗೆದುಕೊಂಡವನು

ಮೇಲೆ ಏಳುತ್ತಲೇ ಇರಲಿಲ್ಲ. ಅಲ್ಲಿಯೇ ಕುಡಿಯುವುದನ್ನು ಆರಂಭಿಸುವನು. ಹಸಿವಾದರೆ ಏನಾದರೂ ತಿನ್ನುವನು. ಹಾಗೆಯೇ ದಿನವು ಕಳೆದು ರಾತ್ರಿಯಾಗುವುದು.

ಮಂಜುಳೆಯು ಮೊದಲಿನಂತೆಯೇ ಅವನ ಕೋಣೆಗೆ ಬರುವಳು. ಅಲ್ಲಿನ ಸಾಮಾಗ್ರಿಗಳನ್ನು ಸರಿಪಡಿಸಿಡುವಳು. ಧೂಳು ಹೊಡೆಯುವಳು. ಜವಾನರು ಕೋಣೆಗಳನ್ನು ಗುಡಿಸಲು ಅಣಿಮಾಡುವಳು. ಟೀಪಾಯಿಯನ್ನು ಸರಿಮಾಡಿಡುವಳು. ಆಷ್ ಟ್ರೇಯನ್ನು ಶುದ್ಧಿಮಾಡಿ, ಗ್ಲಾಸುಗಳನ್ನೂ, ಕುಡಿಯುವ ನೀರಿನ ಗಾಜು ಹೂಜಾವನ್ನೂ ತೊಳೆದು ನೀರು ತಂದಿಡುವಳು.

ಎರಡು ಮೂರು ದಿನ ಅನಿಲ ಸ್ನಾನವನ್ನೇ ಮಾಡಿರುವುದಿಲ್ಲ. ಆಗ ಮಂಜುಳೆಯು ಬಂದು ಅವನನ್ನು ಸ್ನಾನಕ್ಕೆ ಎಬ್ಬಿಸುವಳು.

ಅವಳ ಬಲಾತ್ಕಾರದಿಂದಲೇ ಏನಾದರೂ ತಿಂಡಿಯನ್ನು ತಿಂದರೆ ತಿನ್ನುವನು.

ರಾತ್ರಿಯ ಹೊತ್ತು ಮಂಜುಳೆಯು ಬಂದು, ಬಾಟಲು ಗ್ಲಾಸುಗಳನ್ನು ಸಿಗರೇಟು ಟಿನ್ ಅನ್ನೂ ತೆಗೆದು ದೂರದಲ್ಲಿಟ್ಟು, ತಟ್ಟೆಯಲ್ಲಿ ಕಲಸಿ ತಂದ ಅನ್ನವನ್ನು ತಿನ್ನುವಂತೆ ಹೇಳುವಳು. ಅನಂತರ ಹಾಲು ಕುಡಿಸಿ ತಾನು ಹೋಗಿ ಮಲಗಿಕೊಳ್ಳುತ್ತಿದ್ದಳು.

ಎಷ್ಟೋ ಬಾರಿ ಅವನಿಗೆರಡು ಹಿತವಚನಗಳನ್ನು ಹೇಳಬೇಕೆಂದವಳಿಗೆ ತೋರುವುದು. ಹೇಳಲು ಧೈರ್ಯವು ಬರುವುದಿಲ್ಲ.

ಎರಡು ಬಾರಿ ಮನಸ್ಸನ್ನು ಗಟ್ಟಿಮಾಡಿಕೊಂಡು ಅವನಿಗೆ ಏನೋ ಹೇಳುವುದಕ್ಕೆ ಹೋದಳು.

ಆ ಎರಡು ಬಾರಿಯೂ ಅವನು ನಕ್ಕು ಬಿಟ್ಟಿದ್ದ.

ಗೋದಮ್ಮನಿಗೆ ತಮ್ಮನ ತರಹವು ಸರಿಬೀಳಲಿಲ್ಲ. ಅವನ ಪತನವು ಅನಿವಾರ್ಯವೆಂದು ಆಕೆಗೆ ತೋರುತ್ತಿತ್ತು. ಏನಾದರೂ ಅವನನ್ನು ಸರಿಪಡಿಸುವುದು ಅಸಾಧ್ಯವೆಂದು ಆಕೆಗೆ ಮನದಟ್ಟಾಗಿತ್ತು.

ಆಕೆ ಆಗಾಗ ಅಚ್ಯುತನೊಂದಿಗೂ ಮಂಜುಳೆಯೊಂದಿಗೂ ನಾವು ಈ ಮನೆಯನ್ನು ಬಿಟ್ಟು ಹೊರಟು ಹೋಗಬೇಕೆಂದು ಹೇಳುತ್ತಿದ್ದಳು.

" ಅವರು ಕಷ್ಟಕ್ಕೆ ಸಿಕ್ಕಿ ಬಿದ್ದಿರುವಾಗ ಹೀಗೆ ಬಿಟ್ಟು ನಾವೆಲ್ಲರೂ ಹೊರಟು ಹೋದರೆ ಚೆನ್ನಾಗಿರುತ್ತದೆಯೇ ?

ಮಂಜುಳೆಯು ಆ ಮಾತನ್ನು ಆಗೆಲ್ಲಾ ಹೇಳುತ್ತಿದ್ದಳು.

"ಏನೋ ಗ್ರಹಚಾರದಿಂದ ಕಷ್ಟ ಬಂದರೆ ಸರಿ. ಅವನೇ ತಂದು ಕೊಂಡುದಕ್ಕೆ ಯಾರೇನು ಮಾಡುತ್ತಾರೆ ?"

ಎಂದಾಕೆ ಉತ್ತರ ಕೊಡುವಳು.

ಅಚ್ಯುತನಿಗೂ ಅನಿಲನ ತರಹವು ಅಸಹ್ಯವಾಗುವುದು. ತನ್ನ ಹೆಂಡತಿ ಅವನನ್ನು ವಹಿಸಿಕೊಂಡು ಬರುವುದನ್ನು ಕಂಡರೆ ಅವನಿಗಾಗುತ್ತಿರಲಿಲ್ಲ. ಆಗೆಲ್ಲಾ ತನ್ನ ಹೆಂಡತಿ ಯಾಕೆ ಹೀಗೆ ಮಾಡುತ್ತಿದ್ದಾಳೆ ಎನ್ನಿಸುವುದು.

ಒಂದು ಬಾರಿ ಅನಿಲ ಮದರಾಸಿಗೆ ಹೋಗಿದ್ದಾಗ ಎಲ್ಲಿಯೋ ಕಾರು ನಿಲಿಸಿಕೊಂಡು ಕುಡಿಯುತ್ತಿದ್ದ. ಪೋಲೀಸಿನವರು ಅವನನ್ನು ದಸ್ತಗಿರಿ ಮಾಡಿ ಕೇಸು ಹಾಕಿದರು. ಅನಿಲ ಸ್ವಂತ ಮುಚ್ಚಳಿಕೆ ಬರೆದುಕೊಟ್ಟು ಬಂದಿದ್ದ. ಎರಡು ದಿನಗಳನಂತರ ಹದಿನೈದು ರೂ ಪಾ ಯಿ ಜುಲ್ಮಾನೆ ಯಾಯಿತು.

ಆದರೆ ಈ ವಿಷಯವೆಲ್ಲಾ ಪತ್ರಿಕೆಯಲ್ಲಿ ಬಣ್ಣ ಬಣ್ಣವಾಗಿ ಪ್ರಕಟಿಸಲ್ಪಟ್ಟಿತು.

ಆಗ ಮಂಜುಳೆಯೂ ಅವರನ್ನು ತಡೆಯಲಾಗಲಿಲ್ಲ.

ಕೋರ್ಟಿನಿಂದ ಮನೆಗೆ ಬಂದ ಅನಿಲ ಆ ದಿನವೆಲ್ಲಾ ಮಹಡಿಯಿಂದ ಕೆಳಗಿಳಿಯಲೇ ಇಲ್ಲ. ಮಾರನೆಯ ದಿನವಾದರೂ ಕೆಳಗೆ ಬರುತ್ತಾನೆಯೋ ಎಂದು ಗೋದಮ್ಮ ನೋಡಿದಳು. ಆ ದಿನವೂ ಬರಲಿಲ್ಲ. ಆ ದಿನ ಸಾಯಂಕಾಲ ಏಳು ಏಳೂವರೆ ಗಂಟೆಗೆ ಆಕೆ ಅಚ್ಯುತನನ್ನೂ ಕರೆದು ಕೊಂಡು ಅನಿಲನ ಕೋಣೆಗೆ ಹೋದಳು.

ಅನಿಲ ಹಾಸಿಗೆಯ ಮೇಲೆ ಒರಗಿಕೊಂಡು ಕುಳಿತಿದ್ದ. ಪಕ್ಕದಲ್ಲಿ ಟೀಪಾಯಿಯ ಮೇಲೆ ವಿಸ್ಕಿಯ ಬಾಟಲು ಗ್ಲಾಸುಗಳಿದ್ದವು. ಅಕ್ಕ ಬಂದು ದರಿಂದ ಅವನಲ್ಲಿ ಯಾವ ಬಗೆಯಾದ ಬದಲಾವಣೆಯೂ ಆಗಲಿಲ್ಲ.

ಅದು ಗೋದಮ್ಮನ ಕೋಪವನ್ನು ಮತ್ತಷ್ಟು ಕೆರಳಿಸಿತು.

"ನಮಗೆ ನಿನ್ನ ತರಹ ಸಂಬಳವುದಿಲ್ಲ. ನಾವು ನಾಳೆಯ ದಿನ ಬೆಳಗಾಗ ಊರಿಗೆ ಹೋಗಬೇಕೆಂದಿದ್ದೇವೆ"

ಎಂದು ಸ್ಪಷ್ಟವಾಗಿ ಅವನಿಗೆ ಹೇಳಿದಳು.

"ನಿಮ್ಮಿಷ್ಟ. ಹೋಗಬೇಕಾದರೆ ಹೋಗಿ"

ಅನಿಲ ಅದರಷ್ಟೇ ಸ್ಪಷ್ಟವಾಗಿ ಉತ್ತರ ಕೊಟ್ಟ.

ಗೋದಮ್ಮ ಮಹಡಿಯೇ ಬಿದ್ದು ಹೋಗುವುದೋ ಎಂಬಂತೆ ಧುಮು ಗುಟ್ಟುತ್ತಾ ಅಲ್ಲಿಂದ ಹೊರಟು ಹೋದರು. ಅಚ್ಯುತನೂ ಅವರನ್ನು ಅನುಸರಿಸಿದನು.

ಆ ದಿನ ರಾತ್ರಿ ಮಾಮೂಲಿನಂತೆ ಮಂಜುಳ ತಟ್ಟೆಯಲ್ಲಿ ಅನ್ನವನ್ನು ಕಲಿಸಿಟ್ಟು ಕೊಂಡು ಬಂದಳು. ಅನಿಲ ಅವಳೊಡನೆ ಮಾತನಾಡುತ್ತಾ ಕುಳಿತುಕೊಂಡು ತಿಂದ. ಸಾಯಂಕಾಲ ಗಂಡನೂ ಗೋದಕ್ಕನೂ ಮಾತ ನಾಡಿಕೊಂಡು ಬಂದ ವಿಷಯ ಪ್ರಸ್ತಾಪಿಸ ಬಹುದೆಂದು ಅವಳು ನಿರೀಕ್ಷಿ ಸಿದಳು.

ಆದರೆ ಅವನದೊಂದನ್ನೂ ಮಾತನಾಡಲಿಲ್ಲ.

ಅವರು ಬರುವ ಅಥವಾ ಹೋಗುವ ವಿಷಯದಲ್ಲಿಯಂತೂ ಆಸಕ್ತಿ ಯಿಲ್ಲ. ತನ್ನ ವಿಷಯದಲ್ಲಿಯೂ ಆಸಕ್ತಿಯಿಲ್ಲವೇ? ಕಾದು ನೋಡಿದಳು. ಅವನಿಗೆ ಯಾವುದರಲ್ಲಿಯೂ ಆಸಕ್ತಿ ಇಲ್ಲವೆಂಬಂತೆಯೇ ಕಂಡಿತು.

"ಅಕ್ಕ ಮಂಡ್ಯಕ್ಕೆ ಹೋಗಬೇಕೆಂದು ಹಟ ಹಿಡಿದು ಬಿಟ್ಟಿದಾರೆ."

ಮಂಜುಳ ಮೆಲ್ಲನೆ ಮಾತನ್ನು ಮೊದಲು ಮಾಡಿದಳು.

"ಈಗ ಬಂದು ಹೇಳಿ ಹೋದಳು."

"ನೀವೊಂದು ಮಾತು ಹೇಳಿದರೆ ಅವರು ನಿಲ್ಲಬಹುದು."

ಅದಕ್ಕುತ್ತರವಾಗಿ ಅನಿಲ ನಕ್ಕ !

"ಮಾತು ಬಂದಾಗಲೆಲ್ಲಾ ನಕ್ಕು ಬಿಡುತ್ತೀರಿ. ನೋಡಿದರೆ ಹೊಟ್ಟೆ ಯಲ್ಲಿ ಬೆಂಕಿ ಬಿದ್ದ ಹಾಗಾಗುತ್ತದೆ. ನೀವು ಇದೇ ರೀತಿಯಾಗಿದ್ದರೆ ಏನು ಗತಿ ?"

" ——— "

"ಮಾತನಾಡಿ. ನೀವು ಮೂರು ಹೊತ್ತೂ ಕುಡಿದಿರುತ್ತೀರಿ. ಇನ್ನು ಮೇಲೆಯಾದರೂ ಸ್ವಲ್ಪ ಮನಸ್ಸಿಗೆ ತಂದುಕೊಳ್ಳದಿದ್ದರೆ ಹೇಗೆ?"

"ಮನಸ್ಸಿಗೆ ತಂದುಕೊಂಡು ಆಗುವುದೇನು, ಮಂಜುಳಾ. ಎಣ್ಣೆ ಮುಗಿದು ಬತ್ತಿ ಉರಿಯುತ್ತಿರುವಂತೆ ಬದುಕಿದ್ದೇನೆ. ಅದು ಉರಿದು ಹೋಗುವುದನ್ನೇ ಕಾಯುತ್ತಿದ್ದೇನೆ"

ಆ ಮಾತನ್ನು ಕೇಳಿ ಮಂಜುಳೆಯ ಕಣ್ಣುಗಳಲ್ಲಿ ನೀರು ತುಂಬಿಕೊಂಡವು. ಕೊರಳು ಕಟ್ಟಿ ಬಂದಿತು. ಅವಳು ಸುಮ್ಮನೆ ಕುಳಿತುಕೊಂಡಳು.

ಬಹು ಹೊತ್ತು ಅದೇ ರೀತಿ ಕುಳಿತಿದ್ದಳು.

"ನನ್ನನ್ನು ಮರೆಯುವುದಕ್ಕಾಗಿ ನೀವು ಉರಿದು ಹೋಗಬೇಕಾಗಿಲ್ಲ. ಯಾರು ಏನು ಬೇಕಾದರೂ ಅನ್ನಲಿ. ನಾನು ಮಂಡ್ಯಕ್ಕೆ ಹೋಗುವುದಿಲ್ಲ. ಇಲ್ಲಿಯೇ ಇದ್ದು ಬಿಡುತ್ತೇನೆ. ನನ್ನನ್ನು ನೀವು ಒಪ್ಪಿಸಿಕೊಳ್ಳಿ"

ಅನಿಲ ಅವಳನ್ನು ದುರುಗುಟ್ಟಿಕೊಂಡು ನೋಡಿದ.

ದಿಟ್ಟತನದಿಂದ ಮಂಜುಳೆ ತಲೆ ಎತ್ತಿಕೊಂಡು ಕುಳಿತಿದ್ದಳು.

ಗಳಿಗೆಯ ಕಾಲ ತಡೆದು ಅವನು–

"ಬೇಡ, ಮಂಜುಳ. ಬೇಡ. ನೀನು ದೇವಿ. ಪಾಪಿಯಾದ ನನ್ನಿಂದ ದೂರವಾಗಿ ದೂರವಾಗಿ ಹೊರಟು ಹೋಗು"

ಮಂಜುಳೆಯು ಬಿಕ್ಕಳಿಸುತ್ತ–

"ಇರು ಎಂದರೆ ಇರುತ್ತೇನೆ. ಹೋಗೆಂದರೆ ಹೋಗುತ್ತೇನೆ ಅದು ದೊಡ್ಡದಲ್ಲ. ನೀವು ಕುಡಿತವನ್ನು ಬಿಟ್ಟು ಬಿಡುವುದಾಗಿ ವಾಗ್ದಾನ ಮಾಡಿ. ಪುನಃ ಮೊದಲಿನಂತೆ ಸರಿಹೋಗುವುದಾಗಿ ಭರವಸೆಯನ್ನು ಕೊಡಿ"

"ಒಂದು ಸಲ ಪತನವಾದನಂತರ ಮನುಷ್ಯನು ಮೇಲೇಳುವುದಕ್ಕಾಗುವುದಿಲ್ಲ, ಮಂಜುಳ. ನಾನು ಇನ್ನು ಮೊದಲಿನಂತೆ ಆಗುವುದು ಸಂಭವವೇ ಇಲ್ಲ. ಕೀರ್ತಿಯೂ ನಷ್ಟವಾಗಿದೆ. ಒಂದು ಕಾಸಿಲ್ಲದಂತೆ ಹಣವೆಲ್ಲವೂ ಖರ್ಚಾಗಿ ಹೋಗಿದೆ. ಈ ಮನೆಯನ್ನು ಬ್ಯಾಂಕಿನವರು ಸಾಲಕ್ಕಾಗಿ ಹರಾಜು ಹಾಕಿ ವಶಪಡಿಸಿಕೊಳ್ಳುತ್ತಾರೆ. ಇನ್ನುಳಿದಿರುವುದು ಆ ಎರಡು ಕಾರುಗಳು. ಅವುಗಳನ್ನು ಇಂದಲ್ಲ, ನಾಳೆ ಮಾರಿ ಬಿಡುತ್ತೇನೆ. ಇನ್ನು ಮೊದಲಿನಂತಾಗುತ್ತೇನೆಂದು ನಿನಗೆ ಹೇಗೆ ಭರವಸೆಯನ್ನು ಕೊಡಲಿ? ಕಡೆಗಾಲದಲ್ಲಿ ಈ

ಕುಡಿತದ ಸುಖವಾದರೂ ನನಗಿರಲಿ, ಮಂಜುಳಾ. ಅದನ್ನೂ ಕಿತ್ತುಕೊಳ್ಳಬೇಡ ”

ಈ ಮಾತುಗಳನ್ನು ಆಡಿದ ಅನಿಲ ಗ್ಲಾಸಿಗೆ ವಿಸ್ಕಿಯನ್ನು ಸುರಿದುಕೊಂಡು, ಸ್ವಲ್ಪ ನೀರು ಬಗ್ಗಿಸಿ, ಔಷಧಿ ಕುಡಿಯುವವನಂತೆ ಕಣ್ಣು ಮುಚ್ಚಿಕೊಂಡು ನುಂಗಿದ. ಅನಂತರ ಸಿಗರೇಟು ಹಚ್ಚಿ, ಹೊಗೆ ಎಳೆದುಕೊಂಡು, ಒಂದೇ ಸಮನೆ ಕೆಮ್ಮಲಾರಂಭಿಸಿದ.

ಇನ್ನು ಅಲ್ಲಿ ನಿಂತು ನೋಡುತ್ತಿರಲು ಮಂಜುಳೆಯಿಂದಾಗಲಿಲ್ಲ; ಅವಳು ಸೆರಗಿನಲ್ಲಿ ಮುಖವನ್ನು ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಾ ಅಲ್ಲಿಂದ ಹೊರಗೆ ಹೋದಳು.